# NABH ACCREDITATION FOR AYUSH HOSPITALS



National Accreditation Board for Hospitals & Healthcare Providers (NABH), a constituent board of Quality Council of India, is set up by Govt. of India and the Indian Health Industry to cater the needs of the consumers and setting standards for the progress of the health industry. NABH standards have been acclaimed by both by the Indian health industry and internationally by ISQua (International Society for Quality in Healthcare). NABH is a board member for ISQua and Founder member for ASQua (Asian Society for Quality in Healthcare).

## ACCREDITATION

Accreditation is a public recognition by a National Healthcare Accreditation Body, of the achievement of accreditation quality standards by a organization.

**Under this programme, Accreditation Quality Standards are released for**

- Ayurveda Hospitals
- Homeopathy Hospitals
- Unani Hospitals
- Siddha Hospitals
- Yoga & Naturopathy Hospitals

Developed in Association with Department of AYUSH Ministry of Health and family Welfare.

** Minimum 10 beds essential*

## BENEFITS FOR ACCREDITATION

- Stimulates continuous improvement of the organization.
- Increases visibility of the organization.
- Raises community confidence in the services provided by the organization.
- Helps people chose the right organization for taking services
- Objective system of evaluation and empanelment by Third Parties
- Results in high quality of care and patient safety.
- Patients satisfaction is regularly evaluated.
- Staff are satisfied lot as it provides for continuous learning, good working environment, leadership and above all ownership of service processes




MARK OF EXCELLENCE

NABH ... a Symbol of Quality In Health Care




Dr. Bhawna Gulati, Assistant Director
National Accreditation Board for Hospitals and Health Care Providers (NABH)
c/o QUALITY COUNCIL OF INDIA
Institution of Engineers Building, 2nd Floor, Bahadur Shah Zafar Marg, New Delhi- 110002, India
Tel: +91-11- 23379321, 23379260, 23370567, Web: www.qcin.org, E-mail: bhawna.nabh@qcin.org

# ಹೊಸತು

ನೆಮ್ಮದಿಯ ನಾಳೆ ನಮ್ಮದು


## ಒಳಗೇನಿದೆ ...




ಚಿತ್ರಗಳು : ಸಂಕೇತ್, ಶ್ರೀಹರಿ, ಕಮಲಂ ಅರಸು, ಜಿ. ಎಂ. ಬೊಮ್ನಳ್ಳಿ,
ದೀಪಿಕಾ ವಿಲ್ಸನ್, ರಾಂಚಂದ್ರ ಕೊಪ್ಪಲು, ಬಿ. ವಿ. ಹಿರೇಮಠ, ಗೋಪಿ ಹಿರೇಬೆಟ್ಟು

ಮುಖಚಿತ್ರ : ಮುತ್ತು ಹಾಳಕೇರಿ

ವಿನ್ಯಾಸ : ನವಕರ್ನಾಟಕ ವಿನ್ಯಾಸ

ಕಚೇರಿ ಸಹಕಾರ : ಜಿ. ವಿ. ತೇಜೋವತಿ


## ಈ ತಿಂಗಳು

೧೯೪೭ರ ತರುವಾಯದಲ್ಲಿ ಆಗಲೆ ನಮ್ಮ ದೇಶದಲ್ಲಿ ಭ್ರಷ್ಟಾಚಾರವು ಆತಂಕ ಗೊಳಿಸುವಷ್ಟು ಬೆಳೆದಿತ್ತು. ನೆಹರು ಒಮ್ಮೆ ಕಂಗಾಲಾಗಿ ನುಡಿದಿದ್ದರು, ಭ್ರಷ್ಟರನ್ನು ಅತಿ ಹತ್ತಿರದ ದೀಪದಕಂಬಕ್ಕೆ ನೇಣು ಹಾಕಬೇಕು, ಎಂದು. ಆದರೆ ಈವರೆಗೆ ಭ್ರಷ್ಟರೆಂಬ ಕಾರಣಕ್ಕೆ ಯಾರೂ ನೇಣುಗಂಬ ಏರಿಲ್ಲ. ಪ್ರತಾಪ ಸಿಂಗ್ ಕೈರಾನ್ ಪಂಜಾಬಿನ ಮುಖ್ಯ ಮಂತ್ರಿಯಾಗಿದ್ದಾಗ ಭ್ರಷ್ಟತೆ ವಿಪರೀತವಾಗಿ, ಆತ ಹಾಡುಹಗಲೇ ಗುಂಡಿಗೆ ಬಲಿಯಾದುದನ್ನು ಬಿಟ್ಟರೆ ಭ್ರಷ್ಟರಿಗೆ ಶಿಕ್ಷೆಯಾಗಿರುವುದು ಅತ್ಯಲ್ಪ. ಅದನ್ನು ಗಂಭೀರವಾದ ಸಮಸ್ಯೆಯೆಂದು ಬಹಿರಂಗವಾಗಿ ಒಪ್ಪಿಕೊಳ್ಳಲು ಇಂದಿನ ಪ್ರಧಾನಿ ಸಿದ್ಧರಿಲ್ಲ. ಅತಿಸಾಮಾನ್ಯವೆಂಬಷ್ಟು ಮಟ್ಟಕ್ಕೆ ಭ್ರಷ್ಟತೆ ಬೆಳೆದಿರುವುದು ಅದಕ್ಕೊಂದು ಕಾರಣವಿರಬೇಕು. ಇಲ್ಲದಿದ್ದರೆ ಸ್ವಾತಂತ್ರ್ಯೋತ್ಸವ ಸಂದರ್ಭದ ಭಾಷಣದಲ್ಲಿ ಪ್ರಧಾನಿ ಭ್ರಷ್ಟಾಚಾರದ ಪಿಡುಗನ್ನು ಪ್ರಸ್ತಾಪಿಸಿ ಪರಿಹಾರದ ಮಾರ್ಗವನ್ನು ಸೂಚಿಸಿರುತ್ತಿದ್ದರು. ನೆಹರು ಕಾಲದಲ್ಲೇ ಸಿ. ರಾಜಗೋಪಾಲಾಚಾರಿಯವರು ಭ್ರಷ್ಟಾಚಾರವನ್ನು ತೊಡೆದುಹಾಕುವ ಉದ್ದೇಶದಿಂದ ಒಂದು ಪಕ್ಷವನ್ನು ಸ್ಥಾಪಿಸಿಕೊಂಡರು. ಅವರ 'ಸ್ವತಂತ್ರ ಪಕ್ಷ' ಲೈಸೆನ್ಸ್-ಪರ್ಮಿಟ್ ರಾಜ್ಯವನ್ನು ಕೊನೆಗೊಳಿಸುವುದಾಗಿ ಘೋಷಿಸಿಕೊಂಡಿತ್ತು. ದೊಡ್ಡ ಉದ್ಯಮಿಗಳು, ಭೂಮಾಲೀಕರು, ಮಹಾರಾಜ-ಮಹಾರಾಣಿಯರು ತುಂಬಿದ್ದ ಆ ಪಕ್ಷ ಅನತಿಕಾಲದಲ್ಲೇ ಅಸ್ತಮಿಸಿತು. ಆಮೇಲೆ ಬಂದಿದ್ದು ಜೆ.ಪಿ. ಚಳುವಳಿ. ಅದನ್ನು 'ಎರಡನೆ ಸ್ವಾತಂತ್ರ್ಯ ಹೋರಾಟ' ಎಂದು ಕರೆಯಲಾಗಿತ್ತು. ಪ್ರತಿಯೊಂದು ಹೊಸ ಚಳುವಳಿಗೂ ಅದೇ ಹೆಸರು ಉಳಿದಿದೆ. ಈಗ ಬಾಲಿಶವಾಗಿ 'ಟೀಂ ಅಣ್ಣ' ಎಂದು ಹೆಸರಿಸಲಾದ ಚಳುವಳಿಗೂ ಅದೇ ಹೆಸರು. ಇನ್ನೆಷ್ಟು ''ಎರಡನೆಯ ಸ್ವಾತಂತ್ರ್ಯ ಹೋರಾಟ''ಗಳು ಬೇಕೋ ತಿಳಿಯದು. ಇರಲಿ, ಜೆ.ಪಿ. ಚಳುವಳಿಗೆ ''ಸಂಪೂರ್ಣ ಕ್ರಾಂತಿ'' ಎಂಬ ಹೆಸರಿತ್ತು. ಆದರೆ ಅಸಂಪೂರ್ಣ ವಾಗಿ ಅದು ಕೊನೆಗೊಂಡಿತು. ಆಮೇಲೆ ಬಂದಿದ್ದು ಲೋಕಾಯುಕ್ತ ಪರ್ವ. ಈಗಿನದು ಅಣ್ಣಾ ಹಜಾರೆ ಚಳುವಳಿ. ಅದಕ್ಕೆ 'ನಾಗರಿಕ ಸಮಾಜ' ಎಂಬ ನಾಮಧೇಯ ನೀಡಿದ್ದಾರೆ. ಅಂದರೆ, ಆ ಚಳುವಳಿಯ ಹೊರಗಿರುವವರು ಮತ್ತು ಕೇಂದ್ರ ಸರ್ಕಾರ ಅನಾಗರಿಕ ಎಂಬ ಸೂಚನೆ ಇರಬಹುದು. ಭ್ರಷ್ಟಾಚಾರ ನಿರ್ಮೂಲವಾಗಬೇಕೆಂಬ ಆಶಯ ದೇಶದಲ್ಲಿ ವ್ಯಾಪಕವಾಗಿರುವುದು ಒಂದು ಶುಭ ಸೂಚನೆ, ಸ್ವಾಗತಾರ್ಹ ಬೆಳವಣಿಗೆ. ನಮ್ಮ ದೇಶದ ಆರ್ಥಿಕ ನೀತಿಯು ಜನಪರವಾಗುವವರೆಗೆ ಖಂಡಿತ ಭ್ರಷ್ಟಾಚಾರ ಇಲ್ಲವಾಗುವುದಿಲ್ಲವೆಂಬುದು ಮೂಲಭೂತ ಅಂಶ. ಈಗಿನ ಚಳುವಳಿ ಮೊಟ್ಟಮೊದಲು ಅದನ್ನು ಗುರುತಿಸಬೇಕು. ಯಾರೋ ಒಬ್ಬ ಸಜ್ಜನರು ಬಂದು ಇಡೀ ದೇಶವನ್ನು ಸ್ವಚ್ಛಗೊಳಿಸುತ್ತಾರೆಂದು ನಿರೀಕ್ಷಿಸುವುದು ಹೊಸ ಭ್ರಮೆಯಾಗದಿರಬೇಕಾದರೆ ಇದು ಅತ್ಯಗತ್ಯ. ಕುಖ್ಯಾತ ಯಡಿಯೂರಪ್ಪ ಮುಂತಾದ ಮುತ್ಸದ್ದಿಗಳು ಅಣ್ಣ ಹಜಾರೆಯವರ ಚಳುವಳಿಗೆ ಬೆಂಬಲ ನೀಡುತ್ತಿರುವುದನ್ನು ನೋಡಿದರೆ ಜೆ.ಪಿ. ಚಳುವಳಿ ಕಂಡ ಪರಿಣಾಮ ಮತ್ತೆ ಮರುಕಳಿಸಬಹುದೇ ಎಂಬ ಸಂಶಯ ಬರುತ್ತದೆ.

✳ ✳ ✳

ಕೆಲವು ದಿನಗಳ ಹಿಂದೆ ಅಮೆರಿಕಾದ ಒಬಾಮ ಸರ್ಕಾರ, ಆ ದೇಶ ಎದುರಿಸುತ್ತಿದ್ದ ಸಾಲದ ಬಿಕ್ಕಟ್ಟಿಗೆ ಪರಿಹಾರ ಕಾಣದೆ ಪರದಾಡುತ್ತಿತ್ತು. ಖಾಸಗಿ ಉದ್ಯಮದ ಮತ್ತು ಷೇರುಪೇಟೆಯ ಖದೀಮರ ಪ್ರತಿನಿಧಿಯಂತೆ ಇರುವ ರಿಪಬ್ಲಿಕನ್ ಪಕ್ಷ ಸಹಕರಿಸದೆ ಸೆಡ್ಡು ಹೊಡೆಯುತ್ತಿದ್ದಂತೆಯೇ ಅದೇ ಉದ್ಯಮಪತಿಗಳು ರಾಜಧಾನಿಗೆ ಧಾವಿಸಿ ವಿರೋಧಪಕ್ಷಕ್ಕೆ ಹೆದರದೆ ಅಧ್ಯಕ್ಷರು ತಮ್ಮ ನೀತಿಯನ್ನು ಕಾರ್ಯಗತಗೊಳಿಸಬೇಕೆಂದು ಬೆಂಬಲ ಸೂಚಿಸಿದರು. ಬಿಕ್ಕಟ್ಟು ತಾತ್ಕಾಲಿಕವಾಗಿಯಾದರೂ ಪರಿಹಾರವಾಯ್ತು. ವಿರೋಧ ಪಕ್ಷವೂ ದಾರಿಗೆ ಬಂತು. ಸರ್ಕಾರದೊಂದಿಗೆ, ರಾಜಕೀಯ ವ್ಯಕ್ತಿಗಳೊಂದಿಗೆ ಎಲ್ಲ ಭ್ರಷ್ಟಾಚಾರಗಳಲ್ಲಿಯೂ ಭಾಗಿಗಳಾಗಿರುವ ನಮ್ಮ ಉದ್ಯಮಪತಿಗಳಿಗೆ ಇಂದಿನ ತಮ್ಮದೇ ಪ್ರತಿನಿಧಿಯೆನಿಸುವ ಸರ್ಕಾರಕ್ಕೆ ಮಾರ್ಗದರ್ಶನ ನೀಡುವ ಒಂದಿಷ್ಟು ತಾಕತ್ತೂ ಇಲ್ಲವೇ? ಲೋಕಪಾಲ ಮಸೂದೆಗೆ ಬೆಂಬಲ ಕೊಡದ ಯಾವ ಭ್ರಷ್ಟ ಇದ್ದಾನೆ! ಭ್ರಷ್ಟರಲ್ಲದ ಉದ್ಯಮಪತಿ, ಅಧಿಕಾರಿ, ಮತ್ತು ಬೂರ್ಷ್ವಾ ರಾಜಕಾರಣಿಗಳನ್ನು ಹೇಗೆ ಹುಡುಕುವುದು ? ಪರಿಣಾಮವೆಂದರೆ, ಅಣ್ಣಾ ಹಜಾರೆ ಅವರ ಸವಾಲನ್ನು ಹೇಗೆ ನಿಭಾಯಿಸುವುದು ಎಂದು ಅರಿಯದೆ ಹೆಜ್ಜೆ ಹೆಜ್ಜೆಗೂ ಎಡವುತ್ತಿರುವ ಸರ್ಕಾರ ಹಾಸ್ಯಾಸ್ಪದವಾಗಿದೆ. ಪ್ರಧಾನಿಯ ಸಲಹೆಗಾರರೆಲ್ಲ ಎಲ್ಲಿ ಹೋದರೋ! ಅವರೆಲ್ಲ ವಾಣಿಜ್ಯದ ಪ್ರತಿನಿಧಿಗಳೇ ಆಗಿದ್ದಾರೆ. ಅವರಿಗೆ ಆಡಳಿತ ಏನು ಗೊತ್ತು! ತಾವು ಸಿ.ಇ.ಓ.ಗಳು ಎಂದು, ಖಾದಿ ಬಿಟ್ಟು, ಸೂಟು ಧರಿಸಿ ಸರ್ಕಾರವನ್ನು ಉದ್ಯಮ ಮಾಡಿದವರೆ

(೬ನೇ ಪುಟಕ್ಕೆ)



ತಿಂಗಳ ಪತ್ರಿಕೆ

**ಹೊಸತು**

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

ಸಂಪುಟ-೧೩ ಸಂಚಿಕೆ - ೨ ಸೆಪ್ಟೆಂಬರ್ ೨೦೧೧

**ಸಂಪಾದಕ**

ಜಿ. ರಾಮಕೃಷ್ಣ

**ಸಹಸಂಪಾದಕರು**

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಲ್. ಗೋಪಾಲಕೃಷ್ಣಯ್ಯ
ಕೆ. ಎಸ್. ಪಾರ್ಥಸಾರಥಿ
ಕೆ. ಪಿ. ಸ್ವಾಮಿ
ಎಸ್. ಸುರೇಂದ್ರ

**ವ್ಯವಸ್ಥಾಪಕ**

ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾವ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ: ೨೮೩೬೭೪೨೬

**ಹೊಸತು ಕಚೇರಿಯ ವಿಳಾಸ**



**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೮೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ : ೩೦೫೭೮೦೨೯, ೨೨೨೦೩೫೮೦
ಫ್ಯಾಕ್ಸ್: ೩೦೫೭೮೦೨೩
e-mail : navakarnataka@gmail.com
hosathu@gmail.com
URL : www.navakarnataka.com
http://navakarnataka.blogspot.com
http://hosathu.blogspot.com


# ಭಗವದ್ಗೀತೆಯ ಅಧ್ಯಯನ ವಿಧಾನ

## ಸಂಪಾದಕೀಯ

ಶ್ರೀ. ಯಡಿಯೂರಪ್ಪನವರ ಮುಖ್ಯಮಂತ್ರಿ ಪದವಿ ಹೋಯಿತು, ಆದರೆ ಅವರ ಜೊತೆಯಲ್ಲಿದ್ದ ಮಂತ್ರಿಗಳು ಹಾಗೆಯೇ, ಅಲ್ಲಲ್ಲೇ, ಕಚ್ಚಿಕೊಂಡಿದ್ದಾರೆ. ಆ ಪೈಕಿ ಶ್ರೀ. ಕಾಗೇರಿಯವರೂ ಸೇರಿದ್ದಾರೆ. ಶಾಲಾ ಮಕ್ಕಳಿಗೆ ಗೀತೆಯ ಪಠಣವನ್ನು ಮತ್ತೆ ಹೇರಲು ಹೇಸದವರು ಅವರು. ಪಠಣದಲ್ಲಿ ನಿಸ್ಸೀಮರಾದ ಅವರ ಪಕ್ಷದವರ ನಾಚಿಕೆಗೇಡಿನ ನಡತೆಯನ್ನು ನೋಡಿಯೂ ಕಾಗೇರಿಯವರು ಮಕ್ಕಳನ್ನು ನಿಷ್ಕರುಣೆಯಿಂದ ಗೀತೆಯ ಬಾಯಿಪಾಠ ಮಾಡಲು ದಬ್ಬಿದರೆ ಅವರಷ್ಟು ತಿಳಿಗೇಡಿಗಳಿಲ್ಲ ಎನ್ನಬೇಕಾಗುತ್ತದೆ. ಇವರೆಲ್ಲಾ ರೂಢಿಸಿಕೊಂಡಿರುವ ಮೌಲ್ಯಗಳು ಗೀತೆಯ ಪಠಣದಿಂದ ಬಂದಿದ್ದರೆ ಖಂಡಿತ ಮಕ್ಕಳನ್ನು ಆ ಹಾದಿಯಲ್ಲಿ ನಡೆಸಕೂಡದು, ಏಕೆಂದರೆ ಅವರಿಗೆ ಬೇಕಾದ ಮೌಲ್ಯಗಳೇ ಬೇರೆ. ಗೀತೆಯು ಪವಿತ್ರ ಗ್ರಂಥ, ಸಂಸ್ಕೃತಿಯ ಸಾರೋದ್ಧಾರ, ರಾಷ್ಟ್ರೀಯತೆಯ ದ್ಯೋತಕ, ಇತ್ಯಾದಿ ಮಾತುಗಳು ಕೇವಲ ಆರೋಪಿತ ಭಾವನೆಗಳು. ''ಸೂರ್ಯನು ಸೂರ್ಯನೇ'' ಎಂದು ಹೇಳಿ ಕಾಗೇರಿ ಗೀತೆಯ ಮೌಲ್ಯವನ್ನು ವೈಭವಿಸಿದ್ದಾರೆ. ವಾಸ್ತವವಾಗಿ ಗೀತೆಯ ಪರಿಚಯ ಉಳ್ಳವರು ಹೀಗೆಲ್ಲಾ ರಂಗಿನ ಭಾಷೆ ಬಳಸುವುದಿಲ್ಲ. ಹಲವು ಗ್ರಂಥಗಳ ಪೈಕಿ ಅದೂ ಒಂದು, ಅಷ್ಟೆ.

ಯಾವ ಗ್ರಂಥವನ್ನೇ ಆಗಲಿ ಕೇವಲ ಪಠಣ ಮಾಡುವುದರಿಂದ ಏನೂ ಪ್ರಯೋಜನವಿಲ್ಲ. ವೇದದ ಅರ್ಥ ತಿಳಿಯದೆ ಅದನ್ನು ಸುಮ್ಮನೆ ಪಠಿಸುವುದು ಶುದ್ಧ ದಂಡವೆಂದು ಯಾಸ್ಕ ೨೭೦೦ ವರ್ಷಗಳ ಹಿಂದೆಯೇ ಹೇಳಿದ್ದ. ಹಾಗೆ ಮಾಡುವುದು ನಿರರ್ಥಕ, ಹಾಗೆ ಮಾಡುವವನು ಒಂದು ಕಲ್ಲು ಕಂಬವಿದ್ದಂತೆ, ಅಷ್ಟೆ, ಎಂದಿದ್ದ ಅವನು. ಅದು ಗೀತೆಗೂ ಅನ್ವಯವಾಗುತ್ತದೆ. ''ನಾನು ಕಣ್ಣುಮುಚ್ಚಿ ಮರದಡಿ ದಡ್ಡನಂತೆ ಕುಳಿತಿದ್ದೇನೆ'' ಎಂಬುದನ್ನು ಸಂಸ್ಕೃತದಲ್ಲಿ ನೂರು ಬಾರಿ ಪಠಿಸುವುದಕ್ಕೂ ಗೀತೆಯ ಶ್ಲೋಕಗಳನ್ನು ಯಾಂತ್ರಿಕವಾಗಿ ಪಠಿಸುವುದಕ್ಕೂ ವ್ಯತ್ಯಾಸ ಅತ್ಯಲ್ಪ. ಶಾಲಾಮಕ್ಕಳಿಗೆ ಗೀತಾರ್ಥ ಬೋಧನೆ ಅನುಚಿತ. ಸೂಕ್ತ ಕಾಲದಲ್ಲಿ ಮುಂದೆ ಅವರು ಅದನ್ನು ಪಡೆಯಲಡ್ಡಿಯಿಲ್ಲ, ಅದಕ್ಕೆ ಹತ್ತಾರು ಅನೌಪಚಾರಿಕ ವಿಧಾನಗಳಿವೆ. ಶಾಲೆಯ ಪಠ್ಯದ ಉದ್ದೇಶ ಮೂಲತಃ ಮಕ್ಕಳಿಗೆ ಕಣ್ಣು-ಕಿವಿ ತೆರೆದುಕೊಂಡು ಪ್ರಪಂಚವನ್ನು ನೋಡುವ ವಿಧಾನವನ್ನು ಕಲಿಸುವುದೇ ಆಗಿದೆ. ಗೀತೆಯ ಕಂಠಪಾಠ ಅದಕ್ಕೆ ಸಾಧನವಲ್ಲ. ಜೊತೆಗೆ, ಶಾಲೆಗಳನ್ನು ಯಾವುದೋ ಮಠಗಳಿಗೆ ಅಥವಾ ಮಠಗಳ ಸ್ವಾಮಿಗಳಿಗೆ ಅಖಾಡವನ್ನಾಗಿ ಮಾಡಿಕೊಳ್ಳಲು ಬಿಡಲಾಗದು. ಶಾಲಾಮಕ್ಕಳು ಯಾವುದೋ ಸ್ವಾಮಿಗೆ ಆಟಿಕೆಯ ಪದಾರ್ಥಗಳಲ್ಲ. ಸ್ವಾಮಿಗಳು ತಮ್ಮ ಮಠಗಳಲ್ಲಿ ಅದೇನು ಅದ್ಭುತ ಜ್ಞಾನ ನೀಡುತ್ತಾರೋ ನೀಡಿಕೊಳ್ಳಲಿ, ಶಾಲೆಗಳೊಳಗೆ ನುಸುಳಿ ಮಕ್ಕಳನ್ನು ಮೂರ್ಖರನ್ನಾಗಿಸುವ ಕೆಲಸಕ್ಕೆ ಅವರನ್ನು ನಿಯೋಜಿಸುವುದು ಬೇಡ. ಬೇಕಾದರೆ ಶಾಲಾ ಉಪಾಧ್ಯಾಯರ ಬಳಿ ಕೂತು ಅವರೂ ಸ್ವಲ್ಪ ಭೌತಶಾಸ್ತ್ರ, ಜೀವಶಾಸ್ತ್ರ, ವಿಜ್ಞಾನ ಪದ್ಧತಿ, ಸಾಹಿತ್ಯದ ಮಾಧುರ್ಯ, ಇತಿಹಾಸದ ಗತಿ, ಮುಂತಾದುವನ್ನು ಕಲಿಯಲು ಅಡ್ಡಿಯಿಲ್ಲ. ಗೀತೆಯ ಕಂಠಪಾಠ ಮಾಡಿಸುತ್ತಾ ಶಾಲಾಮಕ್ಕಳಲ್ಲಿ ಪ್ರತ್ಯೇಕತೆಯ ನಂಜನ್ನು ತುಂಬುವುದು ಬೇಡ; ಅಲ್ಲಿ ಗೀತೆಯನ್ನು ಕಂಠಪಾಠ ಮಾಡಲು ಇಚ್ಛಿಸದವರೂ ಇರುತ್ತಾರೆ. ದೇಶದ ಸಂವಿಧಾನದ ಆಶಯಗಳಿಗೆ ಧಕ್ಕೆಯುಂಟು ಮಾಡಬಹುದಾದ ಯಾವ ಪ್ರಕ್ರಿಯೆಗೂ ಶಾಲೆಗಳಲ್ಲಿ ಅವಕಾಶ ಕೂಡದು.

ಗೀತೆಯನ್ನು ಧಾರ್ಮಿಕ ಗ್ರಂಥವೆಂಬಂತೆ ನೋಡುವುದು ಒಂದು ಪ್ರಮಾದ. ಅದೊಂದು ತತ್ತ್ವಶಾಸ್ತ್ರ ಗ್ರಂಥ. ಕಣಾದನು ವೈಶೇಷಿಕ ಸೂತ್ರಗಳನ್ನು ಕೊಟ್ಟ, ಪ್ರಶಸ್ತಪಾದನು ಅದಕ್ಕೆ ಭಾಷ್ಯ ಬರೆದ. ಅದನ್ನೋದುವಾಗಿನ ಶಿಸ್ತು ಅಥವಾ ಸಾಕ್ರಟೀಸನ ತತ್ವಗಳನ್ನು ದಾಖಲಿಸುವ ಪ್ಲೇಟೋನ ಗ್ರಂಥವನ್ನು ಓದುವಾಗಿನ ಶಿಸ್ತು, ಗೀತೆಯನ್ನು ಅಭ್ಯಾಸ ಮಾಡುವಾಗಿನ ಶಿಸ್ತು ಸಹ ಆಗಿರಬೇಕು. ಗೀತೆಯಲ್ಲಿ ಶ್ರೀ ಭಗವಾನನ ಉಪದೇಶವಿದೆಯೆಂದು ನಂಬುವವರು ಸಹ ಇದೇ ಶಿಸ್ತನ್ನು ಪಾಲಿಸಬೇಕು. ಒಂದು ತತ್ತ್ವಶಾಸ್ತ್ರಗ್ರಂಥ ರಚಿಸುವ ವ್ಯಕ್ತಿಗೆ ಆ ಗ್ರಂಥಕ್ಕೆ ಯಾವ ಸ್ವರೂಪ ಕೊಡಬೇಕೆನ್ನುವ ಬಗ್ಗೆ ಆಯ್ಕೆಯ ಸ್ವಾತಂತ್ರ್ಯವಿದೆ. ಗೀತೆಯ ಲೇಖಕ ಒಂದು ನಿರ್ದಿಷ್ಟ ಸ್ವರೂಪ ಬಳಸಿಕೊಂಡಿದ್ದಾನೆ. ಕುರುಕ್ಷೇತ್ರದ ಯುದ್ಧ ಪ್ರಾಸಂಗಿಕ; ನಿಜ ಉದ್ದೇಶ ಸಮಕಾಲೀನ ಸಂದರ್ಭಕ್ಕೆ ತತ್ತ್ವಶಾಸ್ತ್ರದ ಶಸ್ತ್ರವನ್ನು ಬಳಸಿ ಸಾಂಸ್ಕೃತಿಕ-ಸಾಮಾಜಿಕ ಸನ್ನಿವೇಶದ ಬಗ್ಗೆ ತಕರಾರು ಎತ್ತುವವರನ್ನು ಸುಮ್ಮನಾಗಿಸುವುದು. ಗೀತೆಯ ಮೊದಲ ಅಧ್ಯಾಯದಲ್ಲಿ ಯುದ್ಧದ ಹಿನ್ನೆಲೆಯಲ್ಲಿ ಸಾಮಾಜಿಕ ತುಮುಲದ ಪ್ರಸ್ತಾಪವಿದೆ, ಅಸ್ತಿತ್ವದಲ್ಲಿರುವ ವ್ಯವಸ್ಥೆಯ ವಿರುದ್ಧದ ದನಿ ಇದೆ. ಮೂರ್ತವಾದ ಪ್ರಶ್ನೆಗಳಿಗೆ ಮೂರ್ತವಾದ ಉತ್ತರ ಕೊಡುವ ಬದಲು ಪ್ರಶ್ನೆ ಎತ್ತುವವರನ್ನು ಅಮೂರ್ತದೆಡೆಗೆ ಮುಖ ಮಾಡಿ ನಿಲ್ಲುವಂತೆ ಪ್ರೇರೇಪಿಸುವ ಪ್ರಯತ್ನ ಗೀತೆಯಲ್ಲಿದೆ. ಗೀತೆಯ ಅತ್ಯಂತ ಪ್ರಶಸ್ತವಾದ ಭಾಗವೆಂದರೆ ಮೊದಲ ಅಧ್ಯಾಯ. ಯುದ್ಧದಿಂದುಂಟಾಗುವ ಅನಾಹುತ, ಸಾವು-ನೋವು, ವರ್ಣಸಂಕರ, ಇತ್ಯಾದಿ ಸಮಸ್ಯೆಗಳನ್ನು ಅಲ್ಲಿ ಮನಕಲಕುವ ರೀತಿಯಲ್ಲಿ ವಿವರಿಸಲಾಗಿದೆ. ಅವಾವುದಕ್ಕೂ ಇನ್ನುಳಿದ ೧೭ ಅಧ್ಯಾಯಗಳಲ್ಲಿ ಉತ್ತರವಿಲ್ಲ. ಇರುವ ಉತ್ತರ ಒಂದೇ: ಆತ್ಮವು ನಿತ್ಯ, ಅದಕ್ಕೆ ಸಾವಿಲ್ಲ, ಎಂಬುದು. ಹಾಗೆಂದು ಹೇಳುತ್ತಾ ಪುನರ್ಜನ್ಮದ ಮೌಢ್ಯವನ್ನು ಗೀತೆ ಅತಿಸರಳವಾಗಿ ನಿರೂಪಿಸುತ್ತದೆ. ''ಹುಟ್ಟಿದವರೆಲ್ಲಾ ಸಾಯುತ್ತಾರೆ'' ಎಂಬುದು ಪ್ರತ್ಯಕ್ಷ ಜ್ಞಾನ. ಅದರಂತೆಯೇ ಸತ್ತವರೆಲ್ಲಾ ಮರುಹುಟ್ಟು ಪಡೆಯುತ್ತಾರೆಂದು ಗೀತೆ ಬೋಧಿಸುತ್ತದೆ. ಆದರೆ ಈ ಜ್ಞಾನಕ್ಕೆ ಪ್ರತ್ಯಕ್ಷ ಅಥವಾ ಪರೋಕ್ಷ ಆಧಾರವೇನೂ ಇಲ್ಲ. ಆತ್ಮಕ್ಕೆ ಸಾವಿಲ್ಲವಾದ್ದರಿಂದ ಕೊಲ್ಲುವುದು ಅನರ್ಥವಲ್ಲವೆಂಬ ''ಶ್ರೀ ಭಗವಾನನ'' ಮಾತು ಸಮರ್ಥನೀಯವೆಂದಾದರೆ ಜೀವನದಲ್ಲಿ ಎಷ್ಟೆಲ್ಲ ಅಲ್ಲೋಲ-ಕಲ್ಲೋಲ ಸಾಧ್ಯ! ಜನರನ್ನು ಕೊಂದು ''ನಾವು ಯಾರನ್ನೂ ಕೊಂದಿಲ್ಲ'' ಎಂದು ಸಾಧಿಸಿಬಿಡಬಹುದಲ್ಲವೆ? ಆತ್ಮಕ್ಕೆ ಸಾವಿಲ್ಲವೆಂಬ ಕಲ್ಪಿತ ''ಸತ್ಯವು'' ದೇಹದ ಕೊಲ್ಲುವಿಕೆಗೆ ಸಮರ್ಥನೆಯಾಗಬಹುದೆ? ಹಿರೋಷಿಮಾ, ಇರಾಕ್, ಶ್ರೀಲಂಕಾ, ಎಲ್ಲಕ್ಕೂ ರಿಯಾಯಿತಿ ದೊರೆತುಬಿಡುತ್ತದಲ್ಲ! ಹಳೆಯ ಬಟ್ಟೆ ಬಿಸುಟು ಹೊಸ ಬಟ್ಟೆ ತೊಡುವಂತೆ ಆತ್ಮವು ಪುನರ್ಜನ್ಮ ಹೊಂದುತ್ತದೆಯೆಂಬ ಪ್ರಯೋಗರಹಿತ ಕಲ್ಪನೆಯು ಒಂದು

ಜೀವಂತ ದೇಹದ ಕೊಲ್ಲುವಿಕೆಯನ್ನು ನೈತಿಕವಾಗಿಸುತ್ತದೆಯೆ? ಅದೇ ತರ್ಕದಿಂದ ಕರಾಳ ಹಿಂಸೆ, ದೌರ್ಜನ್ಯ ಮತ್ತು ಶೋಷಣೆಯ ಸಮರ್ಥನೆಯೂ ಸಾಧ್ಯ; ಏಕೆಂದರೆ ಶರೀರವು ಗೌಣ, ಆತ್ಮವು ಮಾತ್ರ ನಿತ್ಯ ಸತ್ಯ. ಹೀಗೆ ಹಿಂಸೆಯನ್ನು ಉದಾತ್ತ ಸ್ತರದಲ್ಲಿ ಸಮರ್ಥಿಸಿ, ಇನ್ನೊಂದು ಕಡೆ ಗಾಂಧೀಜಿಗೆ ಪ್ರಿಯವಾಗಿದ್ದ ಸ್ಥಿತಪ್ರಜ್ಞನ ಲಕ್ಷಣಗಳನ್ನು ನಿರೂಪಿಸುವುದು ಗೀತೆಯ ವೈಶಿಷ್ಟ್ಯ. ಹಾಗೆ ನೋಡಿದರೆ, ಅರ್ಜುನ ಆ ಹಂತದಲ್ಲಿ ಸ್ಥಿತಪ್ರಜ್ಞನ ಬಗ್ಗೆ ಪ್ರಶ್ನೆ ಎತ್ತಿರುವುದೇ ಅಸಂಗತ. ಗೀತೆಯ ಕರ್ತೃವಿಗೆ ಅದು ತಿಳಿದಿದೆ, ಆದರೆ ಜನರನ್ನು ಅಮೂರ್ತದೆಡೆಗೆ ತಳ್ಳಲು ಅದು ಪ್ರಬಲವಾದ ತಂತ್ರವಾದ್ದರಿಂದ ಅದನ್ನು ಬಳಸಿದ್ದಾನೆ. ನಿಗೂಢತೆ ಮತ್ತು ಉನ್ನತ ಮೌಲ್ಯಗಳ ಮುಸುಕು ಹಾಕಿ ಜನರ ಪ್ರಶ್ನೆಗಳನ್ನು ಗೌಣವಾಗಿಸುವ ಜಾಣತನ ಇಲ್ಲಿದೆ. ಅಜ್ಞಾನಿಗಳು ಕತ್ತಲೆಯಲ್ಲಿರುವಾಗ ಜ್ಞಾನಿಯು ಬೆಳಕನ್ನು ಅನುಭವಿಸುತ್ತಾನೆಂಬುದು ಅಮೋಘ ಕಾಣ್ಕೆಯೇನಲ್ಲ.

ಸಾಹಿತ್ಯ, ಸಂಸ್ಕೃತಿ, ಮತಧರ್ಮಗಳಂತೆ ತತ್ವಶಾಸ್ತ್ರವು ಸಹ ಒಂದು ನಿರ್ದಿಷ್ಟ ಚಾರಿತ್ರಿಕ ಹಿನ್ನೆಲೆಯನ್ನು ಹೊಂದಿರುತ್ತದೆ. ಆದ್ದರಿಂದ ಅದರ ಅಧ್ಯಯನಕ್ಕೆ ಚಾರಿತ್ರಿಕ ದೃಷ್ಟಿಕೋನದ ಅಗತ್ಯವಿದೆ. ಇದನ್ನೆಲ್ಲಾ ಶಾಲಾಮಕ್ಕಳಿಗೆ ವಿವರಿಸಿ ಹೇಳಲಾದೀತೆ? ಆಗಲಿ, ಬಿಡಲಿ, ಕೇವಲ ಗೀತಾ ಪಠಣದಿಂದ ಏನೂ ಸಿದ್ಧಿಸುವುದಿಲ್ಲ. ಬಾಯಿಪಾಠ ಮಾಡುವ ಸಾಮರ್ಥ್ಯ ಮಕ್ಕಳಲ್ಲಿ ಬೆಳೆಸಬೇಕೆಂಬ ಉದ್ದೇಶವೇನಾದರೂ ಇದ್ದರೆ ಗೀತಾಪಠಣಕ್ಕಿಂತಲೂ ಮಗ್ಗಿ ಹೇಳಿಕೊಡುವುದು ಹೆಚ್ಚು ಅರ್ಥಪೂರ್ಣ. ಮಕ್ಕಳಿಗೆ ಬೇಕಾದ್ದು ವೈಜ್ಞಾನಿಕ ವಿಶ್ಲೇಷಣೆಯ, ವೈಚಾರಿಕತೆಯ, ಚಾರಿತ್ರಿಕ ಪ್ರಜ್ಞೆ. ಪಠಣವು ಇದನ್ನು ಬೆಳೆಸುವುದಿಲ್ಲ, ಬದಲಾಗಿ ಮೌಢ್ಯದ ಮಾದರಿಯಾಗಿಬಿಡುತ್ತದೆ.

ಗೀತೆಯನ್ನು ಬರೆಯುವ ಕಾಲಕ್ಕೆ, ಅಂದರೆ ಬುದ್ಧನ ಕಾಲದ ತರುವಾಯದಲ್ಲಿ, ನಮ್ಮ ದೇಶದಲ್ಲಿ ಉದ್ಭವಿಸಿದ್ದ ಸಾಮಾಜಿಕ-ಸಾಂಸ್ಕೃತಿಕ ಸನ್ನಿವೇಶವು ಪ್ರತಿಷ್ಠಿತ ವರ್ಗಗಳಿಗೆ ಒಂದು ಸವಾಲನ್ನು ಸೃಷ್ಟಿಸಿತ್ತು. ಬುದ್ಧ, ಲೋಕಾಯತ ದರ್ಶನ, ಜಾನಪದ ಕೃಷಿ ಆಧಾರಿತ ತಾಂತ್ರಿಕ ಪದ್ಧತಿಗಳು, ಹೀಗೆ ಅನೇಕ ಶಾಖೆಗಳು ಅಂದಿನ ಶಿಷ್ಟ ಸಂಪ್ರದಾಯಗಳಿಗೆ ಸವಾಲನ್ನೊಡ್ಡಿದ್ದವು. ವರ್ಣ ವ್ಯವಸ್ಥೆ, ಯಜ್ಞವಿಧಿಗಳು, ಅಸಹಾಯಕತೆಯನ್ನು ಬೋಧಿಸುವ ಕೆಲವು ತಾತ್ವಿಕ ಮಾದರಿಗಳು, ಇವನ್ನೆಲ್ಲಾ ಕಟುವಾಗಿ ವಿಮರ್ಶಿಸಿ ಅವಕ್ಕೆ ಪರ್ಯಾಯವಾದ ನೈತಿಕ ಮಾದರಿಗಳನ್ನು ಸೂಚಿಸುವ ಕೆಲಸವನ್ನು ಇವು ಮಾಡುತ್ತಿದ್ದವು. ಅದರಿಂದಾಗಿ ಅವರೆಗೆ ಸಾಮಾಜಿಕವಾಗಿ ಶ್ರೇಷ್ಠರೆನಿಸಿಕೊಂಡಿದ್ದವರ ಹಿತಾಸಕ್ತಿಗಳಿಗೆ ಕುತ್ತು ಸಂಭವವಾಗಿದ್ದಿತು. ಹಳೆಯ ಮತ್ತು ಹೊಸ ಚಿಂತನಾ ಮಾರ್ಗಗಳ ನಡುವೆ ಘರ್ಷಣೆ ಅನಿವಾರ್ಯವಾಯಿತು. ಅದನ್ನು ಸಾಂಪ್ರದಾಯಿಕ ಚಿಂತಕರು ಮಹಾವಿಪ್ಲವದ ನಾಂದಿಯೆಂದು ಬಗೆದು ಹಳೆಯ ಪರಂಪರೆ, ಸಾಮಾಜಿಕ ಕಟ್ಟುಪಾಡುಗಳು, ಉಚ್ಚವರ್ಣದ ಪ್ರಾಬಲ್ಯ, ಮುಂತಾದುವನ್ನು ಸಿಂಹಾಸನದಲ್ಲಿ ಸ್ಥಿರವಾಗಿರಿಸಲು ತತ್ತ್ವಶಾಸ್ತ್ರದ ಆಯುಧವನ್ನು ರೂಪಿಸಿದರು. ಭಗವದ್ಗೀತೆಯು ಅಂತಹ ಒಂದು ಆಯುಧ. ತತ್ವಶಾಸ್ತ್ರವಾಗಿ ಗೀತೆಯು ಎಲ್ಲವನ್ನೂ ಅಡಕ ಗೊಳಿಸಿಕೊಳ್ಳುವಂತಹ ಕಲಸುಮೇಲೋಗರ. ಮೂಲ ಸಾಂಖ್ಯದ ಪರಿಷ್ಕಾರ, ಅಪ್ರಾಯೋಗಿಕವಾದ ನಿಷ್ಕಾಮಕರ್ಮ, ಹತಾಶೆಗೆ ಮದ್ದೆನ್ನಲಾದ ಅವತಾರ ಪುರುಷನ ಕಲ್ಪನೆ, ದಂಗುಗೊಳಿಸುವ ವಿಶ್ವರೂಪ ದರ್ಶನ, ಕೈಕಟ್ಟಿಹಾಕುವ ಪರಮಭಕ್ತಿ, ಸಂಪ್ರದಾಯದ ಯಜ್ಞಕರ್ಮ, ಜನಸಾಮಾನ್ಯರ ಆಶಯಗಳನ್ನು ಮೂದಲಿಸುವ ಆಸುರೀ ಪ್ರವೃತ್ತಿಯ ವಿವರಣೆ, ಜೊತೆಗೆ ಬಾಯಿಮಾತಿನ ಕ್ರಿಯಾಸ್ವಾತಂತ್ರ್ಯ, ಎಲ್ಲವನ್ನೂ ಒಂದೇ ಬುಟ್ಟಿಗೆ ಹಾಕಿಡುವ ಗ್ರಂಥ ಭಗವದ್ಗೀತೆ. ಪ್ರಶ್ನಿಸುವವರನ್ನು ನಿಗ್ರಹಿಸುವ ಜಾಣತನ ಅದರಲ್ಲಿದೆ. ಚಿಂತನೆ ಮತ್ತು ಕ್ರಿಯೆಗಳ ಸ್ವಾತಂತ್ರ್ಯ ಎಲ್ಲರಿಗೂ ಇದೆಯೆಂದು ಹೇಳುತ್ತಲೇ ಅದು ಪ್ರಶ್ನಿಸುವವರ ಬಾಯಿ ಮುಚ್ಚಿಸುತ್ತದೆ, ಕೈಕಾಲು ಕಟ್ಟಿಹಾಕುತ್ತದೆ. ಎಲ್ಲ ಸಾಂಪ್ರದಾಯಿಕ ಕಂದಾಚಾರ ಗಳನ್ನೂ ನಿಗೂಢತೆಯ ತೆರೆಯ ಮರೆಯಲ್ಲಿ ಸುಭದ್ರಗೊಳಿಸುವುದು ಗೀತೆಯ ಒಂದು ಆಶಯ. ಉದಾಹರಣೆಗೆ, ಯಜ್ಞದ ಬಗೆಗಿನ ನಿಲುವು. ಅದು ನಿಷ್ಫಲವಾದ್ದು, ಕ್ರೂರವಾದ್ದು, ಎಂದು ಬುದ್ಧ ಮತ್ತು ಲೋಕಾಯತಿಕರು ಒಂದು ಆಂದೋಳನವನ್ನು ಆರಂಭಿಸಿದ್ದರು. ಅದಕ್ಕೆ ಗೀತೆಯ ಉತ್ತರ: ಯಜ್ಞದಿಂದ ಎಲ್ಲವೂ ಸಂಭವಿಸಿತು, ಅದು ಸೃಷ್ಟಿಮೂಲ, ಎಂಬುದು. ಅಂತೆಯೇ ಕರ್ಮಫಲ, ವರ್ಣವ್ಯವಸ್ಥೆ, ಎಲ್ಲದಕ್ಕೂ ಭಗವಂತನ ಮುದ್ರೆಯನ್ನೊತ್ತಿ ಆ ಎಲ್ಲ ಸಾಮಾಜಿಕ ಪಿಡುಗುಗಳನ್ನು ತೆಪ್ಪಗೆ ಅಂಗೀಕರಿಸುವಂತೆ ಪ್ರೇರಣೆ ನೀಡುವುದು ಗೀತೆಯ ತಾತ್ವಿಕ ಉದ್ದೇಶ. ''ಯಜ್ಞ ಮಾಡುವಾಗ ಮೇಕೆಯನ್ನು ಕೊಲ್ಲುವುದು ಕ್ರೂರ ಹಿಂಸೆ'' ಎಂದು ಬುದ್ಧ ಟೀಕಿಸಿದ. ''ಹಾಗೆ ಕೊಲ್ಲಲ್ಪಟ್ಟ ಮೇಕೆ ಸ್ವರ್ಗಕ್ಕೆ ಹೋಗುತ್ತಾದ್ದರಿಂದ ಅದು ಹಿಂಸೆಯಲ್ಲವೆಂದು ವಾದಿಸುತ್ತೀರಲ್ಲ, ಹಾಗಿದ್ದರೆ ಮೇಕೆಯನ್ನು ಕೊಲ್ಲುವ ಬದಲು ನಿಮ್ಮಪ್ಪನನ್ನು ಕೊಂದು ಸಲೀಸಾಗಿ ಅವನನ್ನೇ ಏಕೆ ನೇರವಾಗಿ ಸ್ವರ್ಗಕ್ಕೆ ಕಳಿಸಬಾರದು,'' ಎಂದು ಲೋಕಾಯತಿಕರು ಛೇಡಿಸಿದರು, ವ್ಯಂಗ್ಯವಾಡಿದರು. ಕಟ್ಟಾ ಸಂಪ್ರದಾಯದ ಪುರೋಹಿತ ವರ್ಗಕ್ಕೆ ತನ್ನ ಸಂಪತ್ತಿನ ಮೂಲವಾದ ಯಜ್ಞವನ್ನು ಸಂರಕ್ಷಿಸಿಕೊಳ್ಳುವುದು ಅಗತ್ಯವಾಗಿತ್ತು. ಭೂರಿದಕ್ಷಿಣೆ ನೀಡದಿದ್ದರೆ ಯಜ್ಞ ಮಾಡಿಸುವ ಯಜಮಾನನನ್ನು ನಡುಗಿಸುವ ತಂತ್ರ ಪುರೋಹಿತ ವರ್ಗಕ್ಕೆ ತಿಳಿದಿತ್ತು. ಐತರೇಯ ಬ್ರಾಹ್ಮಣದಂತಹ ಗ್ರಂಥಗಳಲ್ಲಿ ಅದಕ್ಕೆ ಹತ್ತಾರು ಪುರಾವೆಗಳಿವೆ. ಅಂದರೆ, ಸ್ವಹಿತದ ರಕ್ಷಣೆಗಾಗಿ, ಆಳುವ ವರ್ಗಕ್ಕೆ ಜನಸಾಮಾನ್ಯರ ಮೌನ ಅಂಗೀಕಾರ ಅಗತ್ಯವಾಗಿತ್ತು. ಅದನ್ನು ಪೂರೈಸುವ ಕೆಲಸವನ್ನು ಭಾಗಶಃ ಗೀತೆಯು ಮಾಡಹೊರಟಿದೆ. ಅದನ್ನು ಪಠಣ ಮಾಡುವ ಔಚಿತ್ಯವೆಲ್ಲಿಯದು!

ಶಾಲಾಮಕ್ಕಳಿಗೆ ಇದನ್ನೆಲ್ಲಾ ತಿಳಿಸಿಕೊಡಲಾದೀತೆ? ಆ ಹಂತದ ಮಕ್ಕಳಿಗೆ ಅದು ಬೇಕೆ? ವಯಸ್ಸಿನ ದೃಷ್ಟಿಯಿಂದ ಪ್ರೌಢಾವಸ್ಥೆಗೆ ಬಂದವರನೇಕರು ಎಂಥದೋ ಒಂದು ಮತಧರ್ಮದ ಅಮಲಿನಲ್ಲಿ ಸಿಲುಕಿರುವುದು ಅನುಭವದ ವಿಷಯ. ನಿಜಕ್ಕೂ ಗೀತೆಯ ಚಾರಿತ್ರಿಕ ಹಿನ್ನೆಲೆಯನ್ನು ಸಮಗ್ರವಾಗಿ ತಿಳಿಸಿಕೊಡಬೇಕಾದ್ದು ಅಂತಹ ಪ್ರೌಢರಿಗೆ. ಅದಕ್ಕೂ ಮುಂಚೆ, ಸರ್ಕಾರದ ಸುತ್ತೋಲೆ ಹೊರಡಿಸುವ ಶಿಕ್ಷಣ ಸಚಿವರು ಇದನ್ನೆಲ್ಲಾ ತಿಳಿದುಕೊಳ್ಳುವ ಅಗತ್ಯವಿದೆ.

ಸಂಪ್ರದಾಯ ಮೂಲದ ಸಾಮಾಜಿಕ ವ್ಯವಸ್ಥೆಯನ್ನು ತೀವ್ರವಾಗಿ ಪ್ರಶ್ನಿಸಿ, ಸಮಾನತೆಯ ಸಮಾಜದಲ್ಲಿ ಸುಖ ಕಾಣಬೇಕೆಂಬುವ ಆಶಯ ಉಳ್ಳವರನ್ನು ಗೀತೆಯು ಅಸುರರೆಂದು ಮೂದಲಿಸುತ್ತದೆ, ಆ ಆಶಯವನ್ನು ಕೈಬಿಡಬೇಕೆಂದು ಬೋಧಿಸುತ್ತದೆ. ಅದಕ್ಕೆ ಒಂದು ಇಡೀ ಅಧ್ಯಾಯವು ಮೀಸಲಾಗಿದೆ. ಅಸುರರು ಸುಖಲೋಲುಪರಂತೆ, ಕಾಮಾತುರರಂತೆ, ಐಶ್ವರ್ಯದ ಲಾಲಸೆ ಉಳ್ಳವರಂತೆ! ಇದು ಜನಸಾಮಾನ್ಯರಿಗೆ ಅನ್ವಯವಾಗುವ ಮಾತಲ್ಲ. ದಿನನಿತ್ಯದ ವ್ಯವಹಾರದಲ್ಲಿ ಇದು ಸಂಪೂರ್ಣವಾಗಿ ಅನ್ವಯವಾಗುವುದು ಅನೇಕ ಸ್ವಾಮಿಗಳಿಗೆ, ಮಠಗಳಿಗೆ, ಅಂಬಾನಿಯಾದಿಯಾಗಿ ಬಂಡವಳಿಗರಿಗೆ,


ತಿಂಗಳ ಪತ್ರಿಕೆ

ಹೊಸತು



ನವಕರ್ನಾಟಕ ಪ್ರಕಾಶನ





ಚಂದಾ ವಿವರಗಳು

| | |
|---|---|
| ಬಿಡಿ ಸಂಚಿಕೆ | ರೂ. ೧೨/- |
| ವಾರ್ಷಿಕ ಚಂದಾ | ರೂ. ೧೫೦/- |
| ಮೂರು ವರ್ಷಕ್ಕೆ | ರೂ. ೩೫೦/- |

ನವಕರ್ನಾಟಕ ಶಾಖೆಗಳು

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು - ೫೬೦ ೦೦೯
☎ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
☎ : ೦೮೨೪-೨೪೪೧೦೧೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
☎ : ೦೮೨೧-೨೪೨೪೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
☎ : ೦೮೪೭೨-೨೨೪೩೦೨

ಹಲವು ಹಗರಣಗಳಲ್ಲಿ ಭಾಗಿಗಳಾಗಿರುವ ಯಡಿಯೂರಪ್ಪ-ರಾಜ- ಕಲ್ಮಾಡಿ ಮುಂತಾದ ನಿಕೃಷ್ಟ ರಾಜಕಾರಣಿಗಳಿಗೆ ಮತ್ತು ಅಂಥವರೆಲ್ಲರ ಸಮರ್ಥನೆಗೆ ನಿಲ್ಲುವ ವಿದ್ವಾಂಸ ಸಮೂಹದವರಿಗೆ. ತಾವು ಸುಖ ಉಂಡು, ಸುಖವನ್ನು ಆಶಯವನ್ನಾಗಿ ಹೊಂದಕೂಡದೆಂದು ಜನಸಾಮಾನ್ಯರಿಗೆ ಬೋಧಿಸುವ ಪರಂಪರೆ ನಮ್ಮ ದೇಶದ ಇತಿಹಾಸದಲ್ಲಿ ಅನೇಕ ತತ್ತ್ವಶಾಸ್ತ್ರಜ್ಞರ ಪಾಲಿಗಿದೆ. ಹಾಗೆ ಬೋಧಿಸುತ್ತಾ ಇವರೆಲ್ಲಾ ರವಿಶಂಕರ-ಬಾಬಾ ರಾಮ ದೇವರಂತೆ ಸಾಮ್ರಾಜ್ಯಗಳನ್ನು ಕಟ್ಟಿಕೊಳ್ಳುತ್ತಾರೆ, ಅದಕ್ಕೆ ಭಗವದ್ಗೀತೆಯನ್ನು ಒಂದು ಗುರಾಣಿಯಾಗಿ ಮಾಡಿಕೊಂಡಿದ್ದಾರೆ. ಅವರು ಮಹಾದಯಾಳುಗಳಾದ್ದರಿಂದ ''ಪಾಮರರ'' ಪಾಲಿಗೆ ಅದೇ ಗೀತೆಯ ಪಠಣದ ವೈಭವವನ್ನು ದಯಪಾಲಿಸಿದ್ದಾರೆ! ಆ ದಯಾಭಿಕ್ಷೆ ನಮ್ಮ ಶಾಲಾಮಕ್ಕಳಿಗೇಕೆ ಬೇಕು? ಭೂತಕಾಲದ ಮತ್ತು ಸಮಕಾಲೀನ ಚಾರಿತ್ರಿಕ ಸತ್ಯಗಳ ಅರಿವು ಶಾಲಾಮಕ್ಕಳ ಹಾಗೂ ಜನಸಾಮಾನ್ಯರ ಹಕ್ಕು. ವೈಚಾರಿಕತೆ ಅವರ ಸಂಪತ್ತು. ವೈಜ್ಞಾನಿಕ ವಿಶ್ಲೇಷಣೆ ಅವರ ಹೋರಾಟದ ಹಾದಿಗೆ ಮಾರ್ಗದರ್ಶಿ ಮತ್ತು ಸಾಧನ. ಗೀತೆಯ ಪಠಣವು ಇದಾವುದಕ್ಕೂ ಪೋಷಣೆ ನೀಡುವಂಥದಲ್ಲ. ಪೋಷಣೆ ನೀಡುವ ಚಿಂತನೆಯನ್ನು ಜನತೆ ಅರಸಿಕೊಳ್ಳ ಬೇಕು, ಅರಸಿಕೊಳ್ಳುತ್ತದೆ.

ಇಂತಹ ವ್ಯಾವಹಾರಿಕ ದೃಷ್ಟಿಯು ಗೀತೆಗೆ ಸರಿಯಾದ ವ್ಯಾಖ್ಯಾನವಲ್ಲ ಎಂದು ವಾದಿಸುವವರಿದ್ದಾರೆ. ಹಿಂದೆಯೂ ಅಂಥವರಿದ್ದರು. ಶಂಕರ-ರಾಮಾನುಜ-ಮಧ್ವ ಮುಂತಾದ ''ಆಚಾರ್ಯರು'' ಆ ನಿಲುವಿನಿಂದಲೇ ಭಾಷ್ಯಗಳನ್ನು ಬರೆದಿಟ್ಟಿದ್ದಾರೆ. ಆದರೆ ಗೀತೆಯು ಹೇಳುವ 'ಲೋಕ ಸಂಗ್ರಹ'ವನ್ನು ಜನತೆ ತನ್ನದೇ ಮಾರ್ಗದಲ್ಲಿ ರೂಪಿಸಿಕೊಳ್ಳುತ್ತದೆ. ವೈಜ್ಞಾನಿಕ ದೃಷ್ಟಿಯಿಂದ ಹೊಸ ಭಾಷ್ಯ ಬರೆಯಲು ಶಾಲಾಮಕ್ಕಳು ಮತ್ತು ಜನತೆ ಕಲಿಯಬೇಕಿದೆ, ಕಲಿಯುತ್ತಾರೆ. ಅದಕ್ಕೆ ಗೀತಾಪಠಣದ ಸುತ್ತೋಲೆ ಅಪ್ರಸ್ತುತ.

ಯಾವುದೇ ತೀರ್ಮಾನವನ್ನು ಖಚಿತವೆಂದು ಸ್ಥಾಪಿಸುವಾಗ ಅನ್ವಯ ಮತ್ತು ವ್ಯತಿರೇಕ ಎಂಬ ಎರಡು ಕ್ರಮಗಳು ಅಗತ್ಯವೆಂದು ಭಾರತೀಯ ತರ್ಕಶಾಸ್ತ್ರದಲ್ಲಿ ಪ್ರತಿಪಾದಿಸಲಾಗಿದೆ. ಉದಾಹರಣೆಗೆ, ''ಹೊಗೆ ಇದ್ದಲ್ಲೆಲ್ಲಾ ಬೆಂಕಿ ಇರುತ್ತದೆ'' ಎಂಬುದನ್ನು ಖಚಿತಪಡಿಸಿಕೊಳ್ಳಲು ಅನ್ವಯ ಕ್ರಮದ ಪ್ರಕಾರ ನೂರಾರು ಕಡೆಗಳಲ್ಲಿ ಅದನ್ನು ಪ್ರತ್ಯಕ್ಷವಾಗಿ ಕಂಡು ಅದು ನಿಜವೆಂದು ತಿಳಿಯಲಾಗುತ್ತದೆ. ಬೆಂಕಿ ಇದ್ದೂ ಹೊಗೆ ಇಲ್ಲದಿರಬಹುದು; ಉದಾಹರಣೆಗೆ, ಕುಲುಮೆಯಲ್ಲಿ ಕಬ್ಬಿಣದ ತುಂಡನ್ನು ಕಾಯಿಸಿ ಕೆಂಪಾಗಿಸಿದಾಗ. ಆದರೆ ಹೊಗೆ ಇದ್ದಾಗ ಬೆಂಕಿ ಇಲ್ಲದಿರಲು ಸಾಧ್ಯವಿಲ್ಲ. ಇದು ಅನ್ವಯ ಕ್ರಮ. ಅಡುಗೆ ಅನಿಲವಿಲ್ಲದ ನಮ್ಮ ದೇಶದ ಬಹುತೇಕ ಮನೆ ಮತ್ತು ಗುಡಿಸಲುಗಳಲ್ಲಿ ಹೊಗೆ ಇರುತ್ತದೆ, ಆದ್ದರಿಂದ ಅಲ್ಲಿ ಬೆಂಕಿ ಇರಲೇಬೇಕು. ಆ ಬೆಂಕಿಯೊಡನೆ ಹೊಟ್ಟೆಯೊಳಗಿನ ಮತ್ತು ಪ್ರಜ್ಞೆಯೊಳಗಿನ ಬೆಂಕಿಯೂ ಇರಬಹುದು, ಆ ಮಾತು ಬೇರೆ. ಆದರೆ ಒಂದು ನೀರಿನ ಮಡುವಿನಲ್ಲಿ ಹೊಗೆ ಇಲ್ಲ, ಅಲ್ಲಿ ಬೆಂಕಿಯೂ ಇಲ್ಲ. ಇದು ವ್ಯತಿರೇಕ ವಿಧಾನ.

''ಗೀತೆಯ ಪಠಣದಿಂದ ವ್ಯಕ್ತಿಯು ಮೌಲ್ಯಗಳನ್ನು ರೂಢಿಸಿಕೊಳ್ಳುತ್ತಾನೆ(ಳೆ)'' ಎಂಬ ಮಾತಿದೆಯೆನ್ನೋಣ. 'ಅನ್ವಯ' ವಿಧಾನವು ಇದನ್ನು ಪೂರ್ತಿ ಸುಳ್ಳಾಗಿಸುತ್ತದೆ ಎಂಬುದಕ್ಕೆ ನಮ್ಮ ಮುಂದೆ ಸಾವಿರ ನಿದರ್ಶನಗಳಿವೆ. ಗೀತೆಯ ಬಗ್ಗೆ ಹಲವು ''ಆನಂದ''ರು ಪ್ರವಚನ ನೀಡುತ್ತಾರೆ. ಅದನ್ನು ಕೇಳಲು ಬೇಕಾದಷ್ಟು ಕಪ್ಪುಹಣದ ಕುಳಗಳು ಬರುತ್ತಾರೆ, ಸೋಫಾಗಳಲ್ಲಿ ಆಸೀನರಾಗುತ್ತಾರೆ, ಮಾರನೆಯ ದಿನ ಜನರ ಕತ್ತು ಕುಯ್ಯುವುದನ್ನು ಮುಂದುವರಿಸುತ್ತಾರೆ. ಈಗ ಗೀತೆ ಪಠಿಸಿ ಮುಂದಿನ ಅರ್ಧ ಗಂಟೆಯಲ್ಲಿ ಅತ್ಯಂತ ಅಸಹ್ಯವಾದ ಭ್ರಷ್ಟಾಚಾರದಲ್ಲಿ ತೊಡಗುವುದು ಕೇವಲ ನಿತ್ಯಾನಂದಸ್ವಾಮಿ ಮಾತ್ರವಲ್ಲ, ಸುಖಾತ್ಮಾನಂದ - ಪ್ರಬುದ್ಧಾನಂದರ ಗೀತಾ ಪ್ರವಚನ ಕೇಳಿ ಸಟ್ಟಾ ಜೂಜುಗಾರರು ಯಾರೂ ಬದಲಾದ ನಿದರ್ಶನವಿಲ್ಲ. ಗೀತಾಪಠಣ ಮಾಡದವರು ಲಕ್ಷಗಟ್ಟಲೆ ಇದ್ದಾರೆ, ಅವರೆಲ್ಲಾ ಭ್ರಷ್ಟರೇನೂ ಅಲ್ಲ. ಭ್ರಷ್ಟರು ಗೀತಾ ಪಠಣ ಮಾಡಿದರೂ ಭ್ರಷ್ಟರೇ ಮತ್ತು ಭ್ರಷ್ಟರಲ್ಲದವರು ಅದನ್ನು ಮಾಡದಿದ್ದಾಗಲೂ ಸಜ್ಜನರೇ. ಇದಕ್ಕೆ ಸಾಮಾಜಿಕ-ಆರ್ಥಿಕ ಹಿನ್ನೆಲೆ ಮತ್ತು ಆದರ್ಶಗಳ ಕಾರಣ ಇರುತ್ತದೆಯೇ ವಿನಾ ಎಂಥದೋ ನಿರರ್ಥಕ ಪಠಣವಲ್ಲ. ಸಮಾಜದ ಯಾವ ವರ್ಗದೊಡನೆ ನಮ್ಮನ್ನು ನಾವು ಸಮೀಕರಿಸಿಕೊಳ್ಳುತ್ತೇವೆಂಬುದು ಮೌಲ್ಯಗಳ ನಿರ್ಧಾರಕ ಸೂತ್ರ. ಹೃದಯವು ಸಹಜವಾಗಿ ಎಡಭಾಗದಲ್ಲಿರುತ್ತದೆ. ಅದಕ್ಕೆ ಸಮನಾಗಿ ಚಿಂತನೆಯೂ 'ಎಡ' ಸಿದ್ಧಾಂತದಿಂದ ರೂಪುಗೊಳ್ಳಬೇಕು. ಭಗವದ್ಗೀತೆಯಾಗಲಿ, ಬೇರೆ ಯಾವುದೇ ತತ್ವಶಾಸ್ತ್ರ ಗ್ರಂಥವಾಗಲಿ, ಅಧ್ಯಯನಕ್ಕೆ ಸಾಮಗ್ರಿಯಾಗಬೇಕಾದ್ದು ಈ ರೀತಿಯಲ್ಲಿ. ಮೌಲ್ಯಗಳ ಸತ್ವ ಅನುಷ್ಠಾನದಿಂದ ಸಾಬೀತಾಗುತ್ತದೆ, ಕೇವಲ ಉಚ್ಚಾರಣೆಯಿಂದಲ್ಲ.

---

*ಈ ತಿಂಗಳು (೩ನೇ ಪುಟದಿಂದ)*

ಅಲ್ಲವೇ ಅವರೆಲ್ಲ? ಇತ್ತೀಚೆಗಷ್ಟೇ ಕೆಲವರ ತಲೆಯ ಮೇಲೆ ಟೋಪಿ ಪುನಃ ಬರಲಾರಂಭಿಸಿದೆ! ಹೀಗಾಗಿ ಸರ್ಕಾರದಲ್ಲಿ ಆಡಳಿತ ನಡೆಸಬಲ್ಲ ಸಮರ್ಥರ ಕೊರತೆ ಉಂಟಾಗಿದೆ. ಪ್ರಧಾನಿಗೆ ಸಿಗುತ್ತಿರುವ ಸಲಹೆಗಳು ಅವರನ್ನು ದಿನೇ ದಿನೇ ಹೊಸ ಬಿಕ್ಕಟ್ಟುಗಳಿಗೆ ದೂಡುತ್ತಿವೆ. ಅದೇನು ಉದ್ದೇಶಪೂರ್ವಕವೋ ಅಲ್ಲವೋ ಯಾರಿಗೆ ಗೊತ್ತು! ಸುಳಿವು ತಿಳಿಯದ ಪ್ರಧಾನಿ ಹೆಚ್ಚುಕಾಲ ಮೌನಿ! ದೇಶದ ಪರಿಸ್ಥಿತಿ ಅತಂತ್ರವಾಗಿದೆ. ವಿಶ್ವಾಸ ಕುಸಿದಿದೆ. ಡಿ.ವಿ.ಜಿ.ಯವರ ಮಂಕುತಿಮ್ಮ ಹೇಳುವ ''...ಸೆರೆ ಕುಡಿದವರು ಕೆಲವರು ಹುಟ್ಟುಹಾಕುವರು...'' ಎಂಬ ಪರಿಸ್ಥಿತಿ ಉಂಟಾಗಿದೆ.

ಅಣ್ಣಾ ಒಡ್ಡಿರುವ ಸವಾಲಿಗೆ ಸರಳ ಮಾರ್ಗ ನಮಗೆಲ್ಲ ಗೊತ್ತು. ಸಿವಿಲ್ ಸೊಸೈಟಿಯೆಂದು ಕರೆಯಲಾದವರ ಲೋಕಪಾಲ ಕರಡು ಮಸೂದೆಯನ್ನೂ ಲೋಕಸಭೆಯಲ್ಲಿ ಮಂಡಿಸ ಬೇಕಷ್ಟೇ. ಆಗ ಭಾಜಪದ ಬಣ್ಣ ಬಯಲಾಗುತ್ತದೆ. ಪ್ರಧಾನಿಯನ್ನೂ ಸೇರಿಸುತ್ತೇವೆ ಎಂದಿದ್ದರೆ ಸಾಕಾಗಿತ್ತು. ಚಳುವಳಿಗಳು ಶಾಂತಿಯುತವಾಗಿರುವವರೆಗೂ ನಡೆಯಲು ಬಿಟ್ಟು, ಅದು ಎಲ್ಲೆ ಮೀರಿದಾಗ ಅಗತ್ಯ ಕಾರ್ಯಾಚರಣೆ ಮಾಡಬಹುದಿತ್ತಲ್ಲ? ಆ ಹಾದಿ ಬಿಟ್ಟು, ತುರ್ತುಪರಿಸ್ಥಿತಿಯ ಕಾಲದ ಹಳಸಿದ ಹೇಳಿಕೆಗಳನ್ನು ಪ್ರಧಾನಿಯ ಕೈಲಿ ಹೇಳಿಸುವ ಈ ನಾಯಕತ್ವಕ್ಕೆ ಏನು ಹೇಳಬೇಕೋ! ನಮ್ಮ ದೇಶದ ಆರ್ಥಿಕ ಉತ್ಕರ್ಷ ಸಹಿಸದ (ಅದು ಅಮೇರಿಕಾವೋ!?) ವಿದೇಶಿ ಶಕ್ತಿಗಳೂ ಈ ಚಳುವಳಿಗಳನ್ನು ಬೆಂಬಲಿಸುತ್ತಿವೆಯಂತೆ! ಈ ಚಳುವಳಿಗಳು ನಮ್ಮ ಆರ್ಥಿಕ ಬೆಳವಣಿಗೆಯನ್ನು ಹಾಳುಮಾಡುತ್ತವಂತೆ! ಈ ಸುಳ್ಳುಗಳನ್ನು ಸ್ವತಃ ಪ್ರಧಾನಿಯ ಕಿವಿಯೇ ನಂಬುವುದಿಲ್ಲ. ವಾಸ್ತವವೆಂದರೆ ಭ್ರಷ್ಟಾಚಾರ ನಮ್ಮ ಅಭಿವೃದ್ಧಿಯ ವೇಗವನ್ನು ತೀರ ಕಡಿಮೆ ಮಾಡಿದೆ. ಅದರ ಮಾರ್ಗ ಅತೀ ಶ್ರೀಮಂತಿಕೆಯನ್ನು, ಅದರೊಂದಿಗೆ ದಾರುಣ ಬಡತನವನ್ನು ಉಂಟುಮಾಡಿದೆ. ಅದೊಂದು ಕ್ಯಾನ್ಸರ್ ಆಗಿದೆ. ಬಹುಬೇಗ ಶರೀರವನ್ನೆಲ್ಲ ಆಕ್ರಮಿಸುತ್ತದೆ, ತಡೆಗಟ್ಟದೆ ಇದ್ದರೆ. ಅದರ ಪರಿಣಾಮವೇ ರಾಜಕೀಯ ಅತಂತ್ರವಾಗಿದೆ. ನಮ್ಮ ಪರಿಸ್ಥಿತಿ ನಗೆಪಾಟಲಾಗಿದೆ. ನಮ್ಮ ಪ್ರಧಾನಿ ತನ್ನನ್ನು ಅಮೆರಿಕಾಕ್ಕೆ ಮಾರಿಕೊಂಡಿರುವುದರಿಂದ ನಮ್ಮ ಹಲವುಮಟ್ಟದ ಸಾರ್ವಭೌಮತೆಗೆ ಧಕ್ಕೆ ಉಂಟಾಗಿದೆ. ಅಧಿಕಾರ ಕೇಂದ್ರ ಪ್ರಧಾನಿಯಲ್ಲಿ ಇಲ್ಲದ ಪರಿಸ್ಥಿತಿ ಕಾಂಗ್ರೆಸ್ ಪಕ್ಷವನ್ನು ಹಾಳುಮಾಡಿದೆ. ಪ್ರಧಾನಿಗೆ ತನಗೆ ಬೇಡದ ಮಂತ್ರಿಗಳನ್ನು ಕೈಬಿಡಲೂ ಸ್ವಾತಂತ್ರ್ಯವಿಲ್ಲವೇ! ಇನ್ನೂ ಹೊರಗೆಡಹದ ಎಷ್ಟೋ ದೊಡ್ಡ ಭ್ರಷ್ಟಾಚಾರದ ಪ್ರಕರಣಗಳು ಸದ್ಯದಲ್ಲೇ ಇನ್ನಷ್ಟು ಮಂತ್ರಿಗಳನ್ನು ಬಲಿ ತೆಗೆದುಕೊಳ್ಳುತ್ತವೆ. ಅಂದರೆ ಸರ್ಕಾರ ಮೇಲುನೋಟಕ್ಕಷ್ಟೇ ಇದೆ, ಎಲ್ಲೆಲ್ಲೂ ಅನಾಯಕತೆಯೇ ತಾಂಡವವಾಡುತ್ತಿದೆ. ಸಮಯ ಸಾಧಕ ರಾಜಕೀಯ ಪಕ್ಷಗಳೂ ಯಾವುದೇ ಸಿದ್ಧಾಂತದ ಹಂಗಿಲ್ಲದೆ, ಸರ್ಕಾರವನ್ನು ಮತ್ತಷ್ಟು ಜಗ್ಗಿಸಿ, ಅದನ್ನು ಕೆಡವಲು ಯತ್ನಿಸುತ್ತಿವೆ. ನಂತರ ಏನು ಎನ್ನುವುದು ಅವರಿಗೂ ತಿಳಿಯದು. ಈ ಅಸಮರ್ಥ ನರಸತ್ತ ಸರ್ಕಾರ ಬಹುಮತವನ್ನು ಕಳೆದುಕೊಳ್ಳದೆಯೇ ತನ್ನ ಆಂತರಿಕ ವೈರುಧ್ಯಗಳಿಂದಾಗಿ ಪತನವಾಗುವ ಕಾಲ ಬಂದಿದೆ. ಒಂದು ಮುಖ್ಯ ಕಾರಣ ಈ ಸರ್ಕಾರದ ಸ್ವರೂಪ ನೈಜ ಬಂಡವಾಳಶಾಹಿಯೂ ಅಲ್ಲದಿರುವುದು. ಅದು ಕೇವಲ ಕ್ರೋನಿ ಬಂಡವಾಳದ್ದು. ಸ್ವಜನ ಪಕ್ಷಪಾತದ್ದು. ಇನ್ನೊಂದು ಹಂತದಲ್ಲಿ ಈ ಪರಿಸ್ಥಿತಿಯನ್ನು ಅರ್ಥೈಸಬಹುದು: ಜಾಗತಿಕವಾಗಿ ಬಂಡವಾಳ ವ್ಯವಸ್ಥೆಗೆ ಬೆಂಕಿಬಿದ್ದಿದೆ. ಅದು ಎಲ್ಲ ದೇಶಗಳಲ್ಲೂ ರಾಜಕೀಯ ಅಸ್ಥಿರತೆಯಾಗಿ ಹೊರಬಂದಿದೆ. ಅದೇ ದಾರಿ ಹಿಡಿದ ನಮ್ಮದು ಬೇರೆಯಲ್ಲ. ಈ ವ್ಯವಸ್ಥೆ ಬದಲಾಗದೆ ಭ್ರಷ್ಟಾಚಾರಕ್ಕೆ ಪರಿಹಾರವಿಲ್ಲ. ಕಾರಣ ಬಂಡವಾಳದ ಮರ್ಮಸ್ಥಾನವೇ ಭ್ರಷ್ಟಾಚಾರ.

ಭ್ರಷ್ಟ ನ್ಯಾಯಮೂರ್ತಿಯೊಬ್ಬರ ವಿಚಾರಣೆ ರಾಜ್ಯಸಭೆಯಲ್ಲಿ ಮುಗಿದಿದೆ. ಅಲ್ಲಿ ಹೊರಬಂದ ಒಂದು ವಿಷಯವೆಂದರೆ ಈತ ವಕೀಲನಾಗಿದ್ದ ಕಾಲದಿಂದಲೂ ಭ್ರಷ್ಟನೆ. ಆತನ ಭ್ರಷ್ಟತೆಯ ಸುಳಿವು ಆತನನ್ನು ನ್ಯಾಯಮೂರ್ತಿಯಾಗಿ ಆರಿಸುವಾಗಲೇ ಲಭ್ಯವಿತ್ತು. ಆದರೂ ಆತನನ್ನು ನ್ಯಾಯಮೂರ್ತಿಯಾಗಿ ಆರಿಸಿದ ವ್ಯವಸ್ಥೆಯ ಭ್ರಷ್ಟರೆಲ್ಲ ಯಾರು? ಭ್ರಷ್ಟ ವಕೀಲನನ್ನೇ ಪದೇ ಪದೇ ನಂಬಿ, ಆತನಿಗೆ ಪುನಃ ಪುನಃ ಹಣಕಾಸಿನ ಜವಾಬ್ದಾರಿ ವಹಿಸಿದ್ದು ಏಕೆ? ಈ ನ್ಯಾಯ ವ್ಯವಸ್ಥೆಗೆ ಒಂದು ಲೋಕಪಾಲ ಬೇಡವೇ? ನ್ಯಾಯಮೂರ್ತಿಗಳನ್ನು ಆರಿಸುವುದರಿಂದ ಹಿಡಿದು, ಆತನ ಬಡ್ತಿ, ಮುಂದೆ ನಿವೃತ್ತಿ ಆದಮೇಲೆ ಸಿಗುವ ಆಯೋಗಗಳ, ಸಮಿತಿಗಳ ಸದಸ್ಯತ್ವ, ಹೀಗೆ ಎಲ್ಲ ಹಂತಗಳಲ್ಲೂ ಪಕ್ಷಪಾತದ ಭ್ರಷ್ಟಾಚಾರ ತುಂಬಿದೆ. ಒಂದು ಕಾರಣ ಹೀಗಿರಬಹುದು. ವ್ಯವಸ್ಥೆ ತನಗೆ ತನ್ನ ಸ್ವರೂಪಕ್ಕೆ ತಕ್ಕಂತೆ, ತನಗೆ

ಬೇಕಾದ ನ್ಯಾಯ ವ್ಯವಸ್ಥೆಯನ್ನು ಮಾಡಿಕೊಳ್ಳುತ್ತದೆ. ನ್ಯಾಯಾಧೀಶರು ವ್ಯವಸ್ಥೆಯ ಬಾಹಿರವಲ್ಲ ಇಂದು ಒಬ್ಬ ಉದ್ಯಮಪತಿಯ ಪರವಾಗಿ ಒಂದು ಕಟ್ಲೆ ಜಯಿಸಿದರೆ, ಆ ವಕೀಲನನ್ನು ಆ ಉದ್ಯಮ ನ್ಯಾಯಾಧೀಶನಾಗಲು ಸಹಾಯ ಮಾಡಬಲ್ಲದು. ಹಾಗೆಯೇ ಉದ್ಯಮದ ಪರವಾಗಿ ತೀರ್ಪು ನೀಡಿದರೆ ಅವರಿಗೆ ಒಳ್ಳೆಯ ಭವಿಷ್ಯವುಂಟು, ಎಂದು ತೋರುತ್ತದೆ.

* * *

ನಮ್ಮ ದೇಶದ ಮಾಧ್ಯಮಗಳಲ್ಲಿ ತಿಂಗಳಿಡೀ ಅಮೇರಿಕಾದ ಆರ್ಥಿಕ ಪರಿಸ್ಥಿತಿಯದೇ ಚರ್ಚೆ ನಡೆಯಿತು. ಒಬಾಮಾಗೆ ಪ್ರತಿರೋಧ ಒಡ್ಡಿದ ರಿಪಬ್ಲಿಕನ್ ಪಕ್ಷ ವಿಶ್ವಕ್ಕೇ ಸಂಚು ತರುತ್ತಿತ್ತೆಂಬ ಭಾವನೆ ಪ್ರಕಟವಾಗುತ್ತಿತ್ತು. ನಮ್ಮ ದೇಶ ಉಳಿಯಬೇಕಾದರೆ ಅಮೇರಿಕಾದ ಆರ್ಥಿಕತೆಯು ಸುಧಾರಿಸಬೇಕು, ಅದಕ್ಕೆ ನಮ್ಮ ದೇಶವೂ ಬದ್ಧವಾಗಬೇಕೆಂಬಂತಹ ಮಾತುಗಳು ಕೇಳಿಬಂದವು. ಅಮೇರಿಕಾದ ಅತಿದೊಡ್ಡ ಬಂಡವಾಳಿಗರಿಗೆ ತೆರಿಗೆ ವಿನಾಯಿತಿ ಅಗತ್ಯವೆಂಬ ವಿಷಯಕ್ಕೆ ನಮ್ಮ ದೇಶದಲ್ಲಿ ಅದ್ವೈತ ದೊರೆತದ್ದನ್ನು ಬಹುಶಃ ಭಗವತಿಯಂತಹ ಅರ್ಥಶಾಸ್ತ್ರಜ್ಞರು ಮಾತ್ರ ಅರ್ಥೈಸಲು ಸಮರ್ಥರಿರಬೇಕು! ರಷ್ಯದ ಪ್ರಧಾನಿ ಪುತಿನ್ ಅಮೇರಿಕಾವನ್ನು 'ಪರತಂತ್ರ ಜೀವಿ' ಎಂದು ವ್ಯಾಖ್ಯಾನಿಸಿದ್ದು ಎಷ್ಟೋ ಅರ್ಥಶಾಸ್ತ್ರಜ್ಞರ ಗಮನ ಸೆಳೆಯಲಿಲ್ಲ ''ಹಂದಿಯನ್ನು ಕೊಬ್ಬಿಸು, ನೊಣವನ್ನು ಬಡಿದುಹಾಕು'' ಎಂಬುದು ಒಬಾಮಾ ಸೂತ್ರ. ಅದನ್ನು ಮನಮೋಹನ ಸಿಂಗ್ ಸಹ ಅಂಗೀಕರಿಸುತ್ತಿರುವುದು ಅನರ್ಥಕ ವಿಪರ್ಯಾಸ.

* * *

ಹೀಗೊಂದು ಸುದ್ದಿ. ಅಮೇರಿಕಾದಲ್ಲಿ ಒಂದು ಸೇತುವೆ ಕಾಮಗಾರಿ. ಅದಕ್ಕೆ ಬೇಕಿದ್ದ ಕಂಬಗಳನ್ನು ಚೀನಾದಿಂದ ತರಿಸಿಕೊಂಡಿದ್ದರಿಂದ ಕಾಮಗಾರಿ ಕಂಪನಿಗೆ ೨೦೦೦ ಕೋಟಿ ರೂಪಾಯಿ ಉಳಿತಾಯವಾಯ್ತು. ಇದು ಒಂದು ಉತ್ತಮ ವ್ಯವಹಾರ ಮಾದರಿ ಎಂದು ಆ ಕಂಪನಿ ಹೇಳಿಕೊಳ್ಳುತ್ತದೆ. ವಾಸ್ತವವೇನು? ಸ್ಥಳೀಯ ಮಾರುಕಟ್ಟೆಗೆ ಅಷ್ಟು ಕೋಟಿ ವ್ಯಾಪಾರ ಆಗಲಿಲ್ಲ, ಅಂದರೆ ಅಷ್ಟೊಂದು ಜನರಿಗೆ ಉದ್ಯೋಗ ಸಿಗಲಿಲ್ಲ. ಖಾಸಗಿ ಕಂಪನಿಗೆ ಲಾಭವಾದರೂ, ಅದು ರಾಷ್ಟ್ರೀಯವಾಗಿ ನಷ್ಟ. ಅಮೇರಿಕಾದ ಉದ್ಯಮಗಳೆಲ್ಲ ಹೀಗೆ ಹೊರ ಗುತ್ತಿಗೆ ಕೊಟ್ಟರೆ, ಅದರಿಂದ ಅಲ್ಲಿಯ ಸಾಮಾನ್ಯ ಜನರಿಗೆ ಏನು ಪ್ರಯೋಜನ? ಒಂದಿಷ್ಟು ದುಬಾರಿಯೇ ಆದರೂ ಆಂತರಿಕವಾಗಿ ಏನೇನು ಮಾಡಿಕೊಳ್ಳ ಬಹುದೋ ಅವನ್ನು ಆಂತರಿಕವಾಗಿಯೇ ಮಾಡಿಕೊಳ್ಳಬೇಕೆಂಬುದು ಸಾಮಾನ್ಯಜ್ಞಾನ. ಆದರೆ ಬಂಡವಾಳಿಗ ಅರ್ಥಶಾಸ್ತ್ರಕ್ಕೆ, ಖಾಸಗಿ ಲಾಭವೇ ಮುಖ್ಯ. ನಾವೇಕೆ ಈ ಮಾರ್ಗ ಹಿಡಿಯಬೇಕು? ''ನಾವು ಅತ್ಯಂತ ಶ್ರೀಮಂತ ದೇಶ, ನಾವು ಹಾಗೆ ಮಾಡಿಕೊಳ್ಳಬಹುದು'' ಎಂದವರ ಅರ್ಥವ್ಯವಸ್ಥೆಯೇ ಇಂದು ಕಂಗಾಲಾಗಿದೆ. ಇನ್ನು ನಮ್ಮ ಪಾಡೇನು? ಚೀನಾದಿಂದ ಸುಲಭದರದಲ್ಲಿ ಸಿಗುವ ಏರೋಬಿಡ್ಜ್‌ಅನ್ನು ತುಂಬ ಹೆಚ್ಚು ಹಣ ಕೊಟ್ಟು ಅಮೇರಿಕಾದಿಂದ ಕೊಂಡುಕೊಳ್ಳುವ ನಮ್ಮ ಪ್ರಧಾನಿ ಅರ್ಥಶಾಸ್ತ್ರಜ್ಞರೇ ಅಥವಾ ವಿದೇಶಾಂಗ ನೀತಿ ತಿಳಿದವರೇ, ದೇಶಾಭಿಮಾನಿಗಳೇ?

* * *

ಸಾಮಾನ್ಯವಾಗಿ ಬೇರೆ ಬೇರೆ ಪಕ್ಷಗಳು ಒಂದು ಕಾರ್ಯಕ್ರಮದ ಆಧಾರದ ಮೇಲೆ ಜೊತೆಗೂಡಿ ಸರ್ಕಾರ ರಚಿಸಿದಾಗ ಅದನ್ನು ಸಮ್ಮಿಶ್ರ ಸರ್ಕಾರವೆನ್ನುತ್ತಾರೆ. ಕೆಲವೊಮ್ಮೆ ಅಂತಹ ಕಾರ್ಯಕ್ರಮವಿಲ್ಲದೆಯೂ ಹೊಂದಾಣಿಕೆ ಇರಲು ಸಾಧ್ಯ. ಅಧಿಕಾರದ ಅವಕಾಶಕ್ಕಾಗಿ ನಡೆಸಲಾಗುವ ತಂತ್ರ ಅದು. ಆಮೇಲೆ ಇದ್ದೇ ಇದೆ, ನನಗಿಷ್ಟು-ನಿನಗೆಷ್ಟು ಎಂಬ ತಕರಾರು. ಕರ್ನಾಟಕದ ಬಿಜೆಪಿ ಅನನ್ಯವಾದ್ದು; ಆದ್ದರಿಂದ ಒಂದೇ ಪಕ್ಷದ ಸಮ್ಮಿಶ್ರ ಸರ್ಕಾರವನ್ನದು ರಚಿಸಿದೆ. ಆಂತರಿಕ ದ್ವಂದ್ವವು ಇಷ್ಟು ಅಸಹ್ಯವಾಗಿ ಬಹಿರಂಗವಾದ ಉದಾಹರಣೆ ಬೇರೊಂದಿಲ್ಲ. ಬಿಜೆಪಿಯ ರಾಜಕೀಯ ಶಿಸ್ತು ಅಷ್ಟು ಹಸನಾಗಿದೆ! ಅದರ ಎರಡು ಬಣಗಳ ಜಟಾಪಟಿ ಹೊಸ ದಾಖಲೆಯನ್ನು ಸ್ಥಾಪಿಸಿದೆ. ಜೈ ಕರ್ನಾಟಕ ಎನ್ನಬೇಕೆ?

* * *

ತಮ್ಮ ಕೆಲವು ಅಸಾಮಾನ್ಯ ಸಾಧನೆಗಳಿಗಾಗಿ ನೊಬೆಲ್ ಪಾರಿತೋಷಕ ಪಡೆಯ ಬೇಕೆಂದು ಬಯಸಿದ್ದ ಶ್ರೀ. ಯಡಿಯೂರಪ್ಪನವರು ಸದ್ಯಕ್ಕೆ ನ್ಯಾಯಾಲಯಗಳ ಬಾಗಿಲು ತಟ್ಟುತ್ತಿದ್ದಾರೆ. ಅದರ ಫಲಾಫಲಗಳೇನೇ ಇರಲಿ, ಅವರ ಇನ್ನಷ್ಟು ಅವ್ಯವಹಾರಗಳು ಹೊರಬರಲು ಕಾದುನಿಂತಿವೆ. ಉದಾಹರಣೆಗೆ, ಬಹ್ರೇನಿನಲ್ಲಿ ಕರ್ನಾಟಕ ಸರ್ಕಾರ ಕೈಗೊಂಡಿರುವ (ಅಥವಾ ಕೈಗೊಳ್ಳಲಿರುವ) ಒಂದು ಯೋಜನೆ ಇದೆ. ನಮ್ಮ ರಾಜ್ಯದಲ್ಲಿ ಒಂದು ಮನೆ ಕೊಚ್ಚಿಹೋದರೆ ಸರ್ಕಾರ ಕೂಡಲೆ ಸಹಾಯಕ್ಕೆ ಧಾವಿಸುವುದಿಲ್ಲ, ಬದಲಾಗಿ ಅಲ್ಲಿಯೂ ಎಷ್ಟು ಹಣ ಲಪಟಾಯಿಸಬಹುದೆಂದು ಹೊಂಚುಹಾಕುತ್ತದೆ. ಅದು ಬಿಜೆಪಿ ಸರ್ಕಾರದ ವಿಶಿಷ್ಟ ಸಂಸ್ಕೃತಿ. ಆದರೆ ಸರ್ಕಾರದ ಸಂಸ್ಕೃತಿ ಇಲಾಖೆಯಲ್ಲಿ ಕೊಚ್ಚಿ ಹೋಗುವಷ್ಟು ಹಣವಿದೆ. ಅನೇಕ ಮಠಗಳಿಗೆ ಅದರ ಭಾಗ ಆಗಾಗ ದಕ್ಕಿದೆ. ಅವೆಲ್ಲವನ್ನೂ ಮೀರಿಸಿ ಸಂಸ್ಕೃತಿ ಇಲಾಖೆಯಿಂದ ಬಹ್ರೇನ್ ನೂರು ಕೋಟಿ ರೂಪಾಯಿಗಳ ಧಾರಾಳ ಬಳುವಳಿ ಪಡೆದಿದೆ, ಎಂಬ ವರದಿಯೊಂದಿದೆ. ಅದು ಬಹ್ರೇನ್ ರಾಜ್ಯಕ್ಕಲ್ಲದಿರಬಹುದು, ಏಕೆಂದರೆ ಅದು ಕನ್ನಡ ಸಂಸ್ಕೃತಿಯ ವಿಸ್ತರಣೆಗಾಗಿ ನೀಡಲಾಗಿರುವ ಹಣ. ಅಲ್ಲೊಂದು 'ಕನ್ನಡ ಭವನ' ನಿರ್ಮಿಸುತ್ತಾರಂತೆ, ಅದಕ್ಕೆ ನೂರು ಕೋಟಿ ನಮ್ಮ ರಾಜ್ಯದಿಂದ ಹರಿದು ಹೋಗುತ್ತದೆ. ಕನ್ನಡದ ಜನತೆ ಹಾಲುಂಡು ಮಲಗಬಹುದು, ಸಂಸ್ಕೃತಿಯ ಸವಿಯನ್ನು ಅನುಭವಿಸಬಹುದು. ಈ ವ್ಯವಹಾರದಲ್ಲಿ ಯಾರ ಪಾಲು ಎಷ್ಟು ಎಂದು ತಿಳಿದರೆ ಜನತೆಯು ಹಾಲಿನ ಜೊತೆ ಹಯಗ್ರೀವದ ಸಿಹಿಯನ್ನೂ ಸವಿಯಬಹುದು!

* * *

ಈ ತಿಂಗಳಲ್ಲಿ ನಮ್ಮ ರಾಜ್ಯದ ಮಹಿಳಾ ನಾಯಕಿಯರನ್ನು ಹೀನಾಯವಾಗಿ ನಡೆಸಿ ಕೊಳ್ಳಲಾಯಿತು. ಮಾಧ್ಯಮಗಳಿಗೆ ಅದು ಸೊಗಸಿನ ಮೋಜಾಗಿ ಕಂಡದ್ದು ದುರಂತ. ಎಲಾ, ಹೀಗೆ ಹೊಲಸಾಗಿ ನಡೆದುಕೊಳ್ಳುವ ಜನ ನಮ್ಮಲ್ಲಿದ್ದಾರಲ್ಲಾ, ಎಂದು ಕೋಪವಾಗಲಿ ನಾಚಿಕೆಯಾಗಲಿ ಪ್ರಕಟಗೊಳ್ಳದಿದ್ದರೆ ನಮ್ಮ ಸಂಸ್ಕೃತಿ ಅದೆಂಥದು! ಮೂರು ಘಟನೆಗಳು ಜರುಗಿದವು: (ಅ) ಬೆಂಗಳೂರು ಮಹಾನಗರಪಾಲಿಕೆಯ ಸಭೆಯಲ್ಲಿ ಮಹಾ ಅಸಭ್ಯತೆ ತೋರಿಬಂತು. ಭಾರತೀಯ ಜನತಾ ಪಕ್ಷದ ಸದಸ್ಯೆ ಶ್ರೀಮತಿ. ಸರಸ್ವತಮ್ಮ ನೀರಿನ ಅವ್ಯವಹಾರದ ಕತೆಯನ್ನು ಬಿಚ್ಚಿಟ್ಟಾಗ ವಿರೋಧಿ ಕಾಂಗ್ರೆಸ್ ಸದಸ್ಯರು ಆಕೆಯನ್ನು ಮೂದಲಿಸಿ ಎಳೆದಾಡಿದರು. ಅವರಿಗಾರಿಗೂ ಬುದ್ಧಿ ಹೇಳಬೇಕೆಂದು ಆ ಪಕ್ಷದಲ್ಲಿ ಯಾರಿಗೂ ಹೊಳೆಯಲಿಲ್ಲ. (ಆ) ಮೈಸೂರಿನಲ್ಲಿ ಅದೇ ಕಾಂಗ್ರೆಸ್ ಪಕ್ಷದ ನಾಯಕಿ ಶ್ರೀಮತಿ. ತೇಜಸ್ವಿನಿ ರಮೇಶ ಅವರನ್ನು ಪಕ್ಷದ ಕಾರ್ಯಕರ್ತರೆನಿಸಿಕೊಂಡ ಕೆಲವರು ಎಳೆದು ತಳ್ಳಾಡಿದರು. ಆಗಲೂ ನಾಯಕರಾರೂ ಅವರ ಗೌರವದ ಬಗ್ಗೆ ಕಾಳಜಿ ತೋರಲಿಲ್ಲ. (ಇ) ಸಚಿವೆ ಶ್ರೀಮತಿ. ಶೋಭಾ ಕರಂದ್ಲಾಜೆ ಚಾಮುಂಡಿ ಬೆಟ್ಟ ಹತ್ತಿ ದೇವಿಗೆ ಪೂಜೆ ಸಲ್ಲಿಸಿದರು. ಅವರಿಗೆ ಉದ್ದೇಶಿತ ಫಲ ದೊರೆಯಲಿಲ್ಲವೆಂದು ದೇವಿಯನ್ನು ಶೋಭಾ ತರಾಟೆಗೆ ತೆಗೆದುಕೊಂಡರೋ ಇಲ್ಲವೋ ತಿಳಿಯದು. ಅದು ಅಪ್ರಸ್ತುತ ಕೂಡ. ಅವರ ಪೂಜೆಯಿಂದಾಗಿಯೂ ಯಡಿಯೂರಪ್ಪನವರು ಮುಖ್ಯ ಮಂತ್ರಿ ಸ್ಥಾನ ಕಳೆದುಕೊಂಡರೆ ಆಕೆ ತಾನೆ ಏನು ಮಾಡಿಯಾರು! ಒಂದಂಶವಂತೂ ನಿಜ: ಆಕೆಗೆ ಬೆಟ್ಟ ಹತ್ತುವ ಹಕ್ಕಿದೆ, ಅದನ್ನು ಕಾಂಗ್ರೆಸ್ ಪೋಕರಿಗಳು ಅವರಿಗೆ ದಯಪಾಲಿಸಬೇಕಾಗಿಲ್ಲ. ಬೆಟ್ಟವನ್ನಾದರೂ ಹತ್ತಲಿ, ಮರವನ್ನಾದರೂ ಏರಲಿ, ಕಾಂಗ್ರೆಸ್ ಕಾರ್ಯಕರ್ತರು ದೊಣೆನಾಯಕರೇನೂ ಅಲ್ಲವಲ್ಲ. ಶೋಭಾ ಅವರು ಬೆಟ್ಟದ ಮೆಟ್ಟಿಲು ಹತ್ತಿದ ಮಾರನೆಯ ದಿನ ಕಾಂಗ್ರೆಸ್ ಕಾರ್ಯಕರ್ತರು ಬೆಟ್ಟದ ಪಾವಿತ್ರ್ಯ ರಕ್ಷಿಸಲು ಧಾವಿಸಿದರು. ಅದಕ್ಕೆ ಇವರನ್ನು ನೇಮಿಸಿದವರು ಯಾರು? ಈ ಮಂದೆಯು ಮೆಟ್ಟಿಲುಗಳನ್ನು ನೀರಿನಿಂದ ತೊಳೆಯಿತಂತೆ! ಅದರಿಂದ ಇಡೀ ಬೆಟ್ಟ ಮಲಿನವಾಗಿರಬೇಕು! ಹಾಗಾಗಿಲ್ಲವೆಂದು ಭಾವಿಸಿದರೂ ಸರಿಯೆ, ಮೆಟ್ಟಿಲು ತೊಳೆದ ಜನರ ಮನಸ್ಸು ಎಷ್ಟು ಮಲಿನವಾಗಿದೆ! ಒಂದು ರಾಜಕೀಯ ಪಕ್ಷವು ಬೇರೊಂದು ಪಕ್ಷದ ನಾಯಕಿಯ ಬಗೆಗೆ ಹೀಗೆ ನಡೆದುಕೊಳ್ಳಲು ತನ್ನ ಕಾರ್ಯಕರ್ತರನ್ನು ಬಳಸಿಕೊಂಡಿದ್ದು ಖಂಡನೀಯ. ಒಂದೆಡೆ ಸಂಸ್ಕೃತಿಯ ಬಗ್ಗೆ ನಿರರ್ಗಳವಾದ ಭಾಷಣ, ಇನ್ನೊಂದೆಡೆ ಅತ್ಯಂತ ಅನಾಗರಿಕ, ಅಮಾನವೀಯ ದುರ್ನಡತೆ. ನಾವೆತ್ತ ಸಾಗುತ್ತಿದ್ದೇವೆ?

* * *

ಇನ್ನು ಶೋಭಾ ಕರಂದ್ಲಾಜೆ ಅವರ ಪಕ್ಷದ ''ಹಿರಿಮೆ''ಯ ಪರಿಚಯ ಯಾರಿಗಿಲ್ಲ? ದೂರದ ನಾರ್ವೆಯಲ್ಲಿ ಕೊಲೆಪಾತಕನಾಗಿ ಮೆರೆದ ಆ್ಯಂಡರ್ಸ್ ಬೇರಿಂಗ್ ಬ್ರೈವಿಕ್ ಎಂಬುವನು ಶೋಭಾ ಅವರ ಪಕ್ಷಕ್ಕೆ ಘನವಾದ ಪ್ರಮಾಣ ಪತ್ರ ನೀಡಿದ್ದಾನೆ. ಅವನಿಗೆ 'ಹಿಂದುತ್ವ ಶಕ್ತಿಗಳು' ಪ್ರೇರಣೆ ನೀಡಿದುವಂತೆ, ಅವುಗಳ ಸಿದ್ಧಾಂತ ಅವನಿಗೆ ರಂಜಿಸಿತಂತೆ. ಇದಕ್ಕಿಂತಲೂ ಬೇರೆ ಕಪ್ಪು ಮಸಿ ಬೇಕೆ? ಸಮಾನ ರೆಕ್ಕೆಗಳ ಹಕ್ಕಿಗಳು ಸಮಾನವಾಗಿ ಹೆಕ್ಕಿ ಕೊಲ್ಲುತ್ತವೆ, ತಿನ್ನುತ್ತವೆ. ಅಂದರೆ, ಬಿಜೆಪಿಯಲ್ಲಿ ಫ್ಯಾಸಿಸ್ಟ್ ಮನೋಭಾವ ಸಾಂದ್ರವಾಗಿದೆ.

* * *

ಧೋನಿ ಕ್ರಿಕೆಟ್ ತಂಡಕ್ಕೆ ಸೋಲುಂಟಾದ್ದು ಅತ್ಯಂತ ದುಃಖದ ಸಂಗತಿಯೇನಲ್ಲ ಅವರೆಲ್ಲರ ಜಾಹಿರಾತು ದರ ಸ್ವಲ್ಪ ಕುಗ್ಗುತ್ತದೆ, ಅಷ್ಟೆ. ಆದರೆ ಕ್ರಿಕೆಟ್ ದೇವತೆಗಳು ಯಾವ ನೀತಿ ಉಲ್ಲಂಘಿಸಿದರೂ ನಮ್ಮ ಮಾಧ್ಯಮಗಳು ತುಟಿಪಿಟಕ್ಕೆನ್ನುವುದಿಲ್ಲವಲ್ಲ, ಅದು ಖಂಡನೀಯ. ಇತ್ತೀಚೆಗೆ ಸಚಿನ್ ತೆಂಡುಲ್ಕರ್ ಎಂಬ ಆಟಗಾರ ನಾಟಿಂಗ್‌ಹ್ಯಾಮ್‌ನಲ್ಲಿ ದಿನದ ಅಭ್ಯಾಸಕ್ಕೆ ತನ್ನ ತಂಡದ ಇತರರೊಡನೆ ಕ್ಷೇತ್ರ ಪ್ರವೇಶಿಸಿದಾಗ ಅವನ ಮಗನೂ 'ಪ್ರಾಕ್ಟೀಸ್' ಮಾಡಲು ಹೋದ. ಯಾರೂ ಆಕ್ಷೇಪಿಸಲಿಲ್ಲ. ಕ್ರಿಕೆಟ್ ತಂಡದಲ್ಲೂ ವಂಶಪಾರಂಪರ್ಯವೆ? ನಮ್ಮೂರಿನ ರಂಗಣ್ಣನ ಮಗನಿಗೂ ಹಾಗೆ ಅವಕಾಶ ನೀಡುತ್ತಾರೇನು? ಕೋಟ್ಯಾಧೀಶರ ಅಪರಾಧ ಗಣನೆಗೆ ಬರುವುದಿಲ್ಲ, ಬಿಡಿ.

■




**ಜುಲೈ ಸಂಚಿಕೆ**

ಜಾವೇದ್ ಅಕ್ತರ್ ಸುಪ್ರಸಿದ್ಧ ಗೀತಕಾರ, ಚಿಂತಕ, ಚಳುವಳಿಗಾರ, ಪದ್ಮಭೂಷಣ ಪುರಸ್ಕೃತ, ಶಬನಾ ಅಜ್ಮಿ ಸಂಗಾತಿ; ಹೌದು, ಇದೆಲ್ಲದಕ್ಕಿಂತ ಈತನ ಉಪನ್ಯಾಸ ಆತನನ್ನು ಬಹು ದೊಡ್ಡ ಮನುಷ್ಯನನ್ನಾಗಿ ಮಾಡಿ ತೋರಿಸಿತು.

ಆಯುಧಗಳು, ಮಾದಕ ವಸ್ತುಗಳು ಮತ್ತು ಆಧ್ಯಾತ್ಮಿಕತೆ ಈ ಮೂರೂ ಇಂದು ಜಗತ್ ವ್ಯಾಪಕವಾದ ದೊಡ್ಡ ಉದ್ಯಮಗಳು ಎಂದು ಭಾಷಣ ಪ್ರಾರಂಭಿಸಿ, ಹಸಿದ ನಾಯಿ ಎಲುಬು ಕಚ್ಚುವಾಗ ಸೀಳಿದ ನಾಲಿಗೆಯ ತನ್ನ ರಕ್ತವನ್ನೆ ಸವಿಯುವಂತೆ ಅಧ್ಯಾತ್ಮ ಸಮಾಧಾನಕ್ಕೆಂದು ಬರುವವರ ಸ್ಥಿತಿ ಎಂದು ವಿವರಣೆ ನೀಡುತ್ತ, ಹೇಗೆ ಕೃಷ್ಣ, ಗೌತಮ, ಕಬೀರ, ವಿವೇಕಾನಂದರಂಥವರಿಂದ ಬೇರೆಯಾಗಿ ಅಧ್ಯಾತ್ಮವು ವ್ಯಾಪಾರೀಕರಣವಾಗುತ್ತಿದೆ ಎಂದು ಭಾಷಣದುದ್ದಕ್ಕೂ ವೈಚಾರಿಕ ಸ್ವರೂಪದೊಳಗೆ ಸೆಳೆದುಕೊಳ್ಳುತ್ತಾರೆಂಬುದು ಬಹುಮುಖ್ಯ.

ರವಿಶಂಕರ್, ಪ್ರಧಾನಿ ಇಂಥ ಮಹಾನುಭಾವರೆದುರು ''ಸ್ವಾಮಿ! ಶ್ರೀಮಂತರಿಗೆ ಉಸಿರಾಡುವುದನ್ನು ಹೇಳಿ ಕೊಟ್ಟರೆ ಸಾಲದು. ಅದು ಅವರಿಗೆ ಕೇವಲ ವಿನೋದ ವಾಗಿದೆಯಷ್ಟೆ. ಆತ್ಮಸಾಕ್ಷಿ ಸತ್ತವರ ನಟನೆಗಳು ಅವು. ಅದು ನಯವಂಚನೆ. ಇದಕ್ಕೆ ಇಂಗ್ಲಿಷಿನಲ್ಲಿ ಬಳಸುವ ಪದ ಹೋಕ್ಸ್'' ಎನ್ನುತ್ತಾರೆ ಅಖ್ತರ್. ಈ ರೀತಿ ಪ್ರಶ್ನಿಸುವ ಧೈರ್ಯವು ಅಲ್ಲಮನಿಗೆ, ವಿವೇಕಾನಂದರಿಗೆ, ಕುವೆಂಪು, ನಾರಾಯಣಗುರು ಅಂಥವರಿಗೆ ಮಾತ್ರ ಸಾಧ್ಯ. ಭಲೇ ಅಖ್ತರ್ ! ಮಾಧ್ಯಮಗಳು ಸಹ ಏನಾಗಿಹೋಗಿವೆ !

ಬೆಂಗಳೂರು **ಡಾ|| ರಾಜೇಗೌಡ ಹೊಸಹಳ್ಳಿ**

ಪತ್ರಿಕೆಯ ಹೆಸರೇ ಸೂಚಿಸುವ ರೀತಿಯಲ್ಲಿ ಹೊಸದಾಗಿಯೇ ವೀಕ್ಷಿಸುತ್ತಿರುವ ನನಗಂತೂ ಜುಲೈ ಸಂಚಿಕೆ ಹೊರಪುಟದಿಂದ ಸಂಪುಟ ಪೂರ್ತಿಯಾಗಿ ಹೊಚ್ಚ ಹೊಸದೊಂದನ್ನು ನೋಡುತ್ತಿರುವಂತೆ ಭಾಸವಾದುದು ಪ್ರಾಮಾಣಿಕವಾದ ಸತ್ಯವೇ ಹೌದು. ಅಂತರಂಗದೊಳಗಿರುವ ಹುಳುಕುಗಳ ಸುಳಿವನ್ನು ಬಹಿರಂಗಕ್ಕೆಳತರುವ ಕ್ಷಕಿರಣ ಪ್ರಯೋಗದ ರೀತಿಯಲ್ಲಿ ಜೋಡಿ ಹಕ್ಕಿಗಳ ಅಸ್ಥಿಪಂಜರಕ್ಕೇ ನೈಜತೆಯ ಹೊಳಪನ್ನು ನೀಡಿದ-ವಾದವಿವಾದಗಳ ಸುಳಿಯಲ್ಲಿ ಸುಳಿ ಸುಳಿದರೂ ಹೊರಜಗತ್ತಿಗೆ ಇನ್ನಿಲ್ಲದಾದ ನವ್ಯದೃಷ್ಟಿಯ ಕುಂಚ ಕಲಾವಿದ ಹುಸೇನ್ ಅವರ ಕಲಾಕೃತಿಗಳುಳ್ಳ ಹೊಸ ಬಗೆಯ ಆವಿಷ್ಕಾರ ಒಂದಿಗೇ ಸೃಷ್ಟಿಕರ್ತನ ಸೆಳೆತ ದೊಂದಿಗೆ ಸೇರಿಹೋದ ಈ ಅಪೂರ್ವ ಕಲಾವಿದನಿಗೆ ಅರ್ಪಿಸಿದ ಅಶ್ರುತರ್ಪಣಾ ನುಡಿನಮನವೇ ಮೊದಲಾದವು ಗಮನ ಸೆಳೆದವು.

ಕಾಸರಗೋಡು **ಕೀರಿಕ್ಕಾಡು ವನಮಾಲ ಕೇಶವ ಭಟ್ಟ**

**ಆಗಸ್ಟ್ ಸಂಚಿಕೆ**

ಶ್ರೀ ಬರಗೂರು ಅವರ ''ಜನಲೋಕಪಾಲ: ಶಕ್ತಿ ಮತ್ತು ಮಿತಿ'' ಕುರಿತು : ಯಾವುದೇ ಒಂದು ವ್ಯವಸ್ಥೆಯಲ್ಲಿ ಹಣ, ಜಾತಿ ಮತ್ತು ರಾಜಕೀಯ ಅಂಶಗಳಿಂದ ಮುಕ್ತವಾದಾಗ ಮಾತ್ರ ಸಾರ್ವಜನಿಕರಿಗೆ ಅದರಿಂದ ಲಾಭವಾಗುತ್ತದೆ ಹೊರತು ಹಾನಿಯಾಗುವುದಿಲ್ಲ. ವ್ಯವಸ್ಥೆಯ ಮುಖ್ಯಸ್ಥರು ಪ್ರಾಮಾಣಿಕ, ದಕ್ಷರಾಗಿರಬೇಕು. ಇಲ್ಲದಿದ್ದಲ್ಲಿ ವ್ಯವಸ್ಥೆಯ ಉದ್ದೇಶ ಸಾಕಾರಗೊಳಿಸಲು ಸಾಧ್ಯವಾಗದೆ ಮುರಿದುಬೀಳುತ್ತದೆ. ಕಾನೂನುಗಳು




ಎಷ್ಟೇ ಬಲಿಷ್ಠವಾಗಿದ್ದರೂ, ಅದನ್ನು ಜಾರಿಗೊಳಿಸುವವರು ಪ್ರಾಮಾಣಿಕರು, ದಕ್ಷರು, ಜಾತ್ಯತೀತರಾಗಿರಬೇಕು. ಅದಿಲ್ಲದಿದ್ದಲ್ಲಿ ಕಾನೂನು ಹಲ್ಲಿಲ್ಲದ ಹಾವಿನಂತೆ.

ಹೀಗೆ ಕಾನೂನುಗಳು ಎಷ್ಟೇ ಬಲಿಷ್ಠವಾಗಿದ್ದರೂ ಅದನ್ನು ಜಾರಿಗೆ ತರುವವರಲ್ಲಿ ಪ್ರಾಮಾಣಿಕತನ, ದಕ್ಷತೆ, ಧೈರ್ಯ ಮತ್ತು ಜಾತ್ಯಾತೀತರಾಗಿರಬೇಕು ಎನ್ನುವ ಅಂಶವನ್ನು ಯಾರೂ ಅಲ್ಲಗಳೆಯುವಂತಿಲ್ಲ. ಭ್ರಷ್ಟಾಚಾರ ಬೆಳೆದಂತೆ ಜನಸಾಮಾನ್ಯರ ಜೀವನದ ಮೇಲೆ ಕೆಟ್ಟ ಪರಿಣಾಮ ಬೀರುತ್ತದೆ. ಒಬ್ಬ ಒಮ್ಮೆ ಭ್ರಷ್ಟನಾದರೆ ಮತ್ತೆ ಪ್ರಾಮಾಣಿಕನಾಗುವುದಿಲ್ಲ.

ತುಮಕೂರು **ವಾಮನರಾವ್**

ವಿಷ್ಣು ನಾಯ್ಕ ಅವರ ಲೇಖನ ಚಿಂತನಾರ್ಹವಾಗಿದೆ. ಸಾರ್ವಜನಿಕರ ಮತ್ತು ಭಕ್ತರ ದೇಣಿಗೆಯಿಂದ ನೀಡಲ್ಪಟ್ಟ ಕಾಣಿಕೆ - ದಾನಗಳಿಂದ ಸಂಗ್ರಹವಾದ ಈ ಸಂಪತ್ತು ಸಮರ್ಥವಾಗಿ ಸದ್ವಿನಿಯೋಗವಾಗಬೇಕು.

ಬಿ.ವಿ.ಎಚ್. ಅವರ ವ್ಯಂಗ್ಯಚಿತ್ರ 'ಸಾರ್, ನಮ್ಮ ಕಾಡು ನಮಗೆ ಕೊಡಿ' ಎಂಬ ಮನವಿ ಸಲ್ಲಿಸುತ್ತಿರುವ ಆನೆಗಳ ಸಂಕಷ್ಟ ಮಾನವೀಯವಾಗಿದೆ.

ಮೈಸೂರು **ಕೊ. ಸು. ನರಸಿಂಹಮೂರ್ತಿ**

ಶ್ರೀ ವಿಷ್ಣು ನಾಯ್ಕ ಅವರ 'ಈ ಸಂಪತ್ತು ಯಾರಪ್ಪನ ಆಸ್ತಿ' ಲೇಖನ ಮನೋಜ್ಞವಾಗಿದೆ ಮತ್ತು ವೈಚಾರಿಕತೆ ಯಿಂದ ಕೂಡಿದೆ. ಕೇರಳ ರಾಜ್ಯಕ್ಕೆ ಸೇರಿದ ಅನಂತ ಪದ್ಮನಾಭ ದೇಗುಲದ ನೆಲಮಾಳಿಗೆಗಳಲ್ಲಿ ಅಪಾರ ಪ್ರಮಾಣದ ಚಿನ್ನ ಬೆಳ್ಳಿ ದೊರೆತಿರುವುದು, ಕೇರಳ ಸರ್ಕಾರಕ್ಕೆ, ಕೇರಳ ಜನತೆಗೆ ಸಂತೋಷವಾಗಬೇಕಾಗಿತ್ತು. ಆದರೆ ಸಂತೋಷಕ್ಕಿಂತ ಸಮಸ್ಯೆಗಳೇ ಹುಟ್ಟಿಕೊಂಡಿವೆ. ಅಷ್ಟೊಂದು ಪ್ರಮಾಣದ ಸಂಪತ್ತಿನ ಮಾಲೀಕತ್ವದ ಪ್ರಶ್ನೆ, ಆ ಸಂಪತ್ತಿನ ರಕ್ಷಣೆಯ ಪ್ರಶ್ನೆ ಈಗ ಮುಖ್ಯವಾಗಿದೆ. 'ಇಷ್ಟು ಪ್ರಮಾಣದ ಸಂಪತ್ತನ್ನು ಕಾಯುವುದಕ್ಕೆ ಪೊಲೀಸ್ ಇಲಾಖೆಗೆ ಖಂಡಿತ ಸಾಧ್ಯವಿಲ್ಲ, ವಿಶೇಷ ತರಬೇತಿ ಪಡೆದ ಸೇನಾಭದ್ರತಾ ಪಡೆಯೇ ಬೇಕು' ಎಂದು ತಿರುವನಂತಪುರ ಜಿಲ್ಲೆಯ ಪೊಲೀಸ್ ಅಧಿಕಾರಿಗಳೇ ಹೇಳಿದ್ದಾರೆ.

ಕೆಲವರು ಅಭಿಪ್ರಾಯದಲ್ಲಿ, ಅಲ್ಲಿ ದೊರೆತಿರುವ ಆ ಸಂಪತ್ತನ್ನು 'ಮ್ಯೂಸಿಯಂ' ಮಾಡಬೇಕೆಂಬುದಾಗಿರುತ್ತದೆ. ಇದು ಹೇಗಿರುತ್ತದೆಂದರೆ ಒಂದು ಹೊತ್ತಿನ ಊಟಕ್ಕೂ ಗತಿಯಿಲ್ಲದ ಜನಗಳು ವಾಸಿಸುವ ಪ್ರದೇಶದಲ್ಲಿ, 'ಆಹಾರ ಪದಾರ್ಥಗಳ ಮ್ಯೂಸಿಯಂ' ಮಾಡಿದಂತೆ ಇರುತ್ತದೆ. ಯಾವುದೇ ಸಂಪತ್ತು ಇರುವುದು ಮತ್ತು ಇರಬೇಕಾದುದು ಪ್ರಪ್ರಥಮವಾಗಿ ಮನುಷ್ಯನ ಅಗತ್ಯ ಗಳನ್ನು ಪೂರೈಸಲು.

ಈ ಹಿಂದಿನ ಸಮಾಜದ ಜನಗಳನ್ನು ಈ ಸಂಪತ್ತಿನಿಂದ ವಂಚಿಸಿದ್ದು ಸಾಕು. ದೇವಸ್ಥಾನದ ನೆಲಮಾಳಿಗೆಯಲ್ಲಿ ದೊರೆತ ಈ ಸಂಪತ್ತು, ಜನಗಳ ಉಪಯೋಗಕ್ಕೆ ಬರುವಂತೆ, ಕೇರಳ ಸರ್ಕಾರವೋ, ದೇವಸ್ಥಾನದ ಆಡಳಿತ ಮಂಡಳಿಯೋ, ಕೂಡಲೇ ಕ್ರಮ ಕೈಗೊಂಡು, ಜನಪರ ಕಾಳಜಿಯನ್ನು ಮೆರೆಯಬೇಕಾಗುತ್ತದೆ. ಒಂದು ಧಾರ್ಮಿಕ ಕ್ಷೇತ್ರ ಮಾಡಬೇಕಾದ ಪ್ರಪ್ರಥಮ ಕೆಲಸ ಇದಕ್ಕಿಂತ ಬೇರೇನಲ್ಲ.

ಶ್ರೀ ವಿಷ್ಣು ನಾಯ್ಕ ಅವರು ತಮ್ಮ ಲೇಖನದಲ್ಲಿ ಸ್ಪಷ್ಟವಾಗಿ ನಿರೂಪಿಸಿರುವಂತೆ ''ನಗದು ರೂಪದಲ್ಲೇ ಇರಲಿ, ಆಭರಣಗಳ ರೂಪದಲ್ಲೇ ಇರಲಿ, ವಿಗ್ರಹಗಳ ರೂಪದಲ್ಲೆ ಇರಲಿ, ಒಂದೆಡೆ ಸಂಗ್ರಹವಾಗಿರುವ ಈ ಬಗೆಯ ಸಂಪತ್ತು ಯಾರೊಬ್ಬರ ದುಡಿಮೆಯ ಫಲವೂ ಅಲ್ಲ, ಅದರ ಹಿಂದೆ ಕೋಟಿ ಕೋಟಿ ಜನರ ಬೆವರಿನ ಶ್ರಮ ಇದೆ, ಎಂಬ ಎಚ್ಚರ ನಮ್ಮಲ್ಲಿರಬೇಕು. ಕಾರಣ ಯಾವುದೇ ಇರಲಿ, ಒಟ್ಟಿನಲ್ಲಿ ಅಲ್ಲಿ ಸಂಗ್ರಹವಾದ ಸಂಪತ್ತು (ರಾಜರ) ಪ್ರಾಮಾಣಿಕ ದುಡಿಮೆಯದಲ್ಲ. ಜನಸಾಮಾನ್ಯರ ಬೆವರನ್ನು ಕದ್ದದ್ದು. ಯಾರನ್ನೋ ಸುಲಿಗೆ ಮಾಡಿ, ಶ್ರೀಮಂತನಾದವನೊಬ್ಬ ಕೋಟ್ಯಾಧಿಪತಿ ಯಾದಾಗ ತಿರುಪತಿ ತಿಮ್ಮಪ್ಪನಂಥವನಿಗೆ, ಅನಂತ ಪದ್ಮನಾಭನಂಥವನಿಗೆ ಒಂದಷ್ಟು ಕಾಣಿಕೆ ಕೊಟ್ಟು ಬಂದುಬಿಡುತ್ತಾನೆ'' ಎಂಬ ಮಾತು ಅಕ್ಷರಶಃ ನಿಜ.

ಸಾಮಾನ್ಯ ಜನರಿಗೆ ಸೇರಬೇಕಾದ ಸಂಪತ್ತು, ಈ ರೀತಿ ದೇವಸ್ಥಾನಗಳಲ್ಲೋ, ಮಠಗಳಲ್ಲೋ ಶೇಖರಣೆ ಯಾಗುತ್ತಿರುವುದರಿಂದಲೇ ''ಒಂದೆಡೆ ದಮನೀಯ

ಹಸಿವು, ನಿರುದ್ಯೋಗ, ವಿದೇಶಿ ಸಾಲ ಮಾಡುವ ಪರಿಸ್ಥಿತಿ ಉಂಟಾಗಿರುವುದು.'' ಅದಕ್ಕಾಗಿಯೇ ಶ್ರೀಯುತರು ''ಇಂದು ಇಂಡಿಯಾದಲ್ಲಿ ಬಳಕೆಗೆ ಬಾರದ ಸಂಪತ್ತೇನಿವೆಯೋ ಅವನ್ನೆಲ್ಲಾ ಸರ್ಕಾರ ತನ್ನ ಆಸ್ತಿಯೆಂದು ಘೋಷಿಸಬೇಕಾದ ಅನಿವಾರ್ಯತೆ ಇದೆ. ಅಗತ್ಯವಿದ್ದಲ್ಲಿ ಸಂವಿಧಾನಕ್ಕೇ ತಿದ್ದುಪಡಿ ತರಬೇಕಾದ್ದಿದೆ.'' ಎಂದು ಕರೆ ಕೊಡುವುದು. ಈ ನಿಟ್ಟಿನಲ್ಲಿ ಸರ್ಕಾರ ಕಾರ್ಯೋನ್ಮುಖವಾಗಬೇಕಿದೆ.

*ಬೆಂಗಳೂರು* **ಸಿ. ಚಿಕ್ಕತಿಮ್ಮಯ್ಯ ಹಂದನಕೆರೆ**

**ಪ್ರಾಚೀನ ಭಾರತೀಯ ಸಮಾಜದಲ್ಲಿ ತಿಕ್ಕಾಟಗಳು**

ಜೂನ್ ಸಂಚಿಕೆಯ ಈ ಲೇಖನ ಭಾರತೀಯ ತತ್ವಶಾಸ್ತ್ರ ಪರಂಪರೆಯ ಎರಡು ಮಜಲುಗಳನ್ನು ಪರಿಚಯಿಸಿದೆ. ಲೇಖನದ ತಲೆಬರಹದಲ್ಲಿನ 'ತಿಕ್ಕಾಟಗಳು' ಎಂಬ ಪದಕ್ಕಿಂತ 'ವೈಚಾರಿಕ ಸಂಘರ್ಷ' ಎಂಬ ಪದ ಸೂಕ್ತವಾಗಿ ಇರುತ್ತಿತ್ತು ಎಂಬುದು ನನ್ನ ಅಭಿಪ್ರಾಯ.

ಭಾರತೀಯ ತತ್ವಶಾಸ್ತ್ರ ಪರಂಪರೆಯ ಪ್ರಸ್ತಾಪ ಬಂದಾಗ, ಭಾವನಾವಾದ ಚಿಂತನೆಗಳು ಹೆಚ್ಚು ಪ್ರಚಾರ ಮತ್ತು ಜನಪ್ರಿಯತೆಯನ್ನು ಪಡೆದಿವೆ. ಭಾವನಾವಾದವನ್ನು ಪ್ರತಿಪಾದಿಸುವ ಚಿಂತಕರಾದ ಯಾಜ್ಞವಲ್ಕ್ಯ, ಶಂಕರಾಚಾರ್ಯ, ಗೌಡಪಾದ, ರಾಮಾನುಜಾಚಾರ್ಯ, ಮಧ್ವಾಚಾರ್ಯ ಮುಂತಾದವರ ಗ್ರಂಥಗಳು ಮಾರುಕಟ್ಟೆಯಲ್ಲಿ ಸುಲಭವಾಗಿ ಲಭಿಸುತ್ತವೆ. ಆದರೆ, ಭಾವನಾವಾದದ ವಿಚಾರಗಳನ್ನು ವಿರೋಧಿಸಿ ಅಷ್ಟೇ ಗಹನವಾದ ಪರಿಕಲ್ಪನೆ ಮತ್ತು ವಾದಗಳನ್ನು ಮಂಡಿಸಿದ ಉದ್ದಾಲಕ, ಕಪಿಲ, ಗೌತಮ, ಕಣಾದ, ನಾಗಾರ್ಜುನ ಮುಂತಾದವರ ಕೃತಿಗಳು ಜನಸಾಮಾನ್ಯರಿಗೆ ಲಭ್ಯವಿಲ್ಲ.

ಮಾನವದೇಹದ ಪಂಚೇಂದ್ರಿಯಗಳ ಅನುಭವದ ವ್ಯಾಪ್ತಿಯಲ್ಲಿ ಗೋಚರಿಸುವ ಪ್ರಾಕೃತಿಕ ವಾಸ್ತವ ಪ್ರಪಂಚ ಮತ್ತು ಸಮಾಜ ಭೌತವಾದದ ಕೇಂದ್ರಬಿಂದುವಾಗಿದೆ. ಆದರೆ, ಭಾವನಾವಾದವು ಪ್ರಾಪಂಚಿಕ ಅಸ್ತಿತ್ವವನ್ನು ಮತ್ತು ಇಂದ್ರಿಯಗಳ ಅನುಭವವನ್ನು ಮಿಥ್ಯೆಯೆಂದು ಜರಿಯುತ್ತದೆ. ಪ್ರಪಂಚದಲ್ಲಿ ವ್ಯಕ್ತಿಯ ಅಸ್ತಿತ್ವ ಮತ್ತು ಜೀವನ ಕ್ಷಣಿಕ ಹಾಗೂ ನಶ್ವರ ಎಂದು ಸಾರುತ್ತದೆ. ಎರಡು ವಿಭಿನ್ನ ಗುರಿಗಳನ್ನು ಭೌತವಾದ ಮತ್ತು ಭಾವನಾವಾದ ವ್ಯಕ್ತಿಯ ಮುಂದೆ ಇಟ್ಟಿವೆ.

ಭೌತವಾದದ ಚಿಂತನೆಗಳು ವ್ಯಕ್ತಿಯೋರ್ವ ಸಮಾಜದ ಭಾಗವಾಗಿ ಸಾಮಾಜಿಕ ಅನುಭವಗಳನ್ನು ಮೈಗೂಡಿಸಿಕೊಂಡು ಸಮಾಜದ ಆಗುಹೋಗುಗಳಿಗೆ ಸ್ಪಂದಿಸಿ ಸಾಮಾಜಿಕ ಸ್ವಾಸ್ಥ್ಯ ಮತ್ತು ಪ್ರಗತಿಯನ್ನು ಗುರಿಯನ್ನಾಗಿ ಸ್ವೀಕರಿಸಬೇಕೆಂದು ಬಯಸುತ್ತದೆ. ಭಾವನಾವಾದವು, ವ್ಯಕ್ತಿಯು ಸಮಾಜ ಮತ್ತು ಪ್ರಾಕೃತಿಕ ಜಗತ್ತಿನ ನಶ್ವರ ಸ್ವರೂಪವನ್ನು ಅರಿತುಕೊಂಡು, ಆತ್ಮಚಿಂತನೆಯಲ್ಲಿ ತೊಡಗಿ, 'ಆದಿಮೂಲ' ಸ್ವರೂಪನಾದ ಪರಬ್ರಹ್ಮನ ಸಾಕ್ಷಾತ್ಕಾರ ಪಡೆದು ಜೀವನ್ಮುಕ್ತಿ ಪಡೆಯುವುದೇ ಪರಮ ಗುರಿಯೆಂದು ಸಾರುತ್ತದೆ. ಹೇರಳವಾದ ಆಧ್ಯಾತ್ಮಿಕ ಪರಿಕಲ್ಪನೆಗಳನ್ನು ಆತ್ಮೋದ್ಧಾರದ ಸಾಧನಗಳೆಂದು ನೀಡಿವೆ. ಡಾ॥ ದೇವಿಪ್ರಸಾದ ಚಟ್ಟೋಪಾಧ್ಯಾಯರು ತಮ್ಮ ಲೋಕಾಯತ ಮತ್ತು ಇತರ ಸಂಶೋಧನಾ ಗ್ರಂಥಗಳಲ್ಲಿ ಭಾರತೀಯ ತತ್ವಶಾಸ್ತ್ರ ಪರಂಪರೆಯ ವೇದ, ಉಪನಿಷತ್ತು ಮತ್ತು ಇತರ ದರ್ಶನ ಸಾಹಿತ್ಯಗಳ ಆಳವಾದ ಅಧ್ಯಯನದ ಆಧಾರದ ಮೇಲೆ ತಮ್ಮ ಚಿಂತನೆಗಳನ್ನು ಅಭಿವ್ಯಕ್ತಿಗೊಳಿಸಿದ್ದಾರೆ. ಪ್ರೊ॥ ಹಿರಿಯಣ್ಣನವರು ಸಹ ತಮ್ಮ ಮೇರು ಕೃತಿಯಲ್ಲಿ ಭಾರತೀಯ ತತ್ವಶಾಸ್ತ್ರದ ವಿಭಾಗಗಳಾದ ಸಾಂಖ್ಯ, ನ್ಯಾಯ ವೈಶೇಷಿಕ, ಮೀಮಾಂಸೆ ಮತ್ತಿತರ ದರ್ಶನ ಸಾಹಿತ್ಯದ ಚಿಂತನೆಗಳನ್ನು ವಿವರಿಸಿದ್ದಾರೆ. ಆದರೆ, ಡಾ॥ ದೇವಿಪ್ರಸಾದ ಚಟ್ಟೋಪಾಧ್ಯಾಯ ಅವರು ಭಾವನಾವಾದ ಮತ್ತು ಭೌತವಾದ ಎಂಬ ಭಿನ್ನವಾದ ವಿಚಾರಧಾರೆಗಳನ್ನು ಆಯಾ ಕಾಲಘಟ್ಟದ ಸಾಮಾಜಿಕ ವಿಕಾಸದ ಹಿನ್ನೆಲೆಯಲ್ಲಿ ವಿಶ್ಲೇಷಣೆ ಮಾಡಿದ್ದಾರೆ. ಚತುರ್ವೇದಿ ಸಾಹಿತ್ಯವನ್ನು ವೇದಕಾಲೀನ ಸಾಮಾಜಿಕ ಸ್ಥಿತಿಗತಿಗಳು ಮತ್ತು ಬೆಳವಣಿಗೆಯ ಹಿನ್ನೆಲೆಯಲ್ಲಿ ವಿವರಿಸಿದ್ದಾರೆ. ಯಾವುದೇ ವೈಚಾರಿಕ ಬೆಳವಣಿಗೆಯಾಗಲೀ ಅಥವಾ ಸಿದ್ಧಾಂತವಾಗಲೀ ಆಯಾ ಕಾಲಘಟ್ಟದ ವಸ್ತುನಿಷ್ಠ ಸಾಮಾಜಿಕ ಬೆಳವಣಿಗೆಯ ಅಡಿಪಾಯದ ಮೇಲೆ ಮೂಡಿಬರುತ್ತದೆ ಎಂಬುದು ಅವರ ವಾದ.

ಭಾರತೀಯ ತತ್ವಶಾಸ್ತ್ರ ಪರಂಪರೆಯ ಚರ್ಚೆ ನಡೆಯುವಲ್ಲಿ, ಪೂರ್ವಗ್ರಹಪೀಡಿತ ನಿಲುವುಗಳೇ ಹೆಚ್ಚು ಪ್ರಕಟವಾಗುತ್ತವೆ. ದೇಶಾದ್ಯಂತ ಶಂಕರ, ರಾಮಾನುಜ ಮತ್ತು ಮಧ್ವಾಚಾರ್ಯರ ಜಯಂತ್ಯುತ್ಸವಗಳು ಮತ್ತು ಆರಾಧನಾ ಮಹೋತ್ಸವಗಳು ಆಚರಿಸಲ್ಪಡುತ್ತವೆ. ಚಾರ್ವಾಕ, ಸುಶ್ರುತ ಮತ್ತಿತರರ ಆಲೋಚನೆಗಳನ್ನು ಜನಸಾಮಾನ್ಯರು ಕುತೂಹಲಕ್ಕಾಗಿಯಾದರೂ ತಿಳಿದುಕೊಳ್ಳಲು ಆಸಕ್ತಿ ತೋರುವುದಿಲ್ಲ. ಪಾಪ, ಪುಣ್ಯ, ಸ್ವರ್ಗ, ನರಕ ಎಂಬ ಪರಿಕಲ್ಪನೆಗಳು ಮತ್ತು ಸಾವಿನ ನಂತರದ 'ನಿರ್ಣಾಯಕ ದಿನ' ಎಂಬ ಕಲ್ಪನೆ ಮುಗ್ಧರನ್ನು ಭಯಭೀತರನ್ನಾಗಿ ಮಾಡಿವೆ. ಜನಸಾಮಾನ್ಯರಿಗಾಗಿ ಅನೇಕ ಅರ್ಥರಹಿತ ವೈದಿಕ ಆಚರಣೆಗಳ ಬಲೆಯನ್ನು ಹೆಣೆಯುವಲ್ಲಿ ವೈದಿಕ ಸಮುದಾಯ ಯಶಸ್ವಿಯಾಗಿದೆ.

ಭಾರತೀಯ ತತ್ವಶಾಸ್ತ್ರ ಪರಂಪರೆಯಲ್ಲಿ ಗಟ್ಟಿಕಾಳು ಮತ್ತು ಜೊಳ್ಳನ್ನು ಬೇರ್ಪಡಿಸುವ ವೈಚಾರಿಕ ಲೇಖನಗಳ ಅಗತ್ಯವಿದೆ.

*ಬೆಂಗಳೂರು* **ಶಂಕರನಾರಾಯಣ**

**ಕಾಗೇರಿಯವರ ಕಾಡುಕುಣಿತಗಳು**

ನಮ್ಮ ರಾಜ್ಯದಲ್ಲೀಗ ಶಿಕ್ಷಣ ಮಂತ್ರಿ ಶ್ರೀ ಕಾಗೇರಿಯವರು ತಲ್ಲಣಗಳನ್ನು ಸೃಷ್ಟಿಸಿದ್ದಾರೆ. ಗಣಿಧಣಿಗಳು ಎಬ್ಬಿಸಿದ ಧೂಳು ಸರ್ಕಾರವನ್ನು ಸುತ್ತಿಕೊಂಡಿರುವಾಗ, ಇಂಗ್ಲಿಷ್ ಮಾಧ್ಯಮದ ಶಾಲೆಗಳು ಮತ್ತು ಭಗವದ್ಗೀತೆಯ ಬಿರುಗಾಳಿ ಎದ್ದಿವೆ. ಇವುಗಳೆರಡರಿಂದ ಕನ್ನಡ ಭಾಷೆ ಮತ್ತು ಸಂಸ್ಕೃತಿ ನಾಶವಾಗುವ ಸಂದರ್ಭ ಬಂದಿದೆ.

ಮೊದಲಿಗೆ, ನಾನು ಕನ್ನಡದ ಪ್ರಸಿದ್ಧ ಸಾಹಿತಿ ಅಲ್ಲ; ಆದರೆ ವೃತ್ತಿಯಿಂದ ಭೂವಿಜ್ಞಾನಿ ಮತ್ತು ಪ್ರವೃತ್ತಿಯಿಂದ ಕನ್ನಡದಲ್ಲಿ ಆಗಾಗ ಲೇಖನಗಳನ್ನು ಬರೆಯುವ ವ್ಯಕ್ತಿ ಎಂದು ಪರಿಚಯಿಸಿಕೊಂಡು ಮುಂದುವರೆಯುತ್ತೇನೆ.

ನಾನು ನನ್ನ ಬಿ.ಎಸ್‌ಸಿ.ವರೆಗಿನ ಅಭ್ಯಾಸವನ್ನು ಅಂದಿನ ನೈಜಾಂ ಪ್ರಾಂತದಲ್ಲಿ ಪೂರೈಸಿದೆ. ಅಂಕಲಿಪಿ ಪಾಠದಿಂದ ಹೈಸ್ಕೂಲು ಮುಗಿಸುವ ತನಕ ಕನ್ನಡ ಮಾಧ್ಯಮದಲ್ಲಿಯೇ ಕಲಿತವನು. ಆಗಿನ ಭಾಷಾನೀತಿಯ ಪ್ರಕಾರ ಪ್ರಾಥಮಿಕ ಹಂತದಲ್ಲಿ (ಅಂದರೆ ನಾಲ್ಕನೇ ಇಯತ್ತೆ) ಕೇವಲ ಮೂರು ಭಾಷೆಗಳ ಬೋಧನೆ, ನೀತಿ-ಪಾಠಗಳು ಮತ್ತು ಆಟಗಳು. ಕನ್ನಡ, ಇಂಗ್ಲಿಷ್ ಮತ್ತು ಉರ್ದು ಭಾಷೆಗಳ (ನಂತರ ಹಿಂದಿ) ಭದ್ರ ಬುನಾದಿಯನ್ನು ಹಾಕಲಾಯಿತು.

ಹೈಸ್ಕೂಲ್ ವಿದ್ಯಾಭ್ಯಾಸದ ಕಾಲದಲ್ಲಿ ಗಣಿತ, ವಿಜ್ಞಾನ (ರಸಾಯನ ಶಾಸ್ತ್ರ, ಪದಾರ್ಥ ಶಾಸ್ತ್ರ, ಜೀವಶಾಸ್ತ್ರ), ಇತಿಹಾಸ ಇತ್ಯಾದಿ ವಿಷಯಗಳನ್ನು ಕ್ರಮಬದ್ಧವಾಗಿ ಬೋಧಿಸಲಾಯಿತು. ವಿಜ್ಞಾನದ ಪರಿಕಲ್ಪನೆಗಳನ್ನು ಕನ್ನಡದಲ್ಲಿ ತಿಳಿಸಿ ಕನ್ನಡ ಪಾರಿಭಾಷಿಕ ಶಬ್ದಗಳನ್ನು ವಿವರಿಸಲಾಗಿತ್ತು. ಜೊತೆಜೊತೆಯಲ್ಲಿ ಸಮನಾದ ಇಂಗ್ಲಿಷ್ ಪಾರಿಭಾಷಿಕ ಶಬ್ದಗಳನ್ನು ಹೇಳಲಾಗುತ್ತಿತ್ತು. ಈ ಅನುಭವ ಡಾ॥ ಭೈರಪ್ಪನವರು ಪಡೆದ ಶಿಕ್ಷಣಕ್ಕೆ ಸಮಾನವಾದುದು. ತನ್ನ ಹುಟ್ಟೂರಿನಿಂದ ನೇರವಾಗಿ ಹೈದ್ರಾಬಾದಿನಲ್ಲಿ, ನಾಲ್ಕು ವರ್ಷಗಳ ವಿಜ್ಞಾನದ ಅಭ್ಯಾಸ – ಇಂಗ್ಲಿಷ್ ಮಾಧ್ಯಮದಲ್ಲಿ, ಹೈಸ್ಕೂಲಿನಲ್ಲಿಯೇ ಬೆಳೆದ ಗ್ರಹಣಶಕ್ತಿ ಮತ್ತು ಭಾಷೆಗಳ ಮೇಲೆ ಪಡೆದ ಹಿಡಿತದಿಂದಾಗಿ ನನಗೂ ನನ್ನ ಇತರ ಸ್ನೇಹಿತರಿಗೂ ಯಾವುದೇ ತೊಂದರೆಗಳಾಗಲಿಲ್ಲ. ನಮ್ಮ ಜೊತೆಗೆ, ಅಂದಿನ ಇಂಟರ್ ಕ್ಲಾಸಿನಲ್ಲಿ, ಹೈಸ್ಕೂಲ್‌ನ್ನು ಅಂದಿನ ಸುಪ್ರಸಿದ್ಧ ಆಲ್‌ಸೇಂಟ್ಸ್ ಹೈಸ್ಕೂಲಿನಲ್ಲಿ ಇಂಗ್ಲಿಷ್ ಮಾಧ್ಯಮದಲ್ಲಿ ಓದಿದ್ದ ಹೈದ್ರಾಬಾದ್ ನಿವಾಸಿ ಕನ್ನಡದ ವಿದ್ಯಾರ್ಥಿಗಳಿದ್ದರು. ಅವರು ನನ್ನನ್ನೂ ಮತ್ತು ಇತರ ಸ್ನೇಹಿತರನ್ನೂ ''ನೀವೆಲ್ಲ ಸ್ಥಳೀಯ ಭಾಷಿಕರು, ನೀವೆಲ್ಲಿ ಇಂಟರ್ ಪಾಸ್ ಮಾಡುತ್ತೀರಿ?'' ಎಂದು ಮೊದಮೊದಲು ಮೂದಲಿಸಿದ್ದು ಈಗಲೂ ನನಗೆ ನೆನಪಿದೆ. ಆದರೆ ಅಂದಿನ ವಾಸ್ತವವೆಂದರೆ, ನಮ್ಮ ಕ್ಲಾಸಿನಲ್ಲಿದ್ದ ತೆಲುಗು, ಕನ್ನಡ, ಮರಾಠಿ ಮತ್ತು ಉರ್ದು ಮಾಧ್ಯಮಗಳಲ್ಲಿ ಹೈಸ್ಕೂಲು ಶಿಕ್ಷಣ ಪಡೆದ ವಿದ್ಯಾರ್ಥಿಗಳೇ ಹೆಚ್ಚಿನ ಅಂಕಗಳನ್ನು ಪಡೆದು ಪಾಸಾದರು. ನಮ್ಮೂರಿನ ನನ್ನ ಸಹಪಾಠಿ ಅಂದಿನ ಹೈದ್ರಾಬಾದ್ ಪ್ರಾಂತಕ್ಕೆ ಇಂಟರ್‌ಮೀಡಿಯೇಟ್ ಪರೀಕ್ಷೆಯಲ್ಲಿ ಪ್ರಪ್ರಥಮ ಸ್ಥಾನದಲ್ಲಿ ಪಾಸಾದರು! ಈ ಇಂಗ್ಲಿಷ್ ಹುಡುಗರಲ್ಲಿ ಕೆಲವರು ನಾನು ಎಮ್.ಎಸ್‌ಸಿ. ಮುಗಿಸಿದರೂ ಬಿ.ಎಸ್‌ಸಿ. ದಾಟಲಿಲ್ಲ!! ಈಗ ಹೇಳಿ, ಮಾಧ್ಯಮ ಮುಖ್ಯವೋ, ಮಾತೃಭಾಷೆಯಲ್ಲಿ ಬೆಳೆದ ಗ್ರಹಣಶಕ್ತಿ ಮುಖ್ಯವೋ!!! ಇದನ್ನು ಹೆಚ್ಚು ವಿವರಿಸಲು ಸಾಧ್ಯ, ಆದರೆ ಸ್ಥಳಾವಕಾಶ ಕಡಿಮೆ. ಆದರೆ ಒಂದು ಮಾತನ್ನು ಬರೆಯಲೇಬೇಕು. ಕನ್ನಡ ಮಾಧ್ಯಮದಲ್ಲಿ ಓದಿದ ನನಗೆ ಎಂದೆಂದೂ ಕೀಳರಿಮೆ ಕಾಡಿಲ್ಲ.

ಕನ್ನಡ ಮತ್ತು ಇಂಗ್ಲಿಷ್‌ನಲ್ಲಿ ಸುಮಾರು ನೂರು ಸಂಪ್ರಬಂಧಗಳನ್ನು ಪ್ರಕಟಿಸಿದ ನಾನು ದೇಶದೊಳಗೂ ಹೊರಗೂ ಇಂಗ್ಲಿಷಿನಲ್ಲಿ ಸಂಪ್ರಬಂಧಗಳನ್ನೂ ಮತ್ತು ಉಪನ್ಯಾಸಗಳನ್ನೂ ನೀಡಿದ್ದೇನೆ (ದಯವಿಟ್ಟು ಇದನ್ನು ಆತ್ಮಪ್ರಶಂಸೆ ಎಂದು ಭಾವಿಸಬಾರದು). ಇದರರ್ಥವೆಂದರೆ, ವಿಷಯಗ್ರಹಣ ಶಕ್ತಿ ಬೆಳೆಯುವಾಗ ಮಾತೃಭಾಷಾ ಮಾಧ್ಯಮದಲ್ಲಿ ಶಿಕ್ಷಣ ಸರಿಯಾದದ್ದು. ಜೊತೆಜೊತೆಯಲ್ಲಿ ಇಂಗ್ಲಿಷ್ ಮತ್ತು ಕನ್ನಡ ಭಾಷೆಗಳ ವ್ಯಾಕರಣ ಸಹಿತ ಬೋಧೆಯು ಅವಶ್ಯಕ.

*ಬೆಂಗಳೂರು* **ಡಾ॥ ಹೆಚ್. ಚಂದ್ರಶೇಖರ**

ಕಾಂಗ್ರೆಸ್ ಅಧ್ಯಕ್ಷೆ ಶ್ರೀಮತಿ ಸೋನಿಯಾ ಗಾಂಧಿ ಅಮೇರಿಕಾದ ಆಸ್ಪತ್ರೆಯೊಂದರಲ್ಲಿ ದಾಖಲಾಗಿ ಪರಿಣತ ತಜ್ಞರ ಚಿಕಿತ್ಸೆಯನ್ನು ಪಡೆಯುತ್ತಿರುವುದು ಪತ್ರಿಕೆಗಳಲ್ಲಿ ವರದಿಯಾಗಿದೆ. ಸದ್ಭಾವನೆಯುಳ್ಳವರೆಲ್ಲರೂ ಅವರು ಶೀಘ್ರ ಗುಣಮುಖರಾಗಲಿ ಎಂಬ ಕಳಕಳಿಯನ್ನು ಹೊಂದಿರುವುದೂ ಪ್ರಕಟವಾಗಿದೆ. ಅದು ಸಹಜವೂ ಹೌದು. ಶ್ರೀಮತಿ ಸೋನಿಯಾ ಗಾಂಧಿಯವರಾಗಲಿ ಚಿಕಿತ್ಸೆಯನ್ನು ನೀಡುವ ವೈದ್ಯರಾಗಲಿ ಯಾವುದೇ ದೇವಾಲಯಗಳಲ್ಲಿ, ಇಗರ್ಜಿ, ಮಸೀದಿಗಳಲ್ಲಿ ಯಾವುದೇ ತರಹದ ಹರಕೆಯನ್ನಾಗಲಿ ಪ್ರಾರ್ಥನೆ ಯನ್ನಾಗಲಿ ಮಾಡಿಕೊಂಡ ವರದಿ ಪ್ರಕಟವಾಗಿಲ್ಲ. ವೈದ್ಯರು ವೈಜ್ಞಾನಿಕ ಚಿಕಿತ್ಸಾ ಕ್ರಮಗಳನ್ನು ಮಾತ್ರ ಅನುಸರಿಸಿ ಸೋನಿಯಾ ಗಾಂಧಿಯವರನ್ನು ಗುಣಪಡಿಸಲು ತಮ್ಮ ಶಕ್ತಿಮೀರಿ ವೈಜ್ಞಾನಿಕ ಕ್ರಿಯೆಗಳಲ್ಲಿ ಮಗ್ನರಾಗಿದ್ದಾರೆ. ಆದರೆ ಸೋನಿಯಾ ಗಾಂಧಿಯವರು ಗುಣಮುಖರಾಗುವಂತೆ ನಮ್ಮಲ್ಲಿಯ ಕೆಲವು ದೇವಾಲಯಗಳಲ್ಲಿ ಉರುಳು ಸೇವೆ ನಡೆಸುವ ಹಾಸ್ಯಾಸ್ಪದ ಮತ್ತು ನಾಟಕೀಯ ಕ್ರಿಯೆಗಳು ನಡೆಯುತ್ತಿವೆ ಎಂದು ಪತ್ರಿಕೆಗಳು ವರದಿ ಮಾಡಿವೆ. ಮುಖ್ಯವಾಗಿ ಮಾಜಿ ಸಂಸತ್ ಸದಸ್ಯ ಮತ್ತು ಚುನಾವಣೆಗಳಲ್ಲಿ ಸೋತು ಈಗ ಬಹುತೇಕ ಮೂಲೆ ಗುಂಪಾಗಿರುವ ಜನಾರ್ದನ ಪೂಜಾರಿಯವರು ನಗರದ ಕುದ್ರೋಳಿ ಗೋಕರ್ಣನಾಥೇಶ್ವರ ಹಾಗೂ ಇತರ ದೈವದೇವರುಗಳಿಗೆ ಪ್ರಾರ್ಥಿಸಿ, ಉರುಳು ಸೇವೆಯನ್ನು ಆರಂಭಿಸಿದ್ದಾರೆ. ಇದರ ಹಿಂದೆ ಸೋನಿಯಾ ಗಾಂಧಿಯವರು ಗುಣಮುಖರಾಗಬೇಕೆಂಬ ಕಾಳಜಿಗಿಂತಲೂ ತಮ್ಮ ರಾಜಕೀಯ ಪುನರುಜ್ಜೀವನಕ್ಕೆ ಈ ಸಂದರ್ಭವನ್ನು ಬಳಸಿಕೊಳ್ಳುವ ಪ್ರಯತ್ನ ಕಾಣುತ್ತಿದೆ. ಹಿಂದೆ ಜೆಡಿಎಸ್‌ನಲ್ಲಿ ಇದ್ದು ಅಲ್ಲಿ ಬೇಳೆ ಬೇಯಿಸಲಾಗದೆ ಕಾಂಗ್ರೆಸ್ ಪಕ್ಷದಲ್ಲಿ ಸೇರಿಕೊಂಡು ಗುರುತಿಸಿಕೊಳ್ಳಲು ಹವಣಿಸಿ ಪ್ರಚಾರ ಮತ್ತು ಒಲವು ಗಳಿಸಿ ಸ್ಥಾನವನ್ನು ಗಿಟ್ಟಿಸಿಕೊಳ್ಳಲು ಶತ ಪ್ರಯತ್ನ ಮಾಡುತ್ತಿರುವ ಐವನ್ ಡಿಸೋಜರೂ ಇವರಿಗೆ ಸಾಥ್ ನೀಡಿದ್ದಾರೆ. ಅಲ್ಲದೆ ಇತರ ಕೆಲವು ಚೇಲಾಗಳನ್ನೂ ಸೇರಿಸಿ ಉರುಳಿದ್ದಾರೆ. ಶಾಸಕ ಯು. ಟಿ. ಖಾದರ್ ಅವರೂ ಜೊತೆಗಿದ್ದು ಕಾರ್ಯಗಳಿಗೆ ಮೆರಗು ನೀಡಿದ್ದಾರೆ. ರಾಜಕಾರಣವನ್ನು ಯಾವುದೇ ಧರ್ಮದ ಹರಕೆಯಿಂದ ಸಾಧಿಸುವ ಮನೋಧರ್ಮವನ್ನು ಈ ವಿವಿಧ ಧರ್ಮೀಯರು ಹೇಗೆ ಸಮರ್ಥಿಸುವರೋ ತಿಳಿಯದು.

ಮೂಢನಂಬಿಕೆಗಳನ್ನು ಪ್ರಾಮಾಣಿಕವಾಗಿ ಬಳಕೆ ಮಾಡುವ ಅವಿದ್ಯಾವಂತ, ಬಡಜನ ಸಮುದಾಯದವರನ್ನು ಬೇಕಾದರೆ ಕ್ಷಮಿಸಬಹುದು. ಆದರೆ ವಿದ್ಯಾವಂತರು, ರಾಜಕೀಯ ಕಾರ್ಯಕರ್ತರು, ತಮ್ಮ ಮಹತ್ವಾಕಾಂಕ್ಷೆಗಳನ್ನು ಮೂಢ ಕಾರ್ಯಾಚರಣೆಗಳ ಮೂಲಕ ಸಾಧಿಸಿಕೊಳ್ಳಲು ಪ್ರಯತ್ನಿಸುತ್ತಿರುವುದನ್ನು ಕಾಣುವಾಗ ಅಸಹ್ಯ ಎನಿಸುತ್ತದೆ, ಅಕ್ಷಮ್ಯವಾಗುತ್ತದೆ. ಜನಾರ್ದನ ಪೂಜಾರಿ ಯವರ ಮೊದಲನೆಯ ಪಾರ್ಲಿಮೆಂಟರಿ ಚುನಾವಣೆಯಿಂದ ತೊಡಗಿ ಕೊನೆಯ ಸೋಲಿನ ತನಕ ಕೂಲಂಕಷವಾಗಿ ಅಧ್ಯಯನ ಮಾಡಿ ತಿಳಿದುಕೊಂಡಿರುವ ನಮ್ಮಂಥವರಂತೂ ಅವರ ಈ ವರ್ತನೆಯನ್ನು ಖಂಡಿಸದೆ ಬಿಟ್ಟರೆ, ಮೂಢನಂಬಿಕೆಗೆ ಚಾಲನೆ ನೀಡುವ ಇಂತಹ ಆಟಗಳನ್ನು ಕಂಡೂ ಕಾಣದಂತೆ ಸುಮ್ಮನಿದ್ದರೆ, ಪರೋಕ್ಷ ಪ್ರೋತ್ಸಾಹ ನೀಡಿದಂತಾದೀತು. ಇನ್ನಾದರೂ ಇಂತಹ ಮೂಢ ಕಾರ್ಯಾಚರಣೆಗಳ ಮೂಲಕ ಪ್ರಚಾರಪ್ರಿಯತೆಗೆ ಹವಣಿಸದೆ, ನೇರ ಮಾರ್ಗಗಳಲ್ಲಿ ಜನಪರ ಕಾರ್ಯಗಳನ್ನು ಕೈಗೆತ್ತಿ ಬಡಜನರ ಮೌಢ್ಯತೆಯನ್ನು ಹೋಗಲಾಡಿಸುವಂತಹ ಕಾರ್ಯವೈಖರಿಯನ್ನು ರೂಪಿಸಿಕೊಂಡು ಕಾರ್ಯನಿರತರಾಗಲಿ.

ಮಂಗಳೂರು

ಬಿ. ವಿ. ಕಕ್ಕಿಲ್ಲಾಯ






ದೇವನೂರಿಗೆ ಹೊರಳುವ
ಬದನವಾಳು ತಿರುಗಣೆಯಲ್ಲಿ
ಮಾಗಿದ ದೇಹದ
ಹಣ್ಣು ಹಣ್ಣು ಮುದುಕಪ್ಪ
ಬಿಸಿಲಿಗೆ ಕಲ್ಲಂಗಡಿ ಮಾರುತ್ತ
ಗಾಡಿಯ ನೂಕುತ್ತಿರುತ್ತಾನೆ.

ಬಿಸಿಲ ಯವ್ವನವು
ತೊಂಬತ್ತೂರರ ಸಮಾಧಿಗಳ ಮೇಲೆ
ಝುಳ ಝುಳ ಕಿರಣಗಳ ಚೆಲ್ಲಿ
ಕೆಣಕುವಾಗ
ಕಲ್ಲಂಗಡಿ ಕ್ರಿಕೇಟು ಚೆಂಡಾಗಿ
ಮತ್ತೆ ಕಲೆಯಾಗಿ ಕಣ್ಣೊಳಗೆ
ಹೂತುಹೋಗುವ ಆ ನೆನಪು
ಮುದುಕಪ್ಪನ ವ್ಯಾಪಾರದ
ನಿರಂತರ ಬಿಡುವಿನಲ್ಲಿ
ಅದೊಂದು ನಿಟ್ಟುಸಿರಷ್ಟೆ!

ಹಟ್ಟಿಯನಾವರಿಸಿಕೊಂಡ ಹೆಬ್ಬುಲಿಗೆ
ಬೆದರಿ, ಬಿಸಿಲು ಹುಟ್ಟುತ್ತಲೇ
ಗಾಡಿಯ ದಬ್ಬಿಕೊಂಡು
ಮಾರಾಟವಾಗಿಬಿಡುತ್ತಾನೆ ಮುದುಕಪ್ಪ
ತಿರುಗಣೆಯ ಸಮಾಧಿಗಳ
ನಿಟ್ಟುಸಿರಿನಲ್ಲಿ.
ಬಿಸಿಲ ಝುಳಕಾದರು ಹಟ್ಟಿಯ

ಅವು ಸಿಟ್ಟುಕ್ಕೊಳಬಹುದು; ಹೆಬ್ಬುಲಿ
ತಿಂಗಳ ಬೆಳಕಿನಲೂ
ಹುಡುಕಿ ಬರುವುದು. ಬಂದು,
ಐಕಳನ್ನೆಲ್ಲಾ ಗದರಿಸಿ
ಆಳಿಸುವುದು ನಿತ್ಯದ ಹಾಡು.

ಹೊಲಾರ ಹಟ್ಟಿಯ ದಿಕ್ಕ
ಕಲ್ಲಂಗಡಿ ಬೆಳೆ ಬೆಳೆಯುವುದಿಲ್ಲವಾಗಿ
ಮುದುಕಪ್ಪನ ಗಾಡಿ ಆ ಮದಿಸಿದ
ಒಳ್ಳೇ ಜಾತಿಯ ಹಣ್ಣು
ಬಿಸಿಲು ಮಾಗಿ ಮತ್ತೇರಿ ಕರಗಿದರೂ
ಜಾಗ ಬಿಟ್ಟು ಕದಲುವುದಿಲ್ಲ!

ಬಿಸಿಲ ಸಂತೆಯಲ್ಲಿ
ಹಣ್ಣು ಮಯ್ಲಿಗೆಯಾಗಿದ್ದಕ್ಕೆ
ಸಮಾಧಿಯೊಳಗೂ ಕಸಿವಿಸಿ!

ತಿಂಗಳ ಮೂಡುವುದೆಂದು
ತಿರುಗಣೆಯಿಂದ ಹೊರಳುವಾಗ
ಆತ್ತಕಡೆ ನೋಟ ಹೊರಳಿಸಿದರೆ
ಕಣ್ಣೊಳಗೆ ಕತ್ತಲೆಯ ಗೂಡು.

ಹಟ್ಟಿಯ ಮೇಲೆಲ್ಲಾ
ತಿಂಗಳು ಹಾಲಬೆಳದಿಂಗಳ ಚೆಲ್ಲಿರಲು
ಒಳಗೆ ಹೆಬ್ಬುಲಿ ಬಿಸಿಲಂತೆ
ಉರಿದಿತ್ತು.
ಝುಳವ ತಣಿಸದ
ಮಯ್ಲಿಗೆಯ ಕಲ್ಲಂಗಡಿಯ ಕೆಂಪು
ಹೆಬ್ಬುಲಿಗೆ ಮಂಪರು ಬರಿಸಿ
ಮತ್ತೆ ಬಿಸಿಲ ಹುಟ್ಟಿಸುತ್ತದೆ.

**ಸಂತೋಷ ಗುಡ್ಡಿಯಂಗಡಿ**
ನಾಟಕ ಅಧ್ಯಾಪಕ, ಸ.ಸಂ.ಪ.ಪೂ. ಕಾಲೇಜು
ಹೆಮ್ಮರಗಾಲ, ನಂಜನಗೂಡು ತಾಲ್ಲೂಕು
ಮೈಸೂರು ಜಿಲ್ಲೆ



# ಕರ್ನಾಟಕ ಪೋಸ್ಕೊ ವಿರೋಧಿ ಹೋರಾಟ : ಒಂದು ಅನುಭವ

ಸಿದ್ದನಗೌಡ ಪಾಟೀಲ

ಚಿತ್ರಗಳು
ಮುಖಪುಟ
ಹು. ಭಾ. ವಡ್ಡಟ್ಟಿ

ಒರಿಸ್ಸಾ ರಾಜ್ಯದಲ್ಲಿ ಪೋಹಾಂಗ್ ಸ್ಟೀಲ್ ಕಂಪನಿ (ಪೋಸ್ಕೊ) ಎಂಬ ದಕ್ಷಿಣ ಕೋರಿಯಾ ಮೂಲದ ದೈತ್ಯ ಬಹುರಾಷ್ಟ್ರೀಯ ಉಕ್ಕು ಕಂಪನಿ ಅಲ್ಲಿನ ರಾಜ್ಯ ಹಾಗೂ ಕೇಂದ್ರ ಸರಕಾರಗಳನ್ನು ಕೈಯ್ಯಲ್ಲಿಟ್ಟುಕೊಂಡು ನಡೆಸಿದ ದಬ್ಬಾಳಿಕೆಗಳನ್ನು ಕಿವಿಯಾರೆ ಕೇಳಿದ್ದೆ. ನಾನು ಭಾರತ ಕಮ್ಯುನಿಸ್ಟ್ ಪಕ್ಷದ (ಸಿಪಿಐ) ರಾಷ್ಟ್ರೀಯ ಮಂಡಲಿ ಸಭೆಗೆ ಹೋದಾಗಲೆಲ್ಲ ಒರಿಸ್ಸಾದ ಸಂಗಾತಿಗಳು ಅಲ್ಲಿ ನಡೆಯುತ್ತಿರುವ ಘೋರ ಅನ್ಯಾಯಗಳನ್ನು ಹೇಳುತ್ತಿದ್ದರು. ಸಿಪಿಐನ ಒರಿಸ್ಸಾ ರಾಜ್ಯ ಕಾರ್ಯಕಾರಿ ಸಮಿತಿ ಸದಸ್ಯರಾದ ಕಾ॥ ಅಭಯ ಸಾಹೂ ನಡೆಸಿದ ಹೋರಾಟದ ವರದಿಗಳನ್ನು, ಪೋಸ್ಕೊ ಮತ್ತು ರಾಜ್ಯ ಹಾಗೂ ಕೇಂದ್ರ ಸರಕಾರಗಳು ನಡೆಸಿದ ಹುನ್ನಾರ, ಪೋಸ್ಕೊ ಪ್ರತಿರೋಧ ಸಂಗ್ರಾಮ ಸಮಿತಿಯ ಹೋರಾಟದಲ್ಲಿ ಜನರ ಭಾಗವಹಿಸುವಿಕೆ, ಇವನ್ನೆಲ್ಲ ಕಳೆದ ನಾಲ್ಕೈದು ವರ್ಷಗಳಿಂದ ಹೇಳುತ್ತಿದ್ದರು. ನಂತರ ಆ ಹೋರಾಟ ರಾಷ್ಟ್ರೀಯ ಮಾಧ್ಯಮಗಳ ಮೂಲಕ ಪ್ರಚಾರ ಪಡೆಯಿತು. ಒರಿಸ್ಸಾದ ಪೋಸ್ಕೊ ಪ್ರತಿರೋಧ ಸಂಗ್ರಾಮ ಸಮಿತಿಯ ಹೋರಾಟಕ್ಕೆ ಬೆಂಬಲಿಸಿ ಕರ್ನಾಟಕದಲ್ಲಿ ನಾವೂ ಪ್ರತಿಭಟನೆ ಮಾಡಿದೆವು. ಆದರೆ ಪೋಸ್ಕೊ ಕಂಪನಿ ಒರಿಸ್ಸಾದಲ್ಲಿ ಯಶಸ್ವಿಯಾಗದೆ ಕರ್ನಾಟಕದಲ್ಲಿಯೇ ಕಾಲಿಟ್ಟ ವಿಷಯ ತಿಳಿದಾಗ ಆಘಾತವಾಯಿತು. ಕಾರಣ ಅದು ಕೇವಲ ಒಂದು ಕೈಗಾರಿಕೆಯಲ್ಲ. ತನ್ನ ಲಾಭಕ್ಕಾಗಿ ಸ್ಥಳೀಯ ರೈತರನ್ನು, ಪರಿಸರವನ್ನು, ನೆಲ ಜಲವನ್ನು ನಾಶಮಾಡಲೂ ಹೇಸದ ಕಪ್ಪುಪಟ್ಟಿಯಲ್ಲಿರುವ ಸಂಸ್ಥೆ. ಈ ದೇಶದ ಪ್ರಧಾನಿಯನ್ನೇ ತನ್ನ ಮ್ಯಾನೇಜಿಂಗ್ ಡೈರೆಕ್ಟರ್ ರೀತಿಯಲ್ಲಿ ನೋಡುವ ಈ ಸಂಸ್ಥೆ ಜನತೆಯ ಪ್ರತಿರೋಧಗಳನ್ನು ಹೊಸಕಿಹಾಕುವಲ್ಲಿ ಹೆಸರುವಾಸಿ. ಒರಿಸ್ಸಾದಲ್ಲಿ ಕೇಂದ್ರ ಸರಕಾರ ನಿಯಮಿಸಿದ ಸಕ್ಸೇನಾ ಹಾಗೂ ಮೀನಾ ಗುಪ್ತಾ ಸಮಿತಿಗಳ ವರದಿಗಳನ್ನೇ ಧಿಕ್ಕರಿಸುವಂತೆ ಈ ದೇಶದ ಪ್ರಧಾನಿಗೆ ಹೇಳುವ ಶಕ್ತಿಯಿರುವ ಈ ಕಂಪನಿ ಬಂಡವಾಳಗಾರರ ಗುಲಾಮರಾಗಿರುವ, ದೇಶ ಕಂಡ ಅತಿ ಭ್ರಷ್ಟ ಸರಕಾರವಿರುವ ಕರ್ನಾಟಕ ರಾಜ್ಯಕ್ಕೆ ಬಂದರೆ ಪರಿಸ್ಥಿತಿ ಏನಾಗಬಹುದು ಎಂಬ ಆತಂಕ ನನ್ನದಾಗಿತ್ತು.

ಹೌದು, ಒರಿಸ್ಸಾದಲ್ಲಿ ಪೋಸ್ಕೊ ಕಂಪನಿಯನ್ನು ವಿರೋಧಿಸಿದ್ದ ಬಿ.ಜೆ.ಪಿ ಕರ್ನಾಟಕಕ್ಕೆ ಅರಿಶಿಣ, ಕುಂಕುಮ, ತಾಂಬೂಲ ಕೊಟ್ಟು ಆಹ್ವಾನಿಸಿತ್ತು. ೨೦೧೦ ಜೂನ್ ತಿಂಗಳಲ್ಲಿಯೇ ಪೋಸ್ಕೊ ಜೊತೆ ಕರ್ನಾಟಕ ರಾಜ್ಯ ಸರಕಾರ ಒಪ್ಪಂದ ಮಾಡಿಕೊಂಡಿತ್ತು. ಅದರನ್ವಯ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ ಭೂಮಿ ಸ್ವಾಧೀನಕ್ಕಾಗಿ ಗದಗ ಜಿಲ್ಲೆಯ ಮುಂಡರಗಿ ತಾಲ್ಲೂಕಿನ ಹಳ್ಳಿಗುಡಿ ಗ್ರಾಮದ ರೈತರಿಗೆ ೨೦೧೧ರ ಮಾರ್ಚ್ ತಿಂಗಳಲ್ಲಿ ನೋಟೀಸು ಜಾರಿ ಮಾಡಿತು; ಅದೂ ೩೩೮೨ ಎಕರೆ ಜಮೀನಿಗಾಗಿ. ವರ್ಷಕ್ಕೆ ೬ ಮಿಲಿಯನ್ ಟನ್ ಉತ್ಪಾದನೆಯ, ೩೨,೩೦೦ ಕೋಟಿ ಬಂಡವಾಳದ ಹೂಡಿಕೆಯ ಒಪ್ಪಂದವನ್ನು ಪೋಸ್ಕೊ ಕಂಪನಿ ಮಾಡಿಕೊಂಡಿತ್ತು.

**ಹಳ್ಳಿಗುಡಿಯೇ ಏಕೆ ?**

ಗದಗ ಜಿಲ್ಲೆಯ ಮುಂಡರಗಿ ತಾಲ್ಲೂಕಿನ ಹಳ್ಳಿಗುಡಿ ಗ್ರಾಮದ ಪ್ರದೇಶವನ್ನೇ ಪೋಸ್ಕೊ ಕಂಪನಿಗೆ ಯಾಕೆ ಕೊಡಲಾಯಿತು ಎನ್ನುವುದು ಮುಖ್ಯ ಪ್ರಶ್ನೆ. ಕೈಗಾರಿಕಾ ಸಚಿವ ಮುರಗೇಶ ನಿರಾಣಿ ಸಂದರ್ಶನವೊಂದರಲ್ಲಿ ಹೇಳಿದಂತೆ ಈ ಪ್ರದೇಶವನ್ನು ಕೇಳಿದ್ದು ಪೋಸ್ಕೊ ಕಂಪನಿಯವರೇ. ಬಳ್ಳಾರಿಯಿಂದ ಹುಬ್ಬಳ್ಳಿಗೆ ಹೋಗುವ



ಬಸವರಾಜ ಸೂಳಿಭಾವಿ, ಮೇಧಾ ಪಾಟ್ಕರ್, ಡಾ॥ ಸಿದ್ದನಗೌಡ ಪಾಟೀಲ ಹೋರಾಟಗಾರರ ನಡುವೆ

ಹೆದ್ದಾರಿ ಮತ್ತು ರೈಲು ಮಾರ್ಗ ಈ ಪ್ರದೇಶದಲ್ಲಿದೆ. ತುಂಗಭದ್ರಾ ನದಿಯ ಮೂಲಕ ನೀರಿನ ಸೌಲಭ್ಯ ಪಡೆಯಬಹುದು. ಸಂಡೂರು, ಹೊಸಪೇಟೆ ಗಣಿ ಪ್ರದೇಶವಲ್ಲದೆ ಪಕ್ಕದಲ್ಲಿಯೇ ಸಮೃದ್ಧ ಉಕ್ಕಿನ ಅಂಶ ಇರುವ ಕಪ್ಪತಗುಡ್ಡವಿದೆ. ಸಿಂಗಟಾಲೂರು ಏತ ನೀರಾವರಿ ನೀರನ್ನು ಈ ಕೈಗಾರಿಕೆಗೂ ಬಳಸಿಕೊಳ್ಳಬಹುದು. ಈ ಎಲ್ಲ ಮುಂದಾಲೋಚನೆಯಿಂದ ಪೋಸ್ಕೊ ಕಂಪನಿ ಈ ಪ್ರದೇಶವನ್ನೇ ನೀಡಬೇಕೆಂದು ತನ್ನ ಒತ್ತಾಯ ತಂದಿತು. ನಮ್ಮ ಸರಕಾರ ಆ ಪ್ರದೇಶವನ್ನು ಬರಡುಭೂಮಿಯ ಪ್ರದೇಶವೆಂದು ಘೋಷಣೆ ಮಾಡಿ ಒಪ್ಪಿಕೊಂಡಿದೆ! ವಾಸ್ತವವಾಗಿ ಅದು ಬರಡು ಪ್ರದೇಶವಲ್ಲ. ಈ ಗ್ರಾಮಕ್ಕೆ ಸಮೀಪವಿರುವ ಮೇವುಂಡಿ ಗ್ರಾಮಕ್ಕೆ ಒಂದೆರಡು ವರ್ಷದಲ್ಲಿ ತುಂಗಭದ್ರಾ ನದಿಯಿಂದ ಏತ ನೀರಾವರಿಯ ಮೂಲಕ ನೀರು ಬರುತ್ತದೆ. ನಮ್ಮ ರಾಜಕಾರಣಿಗಳು ತಮ್ಮ ಇಚ್ಛಾಶಕ್ತಿ ಬಳಸಿದರೆ ಈ ಪ್ರದೇಶವನ್ನೆಲ್ಲ ನೀರಾವರಿಗೆ ಒಳಪಡಿಸಬಹುದು. ಮಳೆಯ ಆಧಾರದ ಮೇಲೆಯೇ ಈಗ ಎರಡು ಬೆಳೆ ಬೆಳೆಯುತ್ತಾರೆ. ಇಂಥ ಭೂಮಿಯನ್ನು ಬರಡುಭೂಮಿ ಎಂದು ಕರೆದು ರೈತರಿಗೆ ಮೋಸಮಾಡಿ ಪೋಸ್ಕೊ ಕಂಪನಿಗೆ ಕೊಡಲು ಹೊರಟಿತ್ತು ಮಾನ್ಯ ಯಡಿಯೂರಪ್ಪನವರ ''ರೈತಪರ'' ಸರಕಾರ. ಪೋಸ್ಕೊ ಕಂಪನಿಯ ಜೊತೆ ಜೊತೆಗೆ ಎಸ್. ಆರ್. ಗ್ರೂಪ್ಸ್ ಮತ್ತು ಆಧುನಿಕ ಮೆಟಾಲಿಕ್ಸ್ ಕಂಪನಿಗಳೆರಡಕ್ಕೆ ಸೇರಿ ಜಂತ್ಲಿಶಿರೂರ



ಡಾ|| ಅನ್ನದಾನೇಶ್ವರ ಸ್ವಾಮೀಜಿ

ಗ್ರಾಮದ ೧೫೮೮ ಎಕರೆ, ಪೇಟಾಲೂರ ಪ್ರದೇಶದ, ೧೫೦೨ ಎಕರೆ, ಮೇವುಂಡಿ ಗ್ರಾಮದ ಸುತ್ತ ೭೧೬ ಎಕರೆ, ಹೀಗೆ ಒಟ್ಟು ೭೧೮೯ ಎಕರೆ ಜಮೀನನ್ನು ಸ್ವಾಧೀನಪಡಿಸಿಕೊಳ್ಳಲು ಸರಕಾರ ನಿರ್ಧರಿಸಿತ್ತು. ಇಷ್ಟು ವಿಶಾಲವಾದ ಪ್ರದೇಶದ ಕೃಷಿಭೂಮಿಯನ್ನು ಕೈಗಾರಿಕೆಗಳಿಗೆ ಕೊಡಲು ಸರಕಾರ ತೀರ್ಮಾನಿಸಿದಾಗ ಸಹಜವಾಗಿಯೇ ಬಹುತೇಕ ರೈತರಿಂದ ಪ್ರತಿರೋಧ ವ್ಯಕ್ತವಾಯಿತು.

**ಪರಿಣಾಮಗಳು**

ಪೋಸ್ಕೊ ಕಂಪನಿಗೆ ತಾನು ಕೇಳಿದ ಭೂಮಿ ಸಾಕಾಗುತ್ತಿರಲಿಲ್ಲ. ಒಮ್ಮೆ ಕಂಪನಿ ಸ್ಥಾಪನೆಯಾದ ಮೇಲೆ ಅವರ ಭೂಮಿ ಕಬಳಿಸುವ ಹಸಿವು ಹೆಚ್ಚುತ್ತಲೇ ಹೋಗುತ್ತಿತ್ತು. ಮುಖ್ಯವಾಗಿ ಪೋಸ್ಕೊ ಕಂಪನಿ ನಮ್ಮ ಜಲಾಶಯಗಳ ನೀರು, ವಿದ್ಯುತ್‌ಗೆ ನಮ್ಮ ಸರಕಾರಕ್ಕೆ ಕೆಲವು ಷರತ್ತುಗಳನ್ನು ಹಾಕಿತ್ತು. ಕೃಷಿಗೆ ಬಳಸಬೇಕಾದ ನೀರು ಕೈಗಾರಿಕೆಯ ಪಾಲಾಗುತ್ತಿತ್ತು. ಪೋಸ್ಕೊ ಕಂಪನಿ ಉತ್ಪಾದನೆ ಆರಂಭಿಸಿದ ಮೇಲೆ ಸುತ್ತಲಿನ ಪ್ರದೇಶದ ಕೃಷಿ ಭೂಮಿ, ಕುಡಿವ ನೀರು, ಪರಿಸರ ನಾಶವಾಗುತ್ತಿದ್ದವು. ಅವರು ಸ್ಥಾಪಿಸುವ ವಿದ್ಯುತ್ ಸ್ಥಾವರಗಳು ಮೊದಲೇ ಉಷ್ಣ ಪ್ರದೇಶವಾದ ಆ ನೆಲವನ್ನು ಇನ್ನಷ್ಟು ಉಷ್ಣ ಹಾಗೂ ಧೂಳುಮಯ ಮಾಡಿ ಆ ಪ್ರದೇಶದ ಗ್ರಾಮಗಳ ಜನತೆಯ ಬದುಕನ್ನು ಸಂಪೂರ್ಣವಾಗಿ ನರಕವನ್ನಾಗಿಸುವುದು ಖಚಿತವಾಗಿತ್ತು. ಇವೆಲ್ಲಕ್ಕಿಂತ ಮುಖ್ಯವಾಗಿ ಪಕ್ಕದಲ್ಲಿಯೇ

# ಒರಿಸ್ಸಾದಲ್ಲಿ ಪೋಸ್ಕೊ ವಿರೋಧಿ ಸಂಗ್ರಾಮ



ಅಭಯ ಸಾಹೂ

ಪೋಹಾಂಗ್ ಸ್ಟೀಲ್ ಕಂಪನಿ (ಪೋಸ್ಕೊ) ಎಂಬ ದಕ್ಷಿಣ ಕೊರಿಯಾ ಮೂಲದ ಉಕ್ಕು ಉತ್ಪಾದನೆಯ ಬಹುರಾಷ್ಟ್ರೀಯ ಕಂಪನಿ ಭಾರತಕ್ಕೆ ಬಂದದ್ದು ನಮ್ಮ ಆಳುವ ಸರಕಾರಗಳಿಗೆ ಭಾಗ್ಯವಿಧಾತನ ಆಗಮನದಂತಾಗಿದೆ. ಒರಿಸ್ಸಾ ರಾಜ್ಯದಲ್ಲಿ ಈ ಕಂಪನಿ ಈಗಾಗಲೇ ಅಲ್ಲೋಲಕಲ್ಲೋಲವನ್ನುಂಟುಮಾಡಿದೆ. ಒರಿಸ್ಸಾ ರಾಜ್ಯದ ಜನರಿಗೆ ೨೨ನೇ ಜೂನ್, ೨೦೦೫ ಕರಾಳ ದಿನವಾಯಿತು. ಅಂದು ಅಲ್ಲಿನ ರಾಜ್ಯ ಸರಕಾರ ಪೋಸ್ಕೊ ಕಂಪನಿ ಜೊತೆ ಒಪ್ಪಂದ ಮಾಡಿಕೊಂಡಿತು. ೫೧,೦೦೦ ಕೋಟಿ ಬಂಡವಾಳ ಹೂಡಿ ವರ್ಷಕ್ಕೆ ೧೨ ಮಿಲಿಯನ್ ಟನ್ ಕಬ್ಬಿಣ ಉತ್ಪಾದನೆಯ ಗುರಿ ಹೊಂದಿರುವ ಈ ಕಂಪನಿಯನ್ನು ಅಲ್ಲಿನ ರಾಜ್ಯ ಸರಕಾರ ರತ್ನಗಂಬಳಿ ಹಾಸಿ ಸ್ವಾಗತಿಸಿತು. ಅದಕ್ಕೆ ಪೋಸ್ಕೊ ಕೇಳಿದ್ದು ೪೦೦೪ ಎಕರೆ ಜಮೀನು. ಅದೂ ಸಮುದ್ರ ತೀರಕ್ಕೆ ಸಮೀಪವಿರುವ ಅರಣ್ಯಪ್ರದೇಶದಲ್ಲಿ. ಕಂಪನಿ ಕೇಳಿದ ೪೦೦೪ ಎಕರೆ ಪ್ರದೇಶದ ವ್ಯಾಪ್ತಿಯಲ್ಲಿ ೨೯೦೦ ಎಕರೆ ಅರಣ್ಯ, ಧಿಂಕಿಯಾ, ನೂಗಾಂವ, ಮತ್ತು ಗಡಾಕುಜಂಗ್ ಎಂಬ ಮೂರು ಗ್ರಾಮಪಂಚಾಯಿತಿಗಳ ಒಟ್ಟು ಎಂಟು ಹಳ್ಳಿಗಳ ಪ್ರದೇಶ ಸೇರುತ್ತದೆ. ಜಗತ್‌ಸಿಂಗ್‌ಪೂರ ಜಿಲ್ಲೆಯಲ್ಲಿ ಬರುವ ಈ ಪ್ರದೇಶದ ಅರಣ್ಯ, ಗ್ರಾಮ, ಗ್ರಾಮೀಣ ಜನತೆಯ ಬದುಕು ನಾಶವಾದರೂ ಚಿಂತೆಯಿಲ್ಲ, ಪೋಸ್ಕೊ ಕಂಪನಿಗೆ ಅಲ್ಲಿ ಸ್ಥಳ ಕೊಡುವುದೆಂದು ಸರಕಾರ ನಿರ್ಧರಿಸಿದಾಗ ಅಲ್ಲಿನ ಜನ ಪ್ರತಿಭಟಿಸಿದರು. ಆಗ ಜನರನ್ನು ಅವರೇ ಆಯ್ಕೆಮಾಡಿದ ಸರಕಾರ ಸದೆಬಡಿಯಲು ಮುಂದಾದಾಗ ಒರಿಸ್ಸಾ ರಾಜ್ಯದ ಭಾರತ ಕಮ್ಯುನಿಸ್ಟ್ ಪಕ್ಷದ ರಾಜ್ಯ ಮಂಡಲಿಯ ನಾಯಕರಾದ ಕಾಂ|| ಅಭಯ ಸಾಹೂ ನಿರ್ವಸಿತರಾಗಲಿರುವ ಜನರನ್ನು ಸಂಘಟಿಸತೊಡಗಿದರು. ಇದು ಕೇವಲ ಜನರು ನಿರ್ವಸಿತರಾಗುವ ಸಮಸ್ಯೆ ಮಾತ್ರವಲ್ಲ, ಈ ಕಂಪನಿ ಸ್ಥಾಪನೆಯಾಗುವ ಪ್ರದೇಶದಲ್ಲಿ ೨೯೦೦ ಎಕರೆ ಅರಣ್ಯ ನಾಶವಾಗುವುದು ಆ ರಾಜ್ಯದ ಪರಿಸರದ ಮೇಲೆ ಗಾಢವಾದ ದುಷ್ಪರಿಣಾಮ ಬೀರುತ್ತದೆಂಬುದನ್ನು ಮನಗಂಡರು. ಪೋಸ್ಕೊ ಕಂಪನಿಯ ಸ್ಥಾಪನೆಯಿಂದ ನಿರ್ವಸಿತರಾಗಲಿರುವ ರೈತರು, ಮೀನುಗಾರ ಕುಟುಂಬಗಳು ಮತ್ತು ಆದಿವಾಸಿಗಳನ್ನು (ಒಟ್ಟು ನಾಲ್ಕು ಸಾವಿರ ಕುಟುಂಬಗಳು) ಸೇರಿಸಿ ಹೋರಾಟಕ್ಕಿಳಿದರು. ಆದರೆ ಪೋಸ್ಕೊ ಕಂಪನಿಗೆ ಶರಣಾಗಿದ್ದ ಸರಕಾರ ಈ ಜನರ ಚಳುವಳಿಯನ್ನು ಹತ್ತಿಕ್ಕಲು ಮುಂದಾದಾಗ ಕಾಂ|| ಅಭಯ ಸಾಹೂ ಸ್ಥಳೀಯ ಸಂಘಸಂಸ್ಥೆಗಳು, ಜನಪರ ಚಳುವಳಿಗಾರರು ಎಲ್ಲರನ್ನು ಸೇರಿಸಿ ಪೋಸ್ಕೊ ಪ್ರತಿರೋಧ ಸಂಗ್ರಾಮ ಸಮಿತಿ ರಚಿಸಿದರು. ಹೋರಾಟ ತೀವ್ರವಾಯಿತು. ಜನತೆ ಬೀದಿಗಿಳಿದರು. ಶಾಂತ ರೀತಿಯ ಸತ್ಯಾಗ್ರಹ ನಡೆಸಿದರು. ಒರಿಸ್ಸಾದ ಆಡಳಿತ ಪಕ್ಷವಾದ ಬಿಜು ಜನತಾದಳ (ಬಿ.ಜೆ.ಡಿ.) ಸರಕಾರ ಇದನ್ನು ಪ್ರತಿಷ್ಠೆಯಾಗಿ ಪರಿಗಣಿಸಿತು. ಶಾಂತಿಯುತ ಚಳುವಳಿಗಾರರ ಮೇಲೆ ದಾಳಿ ನಡೆಯಿತು. ಪೊಲೀಸರೇ ಮುಂದಾಗಿ ಹೋರಾಟಗಾರರ ಟೆಂಟುಗಳಿಗೆ ಬೆಂಕಿ ಹಚ್ಚಿದರು. ನೂರಾರು ಜನರನ್ನು ಬಂಧಿಸಿದರು. ಹೋರಾಟ ಸಮಿತಿಯ ನಾಯಕರಾದ ಕಾಂ|| ಅಭಯ ಸಾಹೂ ಅವರ ಮೇಲೆ ವಿವಿಧ

ಇರುವ, ಸಂಜೀವಿನಿ ಬೆಟ್ಟವೆಂದೇ ಖ್ಯಾತಿ ಪಡೆದಿರುವ, ವಿಶಿಷ್ಟ ಔಷಧಿಸಸ್ಯಗಳನ್ನು ಹೊಂದಿರುವ ಕಪ್ಪತಗುಡ್ಡದಲ್ಲಿ ಗಣಿಗಾರಿಕೆ ನಡೆಸುತ್ತಿದ್ದರು. ನಮ್ಮ ಸರಕಾರ ಈಗ ಕಪ್ಪತಗುಡ್ಡವನ್ನು ಕೊಡುವುದಿಲ್ಲ ಎಂದು ಹೇಳುತ್ತಿದೆ. ಆದರೆ ಕೇಂದ್ರ ಸರಕಾರವೇ ಕಾನೂನನ್ನು ಉಲ್ಲಂಘಿಸಿ ಒರಿಸ್ಸಾದ ಅರಣ್ಯವನ್ನು ಪೋಸ್ಕೊಗೆ ಕೊಡಲು ಹೊರಟಿರುವಾಗ ನಮ್ಮ ರಾಜ್ಯ ಸರಕಾರ ಕೊಡುವುದಿಲ್ಲ ಎನ್ನುವುದಕ್ಕೆ, ಪೋಸ್ಕೊ ಆ ಬೆಟ್ಟವನ್ನು ಬಳಸುವುದಿಲ್ಲ ಎನ್ನುವುದಕ್ಕೆ ಯಾವುದೇ ಗ್ಯಾರಂಟಿ ಇಲ್ಲ. ಇಷ್ಟಕ್ಕೂ ಪೋಸ್ಕೊ ಕಂಪನಿ ಒಂದು ವಿಶೇಷ ಆರ್ಥಿಕವಲಯವಾಗಿ ಸ್ಥಾಪನೆಯಾಗುತ್ತಿತ್ತು.

**ದುಷ್ಟ ಕಂಪನಿ – ಭ್ರಷ್ಟ ಸರಕಾರ**

ಗದಗ ಜಿಲ್ಲೆಯ ಮುಂಡರಗಿ ಹಾಗೂ ನರಗುಂದ ಎರಡೂ ಬ್ರಿಟಿಷರ ವಿರುದ್ಧ ಹೋರಾಡಿದ ಮುಂಡರಗಿ ಭೀಮರಾಯ, ನರಗುಂದ ಬಾಬಾ ಸಾಹೇಬರ ಪ್ರದೇಶಗಳು. ಸಾಮಾನ್ಯವಾಗಿ ಒಂದು ಪ್ರತಿಭಟನಾ ಮನೋಭಾವ ಅಲ್ಲಿಯ ಜನರಲ್ಲಿದೆ. ಆದರೆ ಇಂದು ಗದಗ ಜಿಲ್ಲೆ ಸಂಪೂರ್ಣ ಬಿ.ಜೆ.ಪಿ.ಮಯವಾಗಿದೆ. ಪೋಸ್ಕೊ ಕಂಪನಿ ಸ್ಥಾಪನೆಯಾಗಲಿದ್ದ ಮುಂಡರಗಿ ಪ್ರದೇಶದ ಶಾಸಕ ಬಿ.ಜೆ.ಪಿ.ಯವನು. ಜಿಲ್ಲೆಯ ಉಸ್ತುವಾರಿ ಮಂತ್ರಿ ನರಗುಂದದ ಬಿ.ಜೆ.ಪಿ ಶಾಸಕ. ಇವರಿಬ್ಬರೂ ಬಹುರಾಷ್ಟ್ರೀಯ ಕಂಪನಿಯ ಪರವಾಗಿ ವಕಾಲತ್ತು



ಡಾ|| ತೋಂಟದ ಸಿದ್ದಲಿಂಗ ಸ್ವಾಮೀಜಿ

ವಹಿಸುವವರೇ. ಅಂದು ಬ್ರಿಟಿಷರ ವಿರುದ್ಧ ಹೋರಾಡಿದ ಪ್ರದೇಶದಲ್ಲಿ ಇಂದು ದೇಶ ಮಾರುವವರು ನಮ್ಮ ಜನಪ್ರತಿನಿಧಿಗಳು. ಒಂದು ಕಾಲಕ್ಕೆ ಪ್ರಬಲವಾಗಿದ್ದ ಕಾಂಗ್ರೆಸ್ ಇಂದು ಸಮಾಧಿ ಸ್ಥಿತಿಯಲ್ಲಿದೆ.

೧೯೮೦ರಿಂದ ಸುಮಾರು ೨೦ ವರ್ಷ ನಾನು ಧಾರವಾಡವನ್ನು ನನ್ನ ಚಟುವಟಿಕೆಯ ಕೇಂದ್ರವಾಗಿಸಿ ಕೊಂಡಿದ್ದೆ. ನರಗುಂದ-ನವಲಗುಂದ ರೈತರ ಜಾಥಾ ಆ ಜಿಲ್ಲೆಯಲ್ಲಿನ ನನ್ನ ಮೊದಲ ಹೋರಾಟದ ಅನುಭವ. ಅಂದಿನ ಅವಿಭಾಜ್ಯ ಧಾರವಾಡ ಜಿಲ್ಲೆ, ಅಂದರೆ ಇಂದಿನ ಗದಗ ಮತ್ತು ಹಾವೇರಿ ಜಿಲ್ಲೆ ಸೇರಿದಂತೆ, ನಮ್ಮ ಹಲವಾರು ಹೋರಾಟಗಳಿಗೆ ಮೂಲ ನೆಲೆಯಾಗಿತ್ತು. ಒರಿಸ್ಸಾ ರಾಜ್ಯದಲ್ಲಿ ಪೋಸ್ಕೊ ಪುಂಡಾಟಿಕೆಯನ್ನು ಪ್ರತಿಭಟಿಸಿದ ನಾವು ನಮ್ಮ ನೆಲದಲ್ಲಿಯೇ ವಕ್ಕರಿಸುತ್ತಿರುವ ಈ ದುಷ್ಟ, ಲೂಟಿಕೋರ ಕಂಪನಿಯನ್ನು ಮತ್ತು ಅದರ ಸ್ಥಾಪನೆಗೆ ಟೊಂಕಕಟ್ಟಿ ನಿಂತ ಭ್ರಷ್ಟ ರಾಜ್ಯಸರಕಾರವನ್ನು ಎದುರಿಸಲೇಬೇಕಿತ್ತು. ಅಲ್ಲಿನ ಜನರ ಮೇಲಿನ ನಂಬಿಕೆ, ಸ್ನೇಹಿತರ ಸಹಕಾರವನ್ನೇ ನಂಬಿ ನಾನು ಗದಗಿನ ಪತ್ರಕರ್ತ ಮಿತ್ರ ಇರ್ಫಾನ್‌ಗೆ ಭಾರತ ಕಮ್ಯುನಿಸ್ಟ್ ಪಕ್ಷದ ಪರವಾಗಿ ಜುಲೈ ೧ರಂದು ಪತ್ರಿಕಾಗೋಷ್ಠಿ ಕರೆಯಲು ಹೇಳಿದೆ. ಗದಗ ಜಿಲ್ಲೆಯಲ್ಲಿ ಹಲವಾರು ಹೋರಾಟ ಮಾಡಿದ 'ಲಡಾಯಿ' ಪತ್ರಿಕೆ ಸಂಪಾದಕ ಬಸವರಾಜ ಸೂಳಿಭಾವಿ, ಮುಂಡರಗಿಯ ಪತ್ರಕರ್ತ ಮಿತ್ರ ಹು. ಭಾ. ವಡ್ಡಟ್ಟಿ ಮತ್ತು ಗೆಳೆಯ ಮುತ್ತುರಾಜ, ಪಕ್ಕದ ಜಿಲ್ಲೆ ಕೊಪ್ಪಳದ ಸಿಪಿಐ ನಾಯಕ ಬಸವರಾಜ ಶೀಲವಂತರ ಅವರಿಗೂ

ಕಾರಣಗಳ ನೆಪದಲ್ಲಿ ಒಟ್ಟು ೪೮ ಕ್ರಿಮಿನಲ್ ಕೇಸುಗಳನ್ನು ಹಾಕಿದ್ದಾರೆ. ಹೀಗೆ ಚಳುವಳಿಯಲ್ಲಿ ಭಾಗವಹಿಸಿದವರ ಮೇಲೆ, ಬೆಂಬಲಿಸಿದವರ ಮೇಲೆ, ಒಟ್ಟು ೮೦೦ ಜನರ ಮೇಲೆ ಸುಳ್ಳು ಕೇಸುಗಳನ್ನು ಹಾಕಿದ್ದಾರೆ. ೨೦೦೫ರಿಂದ ಇಂದಿನವರೆಗೆ ನಡೆದ ಹೋರಾಟದಲ್ಲಿ ನೂರಾರು ಜನ ಹೋರಾಟಗಾರರನ್ನು ಜೈಲಿಗೆ ತಳ್ಳಿದ್ದಾರೆ. ಹೋರಾಟ ಸಮಿತಿಯ ನಾಯಕ ಅಭಯ ಸಾಹೂ ಹನ್ನೊಂದು ತಿಂಗಳು ಜೈಲುವಾಸ ಅನುಭವಿಸಿದ್ದಾರೆ. ಅವರನ್ನು ಕೊಲೆಗೈಯುವ ಪ್ರಯತ್ನಗಳೂ ನಡೆದಿವೆ. ಸಾಹೂ ಭೂಗತರಾಗಿ ಕೆಲಸ ಮಾಡಿದ್ದಾರೆ. ಇಂಥ ಎಲ್ಲ ಪ್ರಯತ್ನಗಳನ್ನು ಅಲ್ಲಿನ ರಾಜ್ಯ ಸರಕಾರ ಮತ್ತು ಪೋಸ್ಕೊ ಕಂಪನಿ ಮಾಡಿದರೂ ಜನ ತಮ್ಮ ಹೋರಾಟವನ್ನು ಬಿಟ್ಟಿಲ್ಲ. ಮಕ್ಕಳು, ಮಹಿಳೆಯರು, ಯುವಕರು, ರೈತರು, ವೃದ್ಧರು ಹಗಲು ರಾತ್ರಿ ತಮ್ಮ ಜಮೀನನ್ನು ಕಾಯುತ್ತಿದ್ದಾರೆ. ರ್‍ಯಾಲಿ, ಪ್ರತಿಭಟನೆ, ಮಾನವ ಸರಪಳಿ ಹೀಗೆ ಎಂಥದೇ ದಾಳಿ ಬಂದರೂ ಪ್ರಜಾಸತ್ತಾತ್ಮಕವಾಗಿ ಹೋರಾಟ ನಡೆಸಿದ್ದಾರೆ. ಅವರ ಮಕ್ಕಳು ಶಾಲೆ ಬಿಟ್ಟು ಈಗ ತಮ್ಮ ಜಮೀನು ಕಾಯುವ ಕೆಲಸ ಮಾಡುತ್ತಿದ್ದಾರೆ. ನವೀನ್ ಪಟ್ನಾಯಕ್ ಅವರ ರಾಜ್ಯ ಸರಕಾರ ಮತ್ತು ಮನಮೋಹನ ಸಿಂಗ್‌ರ ಕೇಂದ್ರ ಸರಕಾರ ಪೋಸ್ಕೊ ಕಂಪನಿಯನ್ನು ಸ್ಥಾಪಿಸಲೇಬೇಕೆಂದು ತೀರ್ಮಾನಿಸಿವೆ. ಕೇಂದ್ರ ಸರಕಾರದ ಅರಣ್ಯ ಹಾಗೂ ಪರಿಸರ ಇಲಾಖೆ ನೇಮಿಸಿದ ಸಮಿತಿಗಳಾದ ಸಕ್ಸೇನಾ ಸಮಿತಿ, ಮೀನಾ ಗುಪ್ತಾ ಸಮಿತಿಗಳು ಪೋಸ್ಕೊ ಕಂಪನಿಗಾಗಿ ಭೂಸ್ವಾಧೀನ ಕಾನೂನು ಹಾಗೂ ಅರಣ್ಯ ಹಕ್ಕುಗಳ ಕಾನೂನುಗಳನ್ನು ಉಲ್ಲಂಘಿಸಲಾಗಿದೆ ಎಂಬ ವರದಿ ಕೊಟ್ಟರೂ ಸಹ ತಾನೇ ನಿಯಮಿಸಿದ ಸಮಿತಿಗಳ ವರದಿಗಳನ್ನು ಧಿಕ್ಕರಿಸಿ ಕೇಂದ್ರ ಸರಕಾರ ಪೋಸ್ಕೊ ಕಂಪನಿಯ ಪರವಾಗಿ ನಿಂತಿದೆ. ಈಗ ಪೋಸ್ಕೊ ಕಂಪನಿ ಮಾಡಿಕೊಂಡ ಒಪ್ಪಂದದ ಅವಧಿ ಮುಗಿದಿದ್ದರೂ ಒರಿಸ್ಸಾ ರಾಜ್ಯ ಸರಕಾರ ಭೂ ಸ್ವಾಧೀನ ಪ್ರಕ್ರಿಯೆಯನ್ನು ಮುಂದುವರಿಸಲು ಯತ್ನಿಸುತ್ತಿದ್ದರೂ ಅದು ಸಾಧ್ಯವಾಗುತ್ತಿಲ್ಲ. ಪೋಸ್ಕೊ ಪ್ರತಿರೋಧ ಸಂಗ್ರಾಮ ಸಮಿತಿ ಬೃಹತ್ತಾಗಿ ಬೆಳೆಯುತ್ತಿದೆ. ಈ ಹೋರಾಟ ಸಮಿತಿ ಪಕ್ಷಾತೀತವಾಗಿದೆ. ಅದೇ ಸಂದರ್ಭದಲ್ಲಿ ಕಾಂಗ್ರೆಸ್ ಹಾಗೂ ಬಿ.ಜೆ.ಡಿ. ಹೊರತು ಪಡಿಸಿ ಸಿಪಿಐ, ಸಿಪಿಎಂ, ಸಮಾಜವಾದಿ ಪಕ್ಷ, ಆರ್.ಜೆ.ಡಿ., ಫಾರ್‌ವರ್ಡ್ ಬ್ಲಾಕ್, ಬಿ.ಜೆ.ಪಿ. ಹೀಗೆ ಎಲ್ಲ ಪಕ್ಷಗಳೂ ಈ ಚಳುವಳಿಯನ್ನು ಬೆಂಬಲಿಸಿವೆ. ಪೋಸ್ಕೊ ಪ್ರತಿರೋಧ ಸಂಘರ್ಷ ಸಮಿತಿಯ ನಾಯಕ, ಭಾರತ ಕಮ್ಯುನಿಸ್ಟ್ ಪಕ್ಷದ ರಾಜ್ಯ ಕಾರ್ಯದರ್ಶಿ ಮಂಡಲಿ ಸದಸ್ಯ ಅಭಯ ಸಾಹೂ ಅವರನ್ನು ಒಬ್ಬ ಅಭಿವೃದ್ಧಿ ವಿರೋಧಿ ಪಿತೂರಿಗಾರ ಎಂದು ಬಿಂಬಿಸಲು ಯತ್ನಿಸಿದ ಕೇಂದ್ರ ಹಾಗೂ ರಾಜ್ಯ ಸರಕಾರಗಳೂ ದಿಕ್ಕು ಕಾಣದಂತಾಗಿವೆ. ಸಂಗ್ರಾಮ ಸಮಿತಿ ಜನಮನ್ನಣೆ ಗಳಿಸಿದೆ. ಕೇಂದ್ರ ಸರಕಾರವೇ ರಚಿಸಿದ ಸಮಿತಿಗಳು ಈ ಯೋಜನೆ ಕಾನೂನುಬಾಹಿರ ಎಂದು ಹೇಳಿವೆ. ಅಲ್ಲಿನ ಜನ ಭೂಮಿ ಬಿಟ್ಟುಕೊಡಲು ಸಿದ್ಧರಿಲ್ಲ. ಸರಕಾರಗಳು ಪೋಸ್ಕೊ ಬಿಟ್ಟುಕೊಡಲು ಸಿದ್ಧರಿಲ್ಲ. ಆದರೆ ಜನಾಂದೋಲನ ದಿನೇ ದಿನೇ ಬೆಳೆಯುತ್ತಿದೆ, ದೇಶಕ್ಕೆ ಒಂದು ಮಾದರಿ ಹೋರಾಟವಾಗಿ ರೂಪುಗೊಳ್ಳುತ್ತಿದೆ.



ಸಾಲು ಸಾಲು ಹೋರಾಟಗಾರರು

ಬರಹೇಳಿದೆ. ಜುಲೈ ೧೧ರಂದು ಸಿಪಿಐ ಕರೆದಿದ್ದ ಪತ್ರಿಕಾಗೋಷ್ಠಿಯಲ್ಲಿ ಪೋಸ್ಕೊ ಕಂಪನಿಯ ಸ್ಥಾಪನೆ ಹಾಗೂ ಅದರಿಂದಾಗುವ ಅಪಾಯಗಳನ್ನು ಹೇಳಿದೆ. ಅಂದು ಪತ್ರಕರ್ತರೂ ಸಹ ಆ ನೆಲದಲ್ಲಿ ಒಂದು ಸಂಘಟಿತ ಹೋರಾಟದ ಅವಶ್ಯಕತೆಯನ್ನು ಒತ್ತಿ ಹೇಳಿದರು. ಮುಖ್ಯವಾಗಿ ಪೋಸ್ಕೊ ಕಂಪನಿ ಸ್ಥಾಪನೆಯಾಗುತ್ತಿದ್ದ ಆ ಗ್ರಾಮೀಣ ಪ್ರದೇಶದಲ್ಲಿ ಎಡಪಕ್ಷಗಳಾಗಲಿ, ರೈತ, ದಲಿತ ಅಥವಾ ಯಾವುದೇ ಇತರ ಜನಪರ ಸಂಘಟನೆಗಳಾಗಲಿ ಪ್ರಬಲವಾಗಿ ಇರಲಿಲ್ಲ. ವಿರೋಧ ಪಕ್ಷವಾದ ಕಾಂಗ್ರೆಸ್ ಕುಳಿತಲ್ಲಿಯೇ ಅಧಿಕಾರ ಬಯಸುತ್ತಿತ್ತೇ ಹೊರತು ಬೀದಿಗಿಳಿಯಲು ಸಿದ್ಧವಿರಲಿಲ್ಲ. ತಾತ್ವಿಕವಾಗಿ ಕಾಂಗ್ರೆಸ್ ಪೋಸ್ಕೊ ವಿರೋಧಿಯಲ್ಲ. ಜೆ.ಡಿ.ಎಸ್. ಆ ಭಾಗದಲ್ಲಿ ಹೆಸರಿಗೆ ಮಾತ್ರ ಇರುವ ಪಕ್ಷ. ಮುಂಡರಗಿಯ ವೈ. ಎನ್. ಗೌಡರ ಎಂಬ ಬಿ.ಜೆ.ಪಿ.ಯ ಸ್ಥಳೀಯ ನಾಯಕರು ಪೋಸ್ಕೊ ವಿರೋಧಿ ಧ್ವನಿ ಎತ್ತಿದ್ದರು. ಆದರೆ ಈ ಹೋರಾಟಕ್ಕೆ ಹಲವಾರು ಶಕ್ತಿಗಳ ಪಾಲ್ಗೊಳ್ಳುವಿಕೆಯ ಅವಶ್ಯಕತೆ ಇತ್ತು. ಎಂದರೆ ಇದಕ್ಕೊಂದು ವಿಶಾಲ ತಳಹದಿಯ ವೇದಿಕೆ ಅವಶ್ಯವಿತ್ತು. ಒಂದು ಆಶಾದಾಯಕ ಅಂಶವೆಂದರೆ ನಾನು ಪತ್ರಿಕಾಗೋಷ್ಠಿ ನಡೆಸಿದ ದಿನವೇ ಗದುಗಿನ ತೋಂಟದಾರ್ಯ ಸ್ವಾಮೀಜಿಯವರ ಸಂದರ್ಶನ ಪತ್ರಿಕೆಗಳಲ್ಲಿ ಬಂದಿತ್ತು. ಅವರು ಪೋಸ್ಕೊ ಕಂಪನಿಗಿಂತ ಗುಡಿಕೈಗಾರಿಕೆಗಳಿಗೆ ಆದ್ಯತೆ ನೀಡಬೇಕು ಎಂದು ಪೋಸ್ಕೊ ಕಂಪನಿಯನ್ನು ತಾತ್ವಿಕವಾಗಿ ವಿರೋಧಿಸಿದ್ದರು.

**ಹಳ್ಳಿಗುಡಿ ಪ್ರವೇಶ**

ದಿನಾಂಕ ೧-೭-೨೦೧೧ರಂದು ಗದಗಿನಲ್ಲಿ ಪತ್ರಿಕಾಗೋಷ್ಠಿ ಮುಗಿಸಿ ನಾನು, ಗೆಳೆಯರಾದ ಬಸವರಾಜ ಸೂಳಿಭಾವಿ, ಇರ್ಫಾನ್ ಮುದಗಲ್, ಹು. ಭಾ. ವಡ್ಡಟ್ಟಿ, ಬಸವರಾಜ ಶೀಲವಂತರ, ಚಂದ್ರಶೇಖರ ತೋರಣಘಟ್ಟ, ಜನಾರ್ದನ್, ಮುತ್ತುರಾಜ ಮುಂತಾದವರು ಪೋಸ್ಕೊ ಕಂಪನಿಗೆ ಬಲಿಯಾಗಲಿದ್ದ ಹಳ್ಳಿಗುಡಿ ಗ್ರಾಮಕ್ಕೆ ಹೋದಾಗ ಮಧ್ಯಾಹ್ನ ೪ ಘಂಟೆ. ಸಿದ್ದಪ್ಪ ಮುದ್ಲಾಪೂರ ಎಂಬ ಹಳ್ಳಿಗುಡಿಯ ಬಡ ರೈತ ನಮ್ಮ ಜೊತೆಗಿದ್ದರು. ಅವರ ಭೂಮಿಯನ್ನು ಸ್ವಾಧೀನಪಡಿಸಿಕೊಳ್ಳುವ ನೋಟಿಸ್ ಬಂದಿತ್ತು. ಊರ ಹೊರಗಿನ ಜನತಾ ಪ್ಲಾಟ್‌ನಲ್ಲಿರುವ ಆತನಂತಹ ಬಡರೈತರು ಭೂಮಿ ಕಳೆದುಕೊಳ್ಳುವ ಆತಂಕದಲ್ಲಿದ್ದರು. ಹಳ್ಳಿಗುಡಿ ಆಗಲೇ ಮಾಧ್ಯಮಗಳ ಸುದ್ದಿಯಿಂದಾಗಿ ಕೇಂದ್ರಬಿಂದುವಾಗಿತ್ತು. ನಾಲ್ಕಾರು ಬಡರೈತರ ಜೊತೆ ನಾವು ಹಳ್ಳಿಗುಡಿಯ ಬಸವೇಶ್ವರ ದೇವಸ್ಥಾನಕ್ಕೆ ಹೋದಾಗ ಅಲ್ಲಿ ಪೋಸ್ಕೊ ಪರವಾಗಿ ಮಾತನಾಡುವ ನಾಲ್ಕಾರು ರೈತರು ಕುಳಿತಿದ್ದರು. ಅವರಿಗೆ ನಾವು ಹೋದದ್ದು ಕಿರಿಕಿರಿಯಾಯಿತು. ಅವರಲ್ಲಿ ಕೊನೆಯ ವರೆಗೂ ಭೂಮಿ ಕೊಡುತ್ತೇವೆಂದು ವಾದಿಸಿದವರಿದ್ದರು. ಅವರು ಪೋಸ್ಕೊ ಕಂಪನಿಯ ಪರವಾಗಿದ್ದವರು. ನಂತರ ತಿಳಿದುಬಂದದ್ದು ಅವರು ಬಿ.ಜೆ.ಪಿ.ಯವರು ಎಂಬುದು. ನಮ್ಮ ಜೊತೆ ಬಂದ ಬಡರೈತರಿಗೂ ಅವರಿಗೂ ವಾಗ್ವಾದವಾಯಿತು. ನಾವು ಅವರನ್ನೆಲ್ಲ ಸಮಾಧಾನಪಡಿಸಿ ನಮ್ಮ ಅಭಿಪ್ರಾಯ ಹೇಳಿಬಂದೆವು. ಬರುವಾಗ ಹಳ್ಳಿಗುಡಿಯ ಜನತಾ ಪ್ಲಾಟ್‌ನಲ್ಲಿದ್ದ ಬಡರೈತ ಕುಟುಂಬದ ಪ್ರತಿನಿಧಿಗಳನ್ನು ಸೇರಿಸಿ ಧೈರ್ಯ ಹೇಳಿಬಂದೆವು. ಅವರೆಲ್ಲ ಒಗ್ಗಟ್ಟಾಗಿದ್ದುದೇ ನಮಗಿದ್ದ ಸಮಾಧಾನವಾಗಿತ್ತು. ನಂತರ ನಾವು ಹೋದದ್ದು ಜಂತ್ಲಿಶಿರೂರ ಗ್ರಾಮಕ್ಕೆ. ಅಲ್ಲಿ ವಾತಾವರಣ ಸಂಪೂರ್ಣ ಭಿನ್ನವಾಗಿತ್ತು. ಅಲ್ಲಿನ ರೈತರು ಭೂಮಿ ಬಿಟ್ಟುಕೊಡಲು ಸಿದ್ಧರಿರಲಿಲ್ಲ. ಅಲ್ಲಿ ಒಂದು ಸಭೆ ಮಾಡಿದೆವು. ಆದರೆ ಪೋಸ್ಕೊ ಕಂಪನಿಯ ಕೇಂದ್ರಸ್ಥಾನವಾಗಿದ್ದ ಹಳ್ಳಿಗುಡಿಯ ಜನರ ಜೊತೆ ನಾವು ನೇರವಾಗಿ ಮಾತನಾಡಬೇಕಿತ್ತು. ಆಗ ನನಗೆ ಹೊಳೆದದ್ದು ಪ್ರಗತಿಪರ ಚಿಂತನೆಯ ಗದುಗಿನ





ತೋಂಟದಾರ್ಯ ಮಠದ ಡಾ|| ಸಿದ್ದಲಿಂಗ ಸ್ವಾಮೀಜಿಯವರು. ಜಂತ್ಲಿಶಿರೂರ ಗ್ರಾಮದ ಸಭೆ ಮುಗಿಸಿ ನಾವು ನೇರವಾಗಿ ಹೋಗಿದ್ದು ಗದಗಿನ ತೋಂಟದಾರ್ಯ ಮಠಕ್ಕೆ. ಮೊದಲಿನಿಂದಲೂ ಸ್ವಾಮೀಜಿಯವರ ಜೊತೆಗೆ ಆತ್ಮೀಯ ಸಂಬಂಧ ಹೊಂದಿದ್ದರಿಂದ ನನ್ನ ಕುರಿತಾಗಲೀ, ನಮ್ಮ ಪಕ್ಷದ ಕುರಿತಾಗಲೀ, ನಮ್ಮ ಸ್ನೇಹಿತರ ಕುರಿತಾಗಲೀ ಸ್ವಾಮೀಜಿಯವರಿಗೆ ಆದರದ ಭಾವನೆಗಳಿದ್ದವು.

**ಸ್ವಾಮೀಜಿ ಸಮ್ಮುಖದಲ್ಲಿ ನೀಲನಕ್ಷೆ**

ಮೂಲತಃ ಪ್ರಗತಿಪರರಾದ ಡಾ|| ತೋಂಟದಾರ್ಯ ಸಿದ್ದಲಿಂಗ ಸ್ವಾಮೀಜಿಯವರಿಗೆ ಪೋಸ್ಕೊ ಕಂಪನಿ ಮತ್ತು ನಮ್ಮ ಸರಕಾರದ ಹುನ್ನಾರಗಳನ್ನು ಹೇಳಿದಾಗ ಅವರು ನಮ್ಮ ಅಭಿಪ್ರಾಯಗಳನ್ನು ಒಪ್ಪಿದರು. ಸ್ಥಳೀಯ ಶಾಸಕರನ್ನು, ಸಚಿವರನ್ನು ಕರೆದು ಮಾತನಾಡಿ ಈ ಯೋಜನೆ ಕೈಬಿಡುವಂತೆ ಹೇಳುತ್ತೇನೆಂದರು. ಅದಕ್ಕೆ ನಾವು ಸ್ವಾಮೀಜಿಯವರೇ ಗ್ರಾಮಗಳಿಗೆ ಬಂದು ರೈತರ ಜೊತೆ ಮಾತನಾಡಿ ನಂತರ ಶಾಸಕರು ಸಚಿವರ ಜೊತೆ ಮಾತನಾಡಿದರೆ ಒಳಿತು ಎಂದೆವು. ಅದಕ್ಕೆ ಅವರು ಸಂತೋಷದಿಂದ ಒಪ್ಪಿದರು. ಸ್ವಾಮೀಜಿಯವರ ಜೊತೆ ನಾವೆಲ್ಲರೂ ಭೂಸ್ವಾಧೀನಕ್ಕೊಳಗಾಗುವ ಹಳ್ಳಿಗಳಿಗೆ ಹೋಗುವ ಕಾರ್ಯಕ್ರಮ ಸಿದ್ಧವಾಯಿತು. ಆ ಕಾರ್ಯಕ್ರಮಕ್ಕೆ ಗದಗಿನಲ್ಲಿರುವ ವಿವಿಧ ಸಂಘಟನೆಗಳನ್ನು ಸೇರಿಸಲು ನಮ್ಮ ಪ್ರಯತ್ನ ಮುಂದುವರಿಯಿತು. ದಿನಾಂಕ ೫-೭-೨೦೧೧ರಂದು ಜಂತ್ಲಿಶಿರೂರನಲ್ಲಿ ರೈತರೊಂದಿಗಿನ ಸಂವಾದದ ಮೊದಲ ದಿನ ಕಾರ್ಯಕ್ರಮದಲ್ಲಿ ಹಳ್ಳಿಗುಡಿ ಸೇರಿದಂತೆ ಸುತ್ತಲಿನ ಗ್ರಾಮದ ರೈತರು ಭಾಗವಹಿಸಿದರು. ಡಾ|| ತೋಂಟದಾರ್ಯ ಸಿದ್ದಲಿಂಗ ಸ್ವಾಮೀಜಿಗಳ ಅಧ್ಯಕ್ಷತೆಯಲ್ಲಿ ನಡೆದ ಆ ಸಭೆಯಲ್ಲಿ ನಾನು, ಬಸವರಾಜ ಸೂಳಿಭಾವಿ, ಚಂದ್ರಶೇಖರ ಬಾಳೆ, ಬಿ. ಎಸ್. ಸೊಪ್ಪಿನ, ದಲಿತ ಸಂಘರ್ಷ ಸಮಿತಿಯ ನಾರಾಯಣ ಸ್ವಾಮಿ, ವೆಂಕಟೇಶ ಮುಂತಾದವರು ಮಾತನಾಡಿ ಸರಕಾರದ ಹುನ್ನಾರಗಳನ್ನು ಜನರ ಮುಂದಿಟ್ಟೆವು. ನಂತರ ಯಾವುದೇ ಕಾರಣಕ್ಕೂ ಭೂಮಿ ಕೊಡಬಾರದೆನ್ನುವ ತೀರ್ಮಾನಕ್ಕೆ ರೈತರು ಬಂದರು. ಸ್ವಾಮೀಜಿಯವರು ಜನಪ್ರತಿನಿಧಿಗಳು ರೈತ ವಿರೋಧಿಯಾಗಿದ್ದಾರೆ, ಆದ್ದರಿಂದ ಈ ಭೂಸ್ವಾಧೀನ ವಿರೋಧಿಸಲು ಹೋರಾಟ ನಡೆಸಿ ಎಂದು ಕರೆಕೊಟ್ಟರು. ದೊಡ್ಡ ಸಂಖ್ಯೆಯಲ್ಲಿ ಮಾಧ್ಯಮ ಪ್ರತಿನಿಧಿಗಳು ಬಂದಿದ್ದರಿಂದ ಸುದ್ದಿ ಮಿಂಚಿನಂತೆ ಹರಡಿತು. ನಿಧಾನವಾಗಿ ಹೋರಾಟಕ್ಕೆ ವೇದಿಕೆ ಸಿದ್ಧವಾಗತೊಡಗಿತು.

**ಮತ್ತೆ ಹಳ್ಳಿಗುಡಿ ಪ್ರವೇಶ**

ಭೂಸ್ವಾಧೀನಕ್ಕೆ ಪ್ರತಿರೋಧ ತೀವ್ರವಾದಂತೆ ಪೋಸ್ಕೊ ಪರವಾದ ಪ್ರಚಾರಕರು ಬಣ್ಣದ ಬಲೂನು ಬಿಡತೊಡಗಿದರು. ಪೋಸ್ಕೊ ಕಂಪನಿ ಬಂದರೆ ೨೦೦೦೦ ಜನರಿಗೆ ಉದ್ಯೋಗ, ಎಕರೆಗೆ ೩೦ ಲಕ್ಷ ದುಡ್ಡು, ಭೂಮಿ ಕೊಟ್ಟವರಿಗೆ ಸೈಟು, ಹೀಗೆ ಹಳ್ಳಿಗುಡಿಯಲ್ಲಿ ಸುದ್ದಿಯ ಭರಾಟೆ ಇತ್ತು. ದಿನಾಂಕ ೬-೭-೨೦೧೧ರಂದು ತೋಂಟದ ಸ್ವಾಮೀಜಿಯವರ ಜೊತೆ ನಾವು ಹಳ್ಳಿಗುಡಿಗೆ ಹೋದೆವು. ಈ ಬಾರಿ ಸ್ವಾಮೀಜಿಯವರು ಜೊತೆ ಇದ್ದುದರಿಂದ ಪೋಸ್ಕೊ ಕಂಪನಿಗೆ ಭೂಮಿ ನೀಡಲು ಒಪ್ಪಿಗೆ ಇಲ್ಲದ ಹಳ್ಳಿಗುಡಿ ರೈತರು ಧೈರ್ಯವಾಗಿದ್ದರು. ರೈತರಾದ ಹನುಮಂತಪ್ಪ ಗಡ್ಡದ, ಶಂಭುಲಿಂಗ ಬೇವೂರ, ಹನುಮಂತ ರೆಡ್ಡಿ, ಬಸವರಾಜ ಚನ್ನಳ್ಳಿ, ಐಯ್ಯಪ್ಪ ಕಮತರ, ಶಿವಪ್ಪ ಮುಟಗಿ, ಪುಂಡಪ್ಪ ಭಾವಿಕಟ್ಟಿ, ನಿಂಗಜ್ಜ ನಾಲಕುರ್ವಿ, ಬಸವಣ್ಣೆಪ್ಪ, ಕೊಟ್ರಪ್ಪ, ಚನ್ನಪ್ಪಪುರದ, ಹೀಗೆ ರೈತರ ದೊಡ್ಡ ದಂಡೇ ಕಾರ್ಯಕ್ರಮ ಏರ್ಪಡಿಸಿತು. ಗ್ರಾಮದ ಎಲ್ಲ ಜನ ಸೇರಿದರು. ಹೆಚ್ಚಿನ ಸಂಖ್ಯೆಯಲ್ಲಿ ಮಹಿಳೆಯರು ಬಂದರು. ಎಲ್ಲರ ಮುಖದಲ್ಲಿ ದೂರವಾದ ಆತಂಕ. ಈ

ಹಿಂದೆ ಜುಲೈ ೧೧ರಂದು ಆ ಗ್ರಾಮಕ್ಕೆ ಬಂದಾಗ ಇದ್ದ ಆತಂಕ ದೂರವಾಗಿತ್ತು. ಸ್ವಾಮೀಜಿಯವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ಮಾತನಾಡಿದ ನನಗೆ ವಿವರವಾಗಿ ಜನರಿಗೆ ವಿಷಯ ತಿಳಿಸಲು ಸಾಧ್ಯವಾಯಿತು. ಪೋಸ್ಕೊ ಕಂಪನಿಯ ಕರಾಳ ಇತಿಹಾಸ, ಒರಿಸ್ಸಾ ರಾಜ್ಯದಲ್ಲಿ ನಡೆದ ಜನರ ಹೋರಾಟ, ಕಂಪನಿ ಬಂದರೆ ಆಗುವ ಅನಾಹುತಗಳು, ಉದ್ಯೋಗದ ಪೊಳ್ಳು ಭರವಸೆ, ಭ್ರಮೆ ಹುಟ್ಟಿಸುವ ಪರಿಹಾರದ ಮಾತುಗಳು, ಪೋಸ್ಕೊ ಕಂಪನಿ ಸುತ್ತಲಿನ ಕೃಷಿಭೂಮಿಗೊದಗುವ ಪರಿಸ್ಥಿತಿ, ಹೀಗೆ ನನಗೆ ತಿಳಿದಿದ್ದ ಎಲ್ಲ ಮಾಹಿತಿ ಮತ್ತು ಹೋರಾಟದ ರೂಪುರೇಷೆಗಳನ್ನು ಜನರ ಮುಂದಿಟ್ಟೆ. ಅಂದಿನ ಸಭೆಗೆ ಗದಗ ಜಿಲ್ಲೆಯ ರೈತ ಸಂಘದವರೂ ಬಂದರು. ದಾವಣಗೆರೆಯಿಂದ ಹಸಿರು ಸೇನೆ ಸಂಘಟನೆಯ ಗೆಳೆಯ ರುದ್ರಮುನಿ ಬಂದರು. ಹೀಗೆ ಚಳುವಳಿಯ ವೇದಿಕೆ ವಿಸ್ತಾರವಾಗತೊಡಗಿತು. ಅಂದು ತೋಂಟದ ಸ್ವಾಮೀಜಿಯವರು ಈಗಾಗಲೇ ಕೊಪ್ಪಳ ಜಿಲ್ಲೆಯಲ್ಲಿ ಕೈಗಾರಿಕೆಗೆ ಭೂಮಿ ಕೊಟ್ಟವರ ಸ್ಥಿತಿಗತಿಗಳನ್ನು ಜನರ ಮುಂದಿಟ್ಟರು. ಕೃಷಿಯ ಉಳಿವಿಗಾಗಿ ಮಾರ್ಗ ತೋರಿದರು. ಅಲ್ಲಿಗೆ ಹಳ್ಳಿಗುಡಿಯ ಮಹಿಳೆಯರಾದಿಯಾಗಿ ಎಲ್ಲರೂ, ''ಪ್ರಾಣ ಹೋದರೂ ಸರಿ ಭೂಮಿ ಕೊಡೋದಿಲ್ಲ'', ಎಂಬ ಘೋಷಣೆ ಕೂಗಿದರು. ಅಲ್ಲಿಗೆ ಹಳ್ಳಿಗುಡಿಯಲ್ಲಿ ಪೋಸ್ಕೊ ಯೋಜನೆಯ ಗೋರಿ ನಿರ್ಮಾಣವಾಯಿತು. ಮಾರನೇ ದಿನ ದಿ. ೭-೭-೨೦೧೧ರಂದು ಇನ್ನೊಂದು ಗ್ರಾಮವಾದ ಮೇವುಂಡಿಗೆ ಸ್ವಾಮೀಜಿಯವರ ಜೊತೆ ಹೋದೆವು. ಅದೇ ದಿನ ಇನ್ನೊಂದು ಬೆಳವಣಿಗೆ ನಡೆಯಿತು. ಆ ಭಾಗದ ಇನ್ನೊಂದು ಪ್ರಭಾವಿ ಮಠವಾದ ಮುಂಡರಗಿಯ ಅನ್ನದಾನೇಶ್ವರ ಮಠದ ಡಾ|| ಅನ್ನದಾನೇಶ್ವರ ಸ್ವಾಮೀಜಿಯವರು ಮೇವುಂಡಿಯ ಬಹಿರಂಗ ಸಭೆಗೆ ಬಂದರು. ಡಾ|| ಅನ್ನದಾನೇಶ್ವರ ಸ್ವಾಮೀಜಿಗಳೂ ಸಹ ಮೇವುಂಡಿಗೆ ಬರುವ ಮುಂಚೆ ಹಳ್ಳಿಗುಡಿ ಗ್ರಾಮಕ್ಕೆ ಹೋಗಿ ರೈತರಿಂದ ಭೂಮಿ ಕೊಡುವುದಿಲ್ಲ ಎಂದು ಪ್ರತಿಜ್ಞೆ ಮಾಡಿಸಿಕೊಂಡು ಬಂದರು. ಮೇವುಂಡಿ ಪ್ರದೇಶದ ೭೧೬ ಎಕರೆ ಜಮೀನು ಸ್ವಾಧೀನಕ್ಕೊಳಪಟ್ಟಿತ್ತು. ಅದು ಸಿಂಗಟಾಲೂರ ಏತ ನೀರಾವರಿ ವ್ಯಾಪ್ತಿಗೆ ಒಳಪಡುವ ಪ್ರದೇಶವಾದ್ದರಿಂದ ರೈತರು ಪ್ರಬಲವಾಗಿ ಭೂಸ್ವಾಧೀನವನ್ನು ವಿರೋಧಿಸಿದರು.

ಭೂಸ್ವಾಧೀನಕ್ಕೊಳಗಾಗುವ ಈ ಮೂರು ಪ್ರಮುಖ ಗ್ರಾಮಗಳಲ್ಲಿ ನಡೆದ ಸಭೆಗಳು ಯಶಸ್ವಿಯಾದವು. ಮಾಧ್ಯಮಗಳು ಪ್ರತಿ ಚಲನವಲನವನ್ನು ವರದಿ ಮಾಡಿದವು. ಅದರಲ್ಲೂ ಹಳ್ಳಿಗುಡಿಯ ಪೋಸ್ಕೊ ಯೋಜನೆ ಸರಕಾರದ ಹುನ್ನಾರಗಳೆಲ್ಲ ಬೆತ್ತಲಾಗಿ ನಾಡಿನ ಗಮನ ಸೆಳೆದವು. ಆದರೆ ಹಳ್ಳಿಗುಡಿಯ ಪೋಸ್ಕೊ ಪರವಾದ ಕೆಲವು ಜನ ಸುಮ್ಮನಿರಲಿಲ್ಲ. ಅವರ ಒಂದು ಸಣ್ಣ ಗುಂಪು ಧಾರವಾಡ ಭೂಸ್ವಾಧೀನ ಮಂಡಲಿಗೆ ಹೋಗಿ ತಾವು ಷರತ್ತಿನ ಮೇಲೆ ಪೋಸ್ಕೊ ಕಂಪನಿಗೆ ಭೂಮಿ ಕೊಡುತ್ತೇವೆ ಎಂದು ಮನವಿ ಕೊಟ್ಟುಬಂದರು. ಅದೂ ಮಾಧ್ಯಮ ದಲ್ಲಿ ಸುದ್ದಿಯಾದಾಗ ಒಂದು ಸಣ್ಣ ಪ್ರಮಾಣದ ಗೊಂದಲ ಆರಂಭವಾಯಿತು. ಇದು ಸರಕಾರದ ಪಿತೂರಿಯಾಗಿತ್ತು.

**ಸರಕಾರದ ಸಮಜಾಯಿಷಿ**

ಪೋಸ್ಕೊ ವಿರೋಧಿ ಹೋರಾಟದ ಕಾವು ತೀವ್ರಗೊಳ್ಳುತ್ತಿದ್ದಂತೆ ಆತಂಕಗೊಂಡ ಕೈಗಾರಿಕಾ ಮಂತ್ರಿ ಮುರುಗೇಶ ನಿರಾಣಿ ಗದಗ ಜಿಲ್ಲಾ ಉಸ್ತುವಾರಿ ಸಚಿವ ಸಿ. ಸಿ. ಪಾಟೀಲರನ್ನು ದಿನಾಂಕ ೮-೭-೨೦೧೧ರಂದು ಸ್ವಾಮೀಜಿಗಳನ್ನು ಭೇಟಿಯಾಗಲು ಕಳಿಸಿದರು. ಸಿ. ಸಿ. ಪಾಟೀಲರು ಸರಕಾರ ಮತ್ತು ಪೋಸ್ಕೊ ಕಂಪನಿಯ ಪರವಾಗಿ ಸಮಜಾಯಿಷಿ ನೀಡಲು ಬಂದರು. ಅವರ ಮಾತನ್ನು ಕೇಳಿದ ತೋಂಟದ ಸ್ವಾಮೀಜಿಯವರು ಚಳುವಳಿಗಾರರ ಪ್ರಶ್ನೆಗೆ ಉತ್ತರ ಕೊಡಿ ಎಂದು ನಮ್ಮ ಹತ್ತಿರ ಕರೆತಂದರು. ಆಗ ಹಳ್ಳಿಗುಡಿ ಗ್ರಾಮದ ರೈತರಿಗೆ ಉಡಾಫೆಯಾಗಿ ಉತ್ತರಿಸುತ್ತಿದ್ದ ಸಚಿವ ಸಿ. ಸಿ. ಪಾಟೀಲರನ್ನು ನಾನು ತಡೆಯಬೇಕಾಯಿತು. ಪ್ರಮುಖವಾಗಿ ಪೋಸ್ಕೊ ಕಂಪನಿಗೆ ಭೂಮಿ ಕೊಡುತ್ತಿರುವ ಸರಕಾರದ ಗುಪ್ತ ಒಪ್ಪಂದಗಳ ಕುರಿತು ಪ್ರಶ್ನಿಸಿದೆ. ನೀರು, ವಿದ್ಯುತ್, ಪರಿಸರ, ಕೃಷಿ ವ್ಯವಸ್ಥೆ ಕುರಿತಂತೆ ಅನೇಕ ಪ್ರಶ್ನೆಗಳನ್ನು ಕೇಳಿದೆ. ಪ್ರಶ್ನೆಗೆ ಉತ್ತರ ಕೊಡದ ಸಚಿವರು ರೈತರ ಜೊತೆ ಮಾತ್ರ ಮಾತನಾಡುತ್ತೇನೆಂದು ಹೇಳಿ ಕೋಪಗೊಂಡು ಎದ್ದುಹೋದರು. ವಿಷಯ ಏನೆಂದರೆ ಅವರಿಗೆ ಆ ಪ್ರಶ್ನೆಗಳಿಗೆ ಉತ್ತರ ಗೊತ್ತಿರಲಿಲ್ಲ. ಸ್ವಾಮೀಜಿಯವರೂ ಇದೇ ಪ್ರಶ್ನೆ ಕೇಳಿದಾಗ ತಜ್ಞರನ್ನು ಕರೆಸುತ್ತೇನೆ ಎಂದು ಹೇಳಿ ತಪ್ಪಿಸಿಕೊಂಡಿದ್ದರು.

**ಮೇಧಾ ಪಾಟ್ಕರ್ ಪ್ರವೇಶ**

ಹುಬ್ಬಳ್ಳಿಯ ಸ್ಲಂ ಜನಾಂದೋಲನಕ್ಕೆ ಮೇಧಾ ಪಾಟ್ಕರ್ ದಿನಾಂಕ ೮-೭-೨೦೧೧ರಂದು ಬರುವ ವಿಷಯ ತಿಳಿದಿತ್ತು. ಪಿ.ಯು.ಸಿ.ಎಲ್.ನ ರಾಜೇಂದ್ರ ಅವರ ಮೂಲಕ ಮೇಧಾ ಅವರನ್ನು ಸಂಪರ್ಕಿಸಿ ಹಳ್ಳಿಗುಡಿಗೆ ಬರಲು ವಿನಂತಿಸಿದೆ. ಮೇಧಾ ಪಾಟ್ಕರ್ ಸಂತೋಷದಿಂದಲೇ ಒಪ್ಪಿಕೊಂಡರು. ಅದೇ ದಿನ ಹುಬ್ಬಳ್ಳಿಯ ಕಾರ್ಯಕ್ರಮ ಮುಗಿಸಿ ಮೇಧಾ ಪಾಟ್ಕರ್ ಅವರನ್ನು ಹಳ್ಳಿಗುಡಿಗೆ ಕರೆತಂದೆವು. ನಾವು ಹಳ್ಳಿಗುಡಿ ಪ್ರವೇಶಿಸುವ ಸಮಯದಲ್ಲಿಯೇ ಸಚಿವ ಸಿ. ಸಿ. ಪಾಟೀಲರ ಪಟಾಲಂ ಹಳ್ಳಿಗುಡಿಯಲ್ಲಿ ಸಭೆ ಮಾಡಿ ಎದುರಿಗೆ ಬಂದಿತು. ಮೇಧಾ ಪಾಟ್ಕರ್ ಅವರಿಗೂ ಸಚಿವ ಸಿ. ಸಿ. ಪಾಟೀಲರಿಗೂ ಮುಖಾಮುಖಿ ಮಾಡಿಸಿದೆವು. ಅಲ್ಲಿಯೂ ಸರಕಾರದ ನಿಲುವನ್ನು ಸಮರ್ಥಿಸಿಕೊಳ್ಳಲಾಗದೆ ಸಚಿವರು ಒತ್ತಾಯದಿಂದ ರೈತರ ಭೂಮಿ ಪಡೆಯುವುದಿಲ್ಲವೆಂದು ಮೇಧಾ ಪಾಟ್ಕರ್‌ಗೆ ಮಾತುಕೊಟ್ಟು ಪರಾರಿಯಾದರು. ವಾಸ್ತವವೆಂದರೆ ಸಚಿವರು ಹಳ್ಳಿಗುಡಿಯ ಬಹಿರಂಗ ಸಭೆಯಲ್ಲಿ ಪೋಸ್ಕೊ ಕಂಪನಿಗೆ ಭೂಮಿ ಕೊಡುವವರು ಮುಂದೆ ಬನ್ನಿ ಎಂದಾಗ ಮುಂದೆ ಬಂದದ್ದು ಕೇವಲ ಮೂವರು ರೈತರು. ಅವರೆಲ್ಲರೂ ಬಿ.ಜೆ.ಪಿ. ಕಾರ್ಯಕರ್ತರು. ಅಲ್ಲಿಗೆ ನಮ್ಮ ಹೋರಾಟ ಸೆಮಿಫೈನಲ್ ಹಂತ ತಲುಪಿತ್ತು. ಮೇಧಾ ಪಾಟ್ಕರ್ ಹಳ್ಳಿಗುಡಿಯ ರೈತರ ಮನೆಗಳಿಗೆ ಹೋಗಿ ರೈತ ಮಹಿಳೆಯರ ಜೊತೆ ಮಾತನಾಡಿದರು. ಸ್ಫೂರ್ತಿ ತುಂಬಿದರು. ಅಂದು ನಡೆದ ಬಹಿರಂಗ ಸಭೆಯಲ್ಲಿ ಮತ್ತೆ ಪೋಸ್ಕೊ ವಿರೋಧಿ ಘೋಷಣೆ ಮೊಳಗಿತು : ''ಪ್ರಾಣ ಕೊಡುತ್ತೇವೆ, ಭೂಮಿ ಕೊಡೋದಿಲ್ಲ''.

**ಭೂಸ್ವಾಧೀನ ವಿರೋಧಿ ಸಂಗ್ರಾಮ ಸಮಿತಿ**

ಭೂಸ್ವಾಧೀನ ವಿರೋಧಿ ಅಲೆ ದೊಡ್ಡ ಪ್ರಮಾಣದಲ್ಲಿ ಎದ್ದಿತು. ಸರಕಾರ ಜನರ ದಾರಿ ತಪ್ಪಿಸುವ ಎಲ್ಲ ಪ್ರಯತ್ನ ಮಾಡಿ ಸೋತಿತು. ಜನರ ಆಕ್ರೋಶ ಮುಗಿಲುಮುಟ್ಟಿತು. ಎಲ್ಲೆಡೆ ಪೋಸ್ಕೊ ವಿರುದ್ಧ, ಸರಕಾರದ ವಿರುದ್ಧ ಅಭಿಪ್ರಾಯ ರೂಪುಗೊಂಡಿತು. ಮಾಧ್ಯಮಗಳು ಚಳುವಳಿಗೆ ಪೂರಕವಾಗಿ ನಿಂತವು. ಆಗ ಅದಕ್ಕೊಂದು ಸಂಘಟನಾ ರೂಪ ಕೊಡಲು ನಿರ್ಧರಿಸಿ ಡಾ|| ತೋಂಟದ ಸಿದ್ದಲಿಂಗ ಸ್ವಾಮೀಜಿಯವರ ಹತ್ತಿರ ಮಾತನಾಡಿದೆವು. ಭೂಸ್ವಾಧೀನ ವಿರೋಧಿ ಸಂಗ್ರಾಮ ಸಮಿತಿ ರಚಿಸಿ ಸ್ವಾಮೀಜಿಯವರನ್ನು ಗೌರವಾಧ್ಯಕ್ಷರಾಗಲು ಕೇಳಿಕೊಂಡೆವು. ತೋಂಟದ ಸ್ವಾಮೀಜಿಯವರು ಸಂತೋಷದಿಂದ ಒಪ್ಪಿಕೊಂಡರು. ಮಾರನೇ ದಿನ ದಿನಾಂಕ ೧೧-೭-೨೦೦೧೧ರಂದು ಮುಂಡರಗಿಗೆ ಹೋಗಿ ಡಾ|| ಅನ್ನದಾನೇಶ್ವರ ಸ್ವಾಮೀಜಿಯವರನ್ನು ಸಮಿತಿಗೆ ಗೌರವಾಧ್ಯಕ್ಷರನ್ನಾಗಲು ಕೇಳಿಕೊಂಡೆವು. ಅವರೂ ಸಂತೋಷದಿಂದ ಒಪ್ಪಿಕೊಂಡರು. ಇಬ್ಬರು ಸ್ವಾಮೀಜಿಗಳನ್ನು ಗೌರವಾಧ್ಯಕ್ಷರನ್ನಾಗಿಸಿ ನಾನೂ ಸೇರಿದಂತೆ, ಬಸವರಾಜ ಸೂಳಿಭಾವಿ, ವೈ. ಎನ್. ಗೌಡರ, ಬಿ. ಎಸ್. ಸೊಪ್ಪಿನ, ಲಕ್ಷ್ಮಣ ದೇಸಾಯಿ, ಮೂರು ಗ್ರಾಮಗಳ ಗ್ರಾಮ ಸಮಿತಿಯ



ಹೋರಾಟ ಸಮಿತಿಯ ಸಂಚಾಲಕ ಡಾ|| ಸಿದ್ದನಗೌಡ ಪಾಟೀಲ ಸಭೆಯನ್ನುದ್ದೇಶಿಸಿ ಮಾತನಾಡುತ್ತಿರುವುದು

ನಾಯಕರನ್ನೊಳಗೊಂಡ ಒಂದು ಸಂಚಾಲಕ ಸಮಿತಿಯನ್ನು ರಚಿಸಲಾಯಿತು. ಜಿಲ್ಲೆಯ, ನಾಡಿನ ಎಲ್ಲ ಪ್ರಗತಿಪರ ಸಂಘಟನೆಗಳು, ಗ್ರಾಮ ಸಮಿತಿಗಳನ್ನು ಒಳಗೊಂಡ ಕಾರ್ಯಕಾರಿ ಸಮಿತಿ ರಚನೆಯಾಯಿತು.

ದಿನಾಂಕ ೧೨-೭-೨೦೧೧ರಂದು ಭೂಸ್ವಾಧೀನ ವಿರೋಧಿ ಸಂಗ್ರಾಮ ಸಮಿತಿ ಹಾಗೂ ಸಮಿತಿಯ ಮುಂದಿನ ಮೊದಲ ಹಂತದ ಕಾರ್ಯಕ್ರಮಗಳನ್ನು ಘೋಷಿಸಿದೆವು. ಅದರ ಪ್ರಕಾರ ೧೪-೭-೨೦೧೧ರಂದು ನಾಡಿನ ಮಠಾಧಿಪತಿಗಳ ಸಮಾವೇಶ, ೧೮-೭-೨೦೧೧ರಂದು ಹಳ್ಳಿಗುಡಿ ಗ್ರಾಮದಿಂದ ಕಾಲ್ನಡಿಗೆ ಜಾಥಾ, ದಿನಾಂಕ ೨೫-೭-೨೦೧೧ರಂದು ರಾಜ್ಯಮಟ್ಟದ ಭೂಸ್ವಾಧೀನ ವಿರೋಧಿ ಸಮಾವೇಶ, ಹೀಗೆ ಒಂದು ಕಾರ್ಯಕ್ರಮ ಪಟ್ಟಿಯನ್ನು ಬಿಡುಗಡೆ ಮಾಡಿದೆವು. ಕಾರ್ಯಕ್ರಮಕ್ಕೆ ರಾಜ್ಯದ ಎಲ್ಲೆಡೆಯಿಂದ ಬೆಂಬಲ ವ್ಯಕ್ತವಾಯಿತು. ಅದೇ ದಿನ ರಾಜ್ಯ ರೈತ ಸಂಘದ ಕೋಡಿಹಳ್ಳಿ ಚಂದ್ರಶೇಖರ ಬಂದು ಬೆಂಬಲ ಘೋಷಿಸಿದರು. ವಿರೋಧ ಪಕ್ಷಗಳ ಮುಖಂಡರಾದ ಶ್ರೀ ಸಿದ್ಧರಾಮಯ್ಯ ಹಾಗೂ ಎಚ್. ಡಿ. ಕುಮಾರಸ್ವಾಮಿಯವರು ಗದಗ, ಮುಂಡರಗಿ ಮತ್ತು ಇತರ ಗ್ರಾಮಗಳಿಗೆ ಭೇಟಿಕೊಟ್ಟು ಸ್ವಾಮೀಜಿಯವರನ್ನು ಕಂಡು ಸಂಗ್ರಾಮ ಸಮಿತಿಯ ಹೋರಾಟಕ್ಕೆ ಬೆಂಬಲ ಸೂಚಿಸಿದರು. ಹೋರಾಟದ ತೀವ್ರತೆಯನ್ನು ಗಮನಿಸಿದ ಆಗಿನ ಮುಖ್ಯಮಂತ್ರಿ ಶ್ರೀ ಬಿ. ಎಸ್. ಯಡಿಯೂರಪ್ಪನವರು ಗದಗ ಜಿಲ್ಲೆಯಲ್ಲಿ, ಎಲ್ಲ ಭೂಸ್ವಾಧೀನ ಪ್ರಕ್ರಿಯೆಯನ್ನು ಕೈ ಬಿಡುವುದಾಗಿ ಘೋಷಿಸಿದರು. ಆದರೂ ಲಿಖಿತ ಹೇಳಿಕೆ ಬರುವವರೆಗೆ ಹೋರಾಟ ಮುಂದುವರಿಯುವುದೆಂದು ಸಮಿತಿಯ ಗೌರವಾಧ್ಯಕ್ಷರಾದ ಡಾ॥ ತೋಂಟದಾರ್ಯ ಸ್ವಾಮೀಜಿಯವರು ಹೇಳಿದಾಗ ಮಾರನೇ ದಿನವೇ ಲಿಖಿತ ಹೇಳಿಕೆ ಜಿಲ್ಲಾಧಿಕಾರಿಗಳ ಮೂಲಕ ಬಂದಿತು. ಅಲ್ಲಿಗೆ ಪೋಸ್ಕೊ, ಮತ್ತಿತರ ಕಂಪನಿಗಳಿಗಾಗಿ ನಡೆದ ಭೂಸ್ವಾಧೀನ ಕ್ರಿಯೆಗೆ ಪೂರ್ಣವಿರಾಮ ಬಿದ್ದಿತು.

ಆದರೆ ಮೊದಲೇ ನಿಗದಿಯಾದಂತೆ ದಿ. ೧೪-೭-೨೦೧೧ರಂದು ನಾಡಿನ ಮಠಾಧಿಪತಿಗಳ ಸಮಾವೇಶ ನಡೆಯಿತು. ನಾಡಿನ ಸುಮಾರು ೬೦ ಜನ ಮಠಾಧಿಪತಿಗಳು ಸಮಾವೇಶ ನಡೆಸಿ ರೈತರ ಬದುಕಿನ ಜೊತೆ ಚೆಲ್ಲಾಟ ಆಡುವ ಸರಕಾರಕ್ಕೆ ಎಚ್ಚರಿಕೆ ಕೊಟ್ಟರು. ಅಲ್ಲಿಗೆ ಬೇರೆ ಪ್ರದೇಶಕ್ಕೆ ಪೋಸ್ಕೊ ಕಂಪನಿಯನ್ನು ಕೊಂಡೊಯ್ಯುವ ಕೈಗಾರಿಕಾ ಸಚಿವ ನಿರಾಣಿಯವರ ಯೋಜನೆಗೆ ಒಂದು ಎಚ್ಚರಿಕೆಯನ್ನು ಅಂದಿನ ಮಠಾಧಿಪತಿಗಳ ಸಮಾವೇಶ ನೀಡಿತ್ತು.

**ಮಾದರಿ ಹೋರಾಟ**

ಜನಪರ ಚಳುವಳಿಗಳ ಗೈರು ಹಾಜರಿಯಲ್ಲಿ, ವಿರೋಧ ಪಕ್ಷಗಳ ನಿಷ್ಕ್ರಿಯತೆಯ ಸಂದರ್ಭದಲ್ಲಿ ಮಠಾಧಿಪತಿಗಳ ಮುಂದಾಳತ್ವದಲ್ಲಿ ಪ್ರಗತಿಪರ ಸಂಘಟನೆಗಳು, ವ್ಯಕ್ತಿಗಳು ನಡೆಸಿದ ಈ ಹೋರಾಟ ಸ್ಮರಣೀಯವಾದದ್ದು. ಮಠಗಳಿಗೆ ಹಣ ನೀಡಿ, ಕೆಲವು ಮಠಾಧಿಪತಿಗಳಿಂದ ತಮ್ಮ ನೀತಿರಹಿತ ರಾಜಕಾರಣಕ್ಕೆ ಬೆಂಬಲ ಪಡೆದ ಮಾಜಿ ಮುಖ್ಯಮಂತ್ರಿ ಯಡಿಯೂರಪ್ಪನವರು ಧಾರ್ಮಿಕ ಕ್ಷೇತ್ರವನ್ನು ಕಲುಷಿತಗೊಳಿಸಿದ್ದರು. ಆದರೆ ಗದುಗಿನ ಡಾ॥ ತೋಂಟದ ಸಿದ್ದಲಿಂಗ ಸ್ವಾಮೀಜಿಗಳು ಹಾಗೂ ಮುಂಡರಗಿಯ ಡಾ॥ ಅನ್ನದಾನೇಶ್ವರ ಸ್ವಾಮೀಜಿಗಳು ಮತ್ತು ಹೋರಾಟದಲ್ಲಿ ಪಾಲ್ಗೊಂಡ ಎಲ್ಲ ಮಠಾಧಿಪತಿಗಳು ಅಭಿನಂದನಾರ್ಹರು. ಭ್ರಷ್ಟ ಮುಖ್ಯಮಂತ್ರಿಯನ್ನು ಬೆಂಬಲಿಸಿದ ಕೆಲವು ಮಠಾಧೀಶರಿಂದಾದ ಕಳಂಕವನ್ನು ಈ ಹೋರಾಟದಿಂದ ಸ್ವಲ್ಪ ತೊಳೆಯಲು ಸಾಧ್ಯವಾಯಿತು.

ಒಟ್ಟಾರೆ ದುಷ್ಟ ಪೋಸ್ಕೊ ಕಂಪನಿ ಹಾಗೂ ಭ್ರಷ್ಟ ಸರಕಾರದ ಹುನ್ನಾರಗಳನ್ನು ತಡೆದು, ಭೂಮಿ ಕಳೆದುಕೊಳ್ಳುವ ಭಯದಲ್ಲಿದ್ದ ರೈತರ ಹಿತ ಕಾಯ್ದ ಎಲ್ಲರಿಗೂ ವಂದನೆಗಳು. ಈ ಹೋರಾಟವು ಪ್ರಾಮಾಣಿಕವಾದ ನಾಯಕತ್ವ ಸಿಕ್ಕರೆ ಈ ರಾಜ್ಯದಲ್ಲಿ ಅಕ್ರಮ, ಅನ್ಯಾಯಗಳನ್ನು ತಡೆಯಬಹುದೆಂದು ತೋರಿಸಿಕೊಟ್ಟಿದೆ. ಆ ಭಾಗದ ರೈತರು ಇನ್ನಾದರೂ ಸಂಘಟಿತರಾಗಬೇಕು. ಅದಕ್ಕಾಗಿ ಸೂಕ್ತ ತಯಾರಿ ನಡೆದಿದೆ.

**ಡಾ॥ ಸಿದ್ದನಗೌಡ ಪಾಟೀಲ**
ರಾಜ್ಯ ಕಾರ್ಯದರ್ಶಿ, ಭಾರತ ಕಮ್ಯುನಿಸ್ಟ್ ಪಕ್ಷ
ಘಾಟೆ ಭವನ, ಬೆಂಗಳೂರು - ೫೬೦ ೦೦೩

# ಹದಿನೆಂಟರ ಹುಡುಗಿ



ಪಾಪದ ಹುಡುಗಿ;
ಹದಿನೆಂಟಿರಬೇಕು
ಬಗಲ ಕೂಸಿಗೆ ಮೂರ್‍ನಾಲ್ಕು
ತಿಂಗಳು.

ಅಲ್ಲಲ್ಲಿ ಹರಿದ
ಸೀರೆಯ ತುಂಬ
ಮುರಿದ ಕನಸುಗಳ ಚಿತ್ತಾರ
ಹೊಳೆವ ಕಣ್‌ಗಳಲಿ
ಸಾವಿರಾರು ಪ್ರಶ್ನೆಗಳಿಗುತ್ತರ

ಅಪ್ಪನ ಕುಡಿತಕ್ಕೆ
ಓಡಿಹೋದ ಅಮ್ಮ
ಬೆಂಬಿಡದೆ ನಿತ್ಯ
ಕಾಡುವ ಬಡತನದ ಗುಮ್ಮ

ತುತ್ತು ಕೂಳಿಗೆ
ಹೊತ್ತಿನ ಹಂಗಿಲ್ಲ
ಹಸಿವು ಇಂಗಿದ್ದು;
ಹುಡುಗಿಗೂ ನೆನಪಿಲ್ಲ

ಮುತ್ತು ಬರಿಸಿ
ಯಾರೋ ಕೊಟ್ಟುಹೋದ
ಪಾಪ; ಹುಡುಗಿಗೆ
ಹೊಸತಾಗಿ ಸಿಕ್ಕ ಶಾಪ

ರಸ್ತೆ ಬದಿಯ
ಪುಂಡರು ಸುರಿಸಿದ ಜೊಲ್ಲಿಗೆ
ರಸ್ತೆ ತೇವ
ಪಾಪದ ಹುಡುಗಿ ಹುಡುಕುತ್ತಿರುತ್ತಾಳೆ
ಅವರೊಳಗೆ; ಅಪ್ಪ-ಅಣ್ಣ-ಮಾವ

ಇವಳೂ ಹಾಗೇ
ಆಗಿಹೋದ ಆ ಹದಿನೆಂಟರ
ಹುಡುಗಿಯರಂತೆ
ಅಪರೂಪಕ್ಕೊಮ್ಮೊಮ್ಮೆ ಕೂಳಿಗೆ
ದಕ್ಕುತ್ತಾಳೆ.
ಆಗಾಗ ಅಲ್ಲಲ್ಲಿ ನಿಮಗೂ
ಸಿಕ್ಕುತ್ತಾಳೆ.
ಚೆನ್ನನ ಹುಡುಕಿದ ಅಕ್ಕನ
ಹಾಗೆ ಏನೋ ಹುಡುಕುತ್ತಾಳೆ
ಜಗದ ಗೌಜು ಗದ್ದಲದೊಳಗೆ
ಕಳೆದೇಹೋಗುತ್ತಾಳೆ

ಮತ್ತೊಬ್ಬಳು
ಹದಿನೆಂಟರ ಹುಡುಗಿ
ಅಲ್ಲೆಲ್ಲೋ ಹುಟ್ಟಿರುತ್ತಾಳೆ

**ಮೃತ್ಯುಂಜಯ ಎಂ. ಸಾಲೀಮಠ**
ಸಂಖ್ಯೆ ೨೮೯, ೩ನೇ 'ಎ' ಅಡ್ಡರಸ್ತೆ, ೩ನೇ ಬ್ಲಾಕ್, ೩ನೇ ಹಂತ
ಬಸವೇಶ್ವರ ನಗರ, ಬೆಂಗಳೂರು - ೫೬೦ ೦೭೯

ರವಿ ದಾ. ಅಂಚನ್

# ಕರಾವಳಿ ಕರ್ನಾಟಕದ ಬಹುತ್ವ ಮತ್ತು ಏಕರೂಪೀಕರಣದ ಅಪಾಯಗಳು

*(ಕಳೆದ ಸಂಚಿಕೆಯಿಂದ ಮುಂದುವರೆದುದು)*



**ಈ** ಭೂಮಿಯಲ್ಲಿ ಇಂದಿನ 'ಮತಧರ್ಮ' ಎಂಬ ಹೆಗ್ಗಳಿಕೆಯ ಬೆರೆಳೆಣಿಕೆಯ ಸಂಸ್ಥೆಗಳು ಕಾಣಿಸಿಕೊಳ್ಳುವ ಮೊದಲೇ ಮಾನವಜೀವಿಗಳು ಎಲ್ಲೆಡೆಯಲ್ಲೂ ತಮ್ಮದೇ ಆದ ಬುಡಕಟ್ಟು ಪರಂಪರೆಯ ಸಂಸ್ಕೃತಿಗಳನ್ನು ಕಟ್ಟಿಕೊಂಡಿದ್ದರು. ಅವರಲ್ಲೂ ಶೋಧ-ಪ್ರತಿಶೋಧಗಳು ನಡೆಯುತ್ತಲಿದ್ದುವು. ಅದರ ಅಮೂಲ್ಯ ಕೊಡುಗೆಗಳೇ ಕುತ್ತಿಗೋಲು, ಗುದ್ದಲಿ, ನೊಗ, ನೇಗಿಲು, ಚಕ್ರ, ಬಂಡಿ ಇತ್ಯಾದಿ ಒಂದೇ ಎರಡೇ! ಅನೇಕವಿವೆ. ಅದನ್ನು ಒಪ್ಪದೆ ಕೇವಲ ವೇದ, ಬೈಬಲ್, ಕುರಾನ್ ಇತ್ಯಾದಿಗಳ ಮತೀಯ ನೆಲೆಗಳಿಂದಲೇ ಏಕಶಿಲಾಕೃತಿಯ ಚಿಂತನೆ ನಡೆಸಿದರೆ ಏಣಿಶ್ರೇಣಿಯ ಜಾತಿವಾದಿ ಶೋಷಣೆಗಳು ಮತ್ತು ಅದನ್ನು ಮರೆಸಲು ಕೋಮುವಾದಿ ರಣನೀತಿಗಳು ಅನಿವಾರ್ಯವಾಗುತ್ತವೆ. ಇಂದು ಇತರತ್ರ ನಡೆಯುವಂತೆ ಕರಾವಳಿ ಕರ್ನಾಟಕದಲ್ಲೂ ಇದೇ ನಡೆದಿದೆ. ಆದರೆ ಇಲ್ಲಿ ಮಾತ್ರ ಅದು ಭಿನ್ನರೂಪಿ ಧ್ವನಿ ಮತ್ತು ದೃಶ್ಯವನ್ನು ನೀಡಲಿಕ್ಕೆ ಅದರದ್ದೇ ಆದ ಕಾರಣಗಳಿವೆ. ಯಾಕೆ ಇಲ್ಲಿ ಅದು ಆರಾಧನೆಯಲ್ಲಿ ಲಯವಾಗದೆ, ಹಾಗೆಂದು ಪ್ರಗತಿಪರ ಆಲೋಚನೆಯ ಪ್ರತಿಭಟನೆ ಕೂಡ ಆಗದೆ, ಕೇವಲ ಭಾವವಾದದ ಪ್ರತಿಭಟನೆಗಳಾಗಿ ಕೇಸರಿ-ಬಿಳಿ-ಹಸಿರು ಎಂಬ ಮತೀಯ ಪಡೆಗಳ ಮುಖೇನ ಆಗಾಗ ಆತಂಕಗಳನ್ನು ಹುಟ್ಟುಹಾಕುತ್ತಿವೆ ? ಯಾಕೆ ಈಗಲೂ ಅದು ಕೇವಲ ಬಡವರ ಬದುಕನ್ನೇ ಬಲಿ ಪಡೆಯುತ್ತಿದೆ ?

ಅದರ ಗುಟ್ಟು ಇಲ್ಲಿಯ ಜಾತೀಯ ಸಮೀಕರಣಗಳಲ್ಲಿದೆ. ಇದಕ್ಕಾಗಿ ನಮಗಿಂದು ಅಂದಿನ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ ೧೮೯೧ರಲ್ಲಿ ನಡೆದ ಜನಗಣತಿಯ ಅಧಿಕೃತ ಮತೀಯ ಮತ್ತು ಜಾತೀಯ ಅಂಕಿ ಅಂಶಗಳನ್ನೇ ಆಧಾರವಾಗಿಸಿಕೊಳ್ಳದೆ ಗತ್ಯಂತರವಿಲ್ಲ. ಅದರಲ್ಲಿ ನಮೂದಿತವಾದ ಮತೀಯ ಲೋಕಸಂಖ್ಯೆಯಲ್ಲಿ ಹಿಂದುಗಳು ೮೧.೬೮%, ಮುಸ್ಲಿಮರು ೧೦.೬೦%, ಕ್ರೈಸ್ತರು ೦೬.೭೫% ಮತ್ತು ಜೈನರು ಶೇಕಡ ಒಂದಕ್ಕೂ ಕಡಿಮೆ, ಅಂದರೆ ೦೦.೯೭% ಇದ್ದಾರೆಂದು ನಮೂದಿಸಿದೆ. ಇಲ್ಲಿನ ಹಿಂದುಗಳ ಜಾತಿವಾರು ಲೋಕಸಂಖ್ಯೆಯಲ್ಲಿ ಬಿಲ್ಲವರು ೧೬.೬೪%, ಹೊಲೆಯರು ೦೪.೭೩%, ಬಂಟರು ೧೦.೪೯%, ಬ್ರಾಹ್ಮಣರು ೦೯.೧೯%, ಗೌಡರು ೦೪.೧೭%, ಮೊಗವೀರರು ೦೩.೭೨%, ಕುಂಬಾರರು ೦೨.೬೩%, ದೇವಾಡಿಗರು ೦೨.೫೦%, ಮರಾಠಿಗರು ೦೨.೪೮%, ನಾಯರ್ ೦೧.೪೭%, ಗಾಣಿಗರು ೦೧.೧೨%, ಅಗಸರು ೦೦.೯೪%, ದೇವಾಂಗರು ೦೦.೯೦%, ಹಜಾಮರು ೦೦.೪೪%, ಸಮಗಾರರು ೦೦.೨೨% ಮತ್ತು ಇತರರು ೦೪.೭೩% ಇದ್ದರೆಂದು ದಾಖಲಾಗಿದೆ. ಇದರೊಡನೆ ಜಾತಿ ಮತ್ತು ಮತೀಯ ಪರಿಗಣನೆಗೆ ದಕ್ಕದ ೦೫.೩೧% ಗಿರಿಜನರೂ ಇದ್ದದ್ದನ್ನು ಮಾತ್ರವಲ್ಲ, ಆಗ ಕಾಸರಗೋಡು ಕೂಡ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ ಭಾಗವಾಗಿತ್ತು ಎಂದು ನೆನಪಿರಬೇಕು. ಇನ್ನು ಇಲ್ಲಿನ ಅಲೆಮಾರಿ ಜನಾಂಗಗಳ ಕುರಿತು ಸ್ಪಷ್ಟತೆ ಇಲ್ಲದಿರುವುದು ಬೇರೆಯೇ ಮಾತು. ಹಾಗಿದ್ದೂ ಇಂದಿನ ಇಪ್ಪತ್ತೊಂದನೆಯ ಶತಮಾನದಲ್ಲೂ ತುಳುನಾಡಿನ ಮತೀಯ ಇಲ್ಲಾ ಜಾತೀಯ ಲೆಕ್ಕಾಚಾರಗಳಲ್ಲಿ ಹೆಚ್ಚಿನ ಅಂತರ ಇದ್ದ ಹಾಗಿಲ್ಲ. ಇದನ್ನು ಚುನಾವಣೆಯಲ್ಲಿ ಗೆದ್ದ ಮತ್ತು ಬಿದ್ದ ಅಭ್ಯರ್ಥಿಗಳ ಸಮೀಕ್ಷೆಗಳು ಎತ್ತಿತೋರಿಸುತ್ತಿವೆ.



ತುಳುನಾಡಿನಲ್ಲಿ ಮುಸ್ಲಿಮರು ಮತ್ತು ಕ್ರೈಸ್ತರು ಮತೀಯ ಅಲ್ಪಸಂಖ್ಯಾತರಾಗಿದ್ದರೂ ಅವರ ಜನಬಲದಲ್ಲಿ ಅವರು ೧೭.೩೫% ಇರುವುದು ಅವರ ಗಮನಾರ್ಹ ಶಾಕ್ತಿಕ ನೆಲೆ. ಮಾತ್ರವಲ್ಲ, ಇವರು ಶೈಕ್ಷಣಿಕವಾಗಿ ಮತ್ತು ಆರ್ಥಿಕವಾಗಿ ಇಲ್ಲಿನ ಮೇಲ್ವರ್ಗದವರಿಗೆ ಪ್ರಬಲ ಪೈಪೋಟಿ ನೀಡಬಲ್ಲರು. ಈಗಾಗಲೇ ಮುಸ್ಲಿಮರು ಮತ್ತು ಕ್ರೈಸ್ತರು ಒಂದೊಂದು ಮೆಡಿಕಲ್ ಕಾಲೇಜನ್ನು ಹೊಂದಿದ್ದಾರೆ ಎನ್ನುವುದು ಇದಕ್ಕಿರುವ ಪುರಾವೆಗಳಲ್ಲಿ ಒಂದು ಮಾತ್ರ. ಹಿಂದುಗಳ ವೈವಿಧ್ಯಮಯ ಆಲಯಗಳ ನವೀಕರಣಕ್ಕೆ ಸರಿಮಿಗಿಲೆನ್ನುವ ರೀತಿಯಲ್ಲಿ ಇಲ್ಲಿ ಮಸೀದಿ-ದರ್ಗಾಗಳು ಕೂಡ ಹೊಸ ಮೆರುಗು ಪಡೆಯುತ್ತಲೇ ಇವೆ! ಕ್ರೈಸ್ತರ ಚರ್ಚು-ಚ್ಯಾಪಲ್ ಕೂಡ ಈ ಬಗೆಯ ಪೈಪೋಟಿಯಲ್ಲಿ ಬಹಳ ಹಿಂದಿಲ್ಲ. ಒಟ್ಟಿನಲ್ಲಿ ಒಂದೆಡೆ ಹಿಂದೂ ಜಮೀನ್ದಾರಿ, ಮುಸ್ಲಿಂ ಸರಂಜಾಮಶಾಹಿ ಮತ್ತು ಕ್ರೈಸ್ತ ವಸಾಹತುಶಾಹಿ ಮೇಲ್ವರ್ಗದ ಮನಸ್ಸುಗಳು ಕೊಬ್ಬುತ್ತಿವೆ; ಆರ್ಥಿಕವಾಗಿ ಬಲಗೊಳ್ಳುತ್ತಿವೆ. ಆದರೆ ಇನ್ನೊಂದೆಡೆ ಇಂಥ ಶ್ರೀಮಂತರು ಒಡ್ಡಿದ ದೇವರು-ದಿಂಡರ ಬಲೆಯಲ್ಲಿ ಬಿದ್ದ ಕೆಳವರ್ಗದ ಶ್ರಮಿಕರು ಮಾತ್ರ ತಮ್ಮದಾಗಿದ್ದ ಕಸುಬು-ಕಾಸು-ಕಲೆ -ಕಾಯ ಹೀಗೆ ಎಲ್ಲವನ್ನೂ ಬಲಿ ಕೊಟ್ಟು ಮೇಲ್ವರ್ಗದವರ ಸೈನಿಕ ಸಮೂಹದಲ್ಲಿ ಕೇವಲ ಕಾಲಾಳುಗಳಾಗುತ್ತಾರೆ; ಕೊನೆಗೊಮ್ಮೆ ತಮ್ಮದಾದ ಕೀಳರಿಮೆಯಲ್ಲೇ ಅತಂತ್ರರಾಗುತ್ತಾರೆ. ಹೆಚ್ಚಾಗಿ ಮತೀಯ ದಂಗೆಯಲ್ಲಿ 'ಹುತಾತ್ಮ'ರಾಗುವವರೂ ಇಂತಹ ಬಡವರೇ ಆಗಿದ್ದಾರೆ. ಇಂಥ ಬಲಿಪಶುಗಳ ಬಗ್ಗೆ ಯತಿ, ಇಂದ್ರ, ಮುಲ್ಲಾ, ಫಾದರ್ ಮೊದಲಾದ ಮತೀಯ ನಾಯಕರಿಗೆ ಅರಿವಿಲ್ಲದೆ ಇಲ್ಲ. ಆದರೆ



ಅಧಿಕಾರ ದೇಗುಲದ ಗುಣಗಾನ ಅವರ ಬಲದ ನೆಲೆಯೂ ಹೌದು; ಬುದ್ಧಿಯ ನೆಲೆಯೂ ಹೌದು. ಹೀಗೆ ಮತಮಾನ್ಯರ ಬುದ್ಧಿ-ಬಲಗಳ ಜಂಟಿ ಕಾರ್ಯಾಚರಣೆಯಲ್ಲಿ ಯಾವತ್ತೂ ಕಂಗಾಲಾಗುವವರು ದುಡಿದುಣ್ಣುವ ಬಡ ಶ್ರಮಿಕ ಬಹುಸಮುದಾಯಗಳು ಮಾತ್ರ ಎನ್ನುವುದರಲ್ಲಿ ಅನುಮಾನವಿಲ್ಲ. ಆದರೆ ಈ ದುಡಿದುಣ್ಣುವ ಮಂದಿಯೇ ಅವರನ್ನು ಶೋಷಿಸುತ್ತಿರುವ ಅಧಿಕಾರಶಾಹಿಯ 'ಓಟ್' ಮತ್ತು 'ನೋಟ್' ಬ್ಯಾಂಕ್ ಆಗಿಯೂ, ಅವರುಂಡ ನೋವಿಗೆ ಸಿಟ್ಟಾಗಿ ಸಿಡಿಯದೆ, ಪೂಜೆಯ ವಿಧೇಯತೆಯಲ್ಲಿ ಕೊಳೆಯುತ್ತಲಿರುವುದು ವಿಚಿತ್ರವಾದರೂ ನಿಜ! 'ಒಂದು ಕೊಳೆತರೆ ಇನ್ನೊಂದಕ್ಕೆ ಗೊಬ್ಬರ' ಅಲ್ಲವೇ?

ತಮ್ಮ ಶೋಷಕರು ಯಾರೆಂದರಿಯಲು ನಮ್ಮ ಪರಿಸರದ ಸಾಮಾಜಿಕ, ರಾಜಕೀಯ, ಆರ್ಥಿಕ ಮತ್ತು ಸಾಂಸ್ಕೃತಿಕ ಒಳನೋಟ ಬೇಕು. ಉದಾಹರಣೆಗೆ, ಮಧ್ಯಯುಗದ ಕಾಲದಲ್ಲಿ ಗೋವೆಯಲ್ಲಿ ಪೊರ್ತುಗೀಸರು ಪ್ರಾರಂಭಿಸಿದ ಕ್ರೈಸ್ತರ ಮತಪ್ರಚಾರದ ಉಗ್ರತೆಗೆ ಬೆದರಿ ತುಳುನಾಡಿಗೆ ವಲಸೆ ಬಂದವರಲ್ಲಿ ಗೌಡ ಸಾರಸ್ವತ ಬ್ರಾಹ್ಮಣರದ್ದೂ ಒಂದು ಗುಂಪಿತ್ತು. ಇವರ ಬದುಕಿನ ಬಲ ವ್ಯಾಪಾರ ವ್ಯವಹಾರಗಳ ಮೇಲೆ ನಿರ್ಧಾರವಾಗಿತ್ತು. ಇಲ್ಲಿಗೆ ಬಂದಾಗ ದೊರೆತ ಅನುಕಂಪದ ಅಲೆ ಮತ್ತು ಆಳುವ ವರ್ಗದ ಕೃಪೆಯಿಂದಾಗಿ ಇವರು ಬೇಗನೆ ಭೂಮಾಲಕರೂ ಆದರೆನ್ನಿ. ಆದರೆ ತುಳುನಾಡಿನಲ್ಲಿ ವಿಜಯನಗರದ ಅರಸರ ಕಾಲದಿಂದಲೂ ಮುಸ್ಲಿಮರು ವ್ಯಾಪಾರ ರಂಗದಲ್ಲಿ ಹಿಡಿತ ಸಾಧಿಸಿದ್ದರು. ಅವರಿಲ್ಲಿ ಭೂಮಾಲಕರೂ ಆಗಿದ್ದರು. ಈ ಹಿಡಿತಗಳನ್ನು ಮುರಿಯಲು ಗೌಡ ಸಾರಸ್ವತರು ಮತೀಯ ಕೋಮುವಾದಕ್ಕೆ ಶರಣಾದರು.

ಇದಕ್ಕಾಗಿ ಅವರು ಅನುಸರಿಸಿದ ರಣನೀತಿ ಮಾತ್ರ ತುಂಬ ಅಪಾಯಕಾರಿಯಾಗಿತ್ತು. ತುಳುನಾಡಿನಲ್ಲಿ ಮೊಗವೀರ ಮತ್ತು ಬ್ಯಾರಿಗಳ ವ್ಯಾಪಾರ ವ್ಯವಹಾರಗಳ ನಡುವೆಯೇ ಗಂಡು-ಹೆಣ್ಣುಗಳ ಸಂಬಂಧಗಳು ಕೆಲವೊಮ್ಮೆ ಚಿಕ್ಕಪುಟ್ಟ ಕಲಹಕ್ಕೆ ಎಡೆಮಾಡುತ್ತಿದ್ದವು. ಅಂತಹ ಸನ್ನಿವೇಶ ಗಳನ್ನು ತಮ್ಮ ವ್ಯಾಪಾರಿ ಪ್ರತಿಸ್ಪರ್ಧಿಗಳಾದ ಮುಸ್ಲಿಮರ ದಮನಕ್ಕೆ ಬಳಸಿಕೊಳ್ಳಲು ಗೌಡ ಸಾರಸ್ವತರು ಮುಂದಾಗುತ್ತಾರೆ. ಆಗ ಅವರನ್ನು ಮತೀಯ ಹಿನ್ನೆಲೆಯಲ್ಲಿ ಬ್ರಾಹ್ಮಣರ ಒಂದು ಗುಂಪು ಬೆಂಬಲಿಸುತ್ತದೆ. ಈ ಎರಡು ಸಮುದಾಯಗಳ ಜನಸಂಖ್ಯೆ ೦೯.೧೯% ಇದ್ದು, ಅದು ಸರಿಸುಮಾರು ಮುಸ್ಲಿಂ ಸಮುದಾಯದ ಜನಸಂಖ್ಯೆಯಷ್ಟೇ ಆಗಿದ್ದರೂ ಅದಕ್ಕೆ ಸಾಹಸೀ ಮೊಗವೀರರ ಒಂದು ವರ್ಗ ಸೇರಿದ್ದರಿಂದ ಅದು ಇಲ್ಲಿನ ಮತೀಯ ಸಂಘರ್ಷದ ಸಮೀಕರಣವನ್ನೇ ಬದಲಿಸಿತು. ಇದರ ಜೊತೆಗೆ ಮುಸ್ಲಿಮರ ಬಗೆಗೆ ಮತೀಯ ನೆಲೆಯಲ್ಲಿ ಒಳಗಿನಿಂದ ಕತ್ತಿ ಮಸೆಯುತ್ತಲೇ ಇದ್ದ ೦೬.೭೫% ಕ್ರೈಸ್ತರ ನಿರ್ಲಿಪ್ತತೆ ಕೂಡ ಕೋಮುವಾದಿ ಹಿತಾಸಕ್ತಿಗೆ ಪೂರಕವಾಯಿತು. ಇದಕ್ಕೂ ಕಾರಣವಿದೆ. ತಮ್ಮದೇ ಆದ ಗೋವಾ ಮೂಲದ ಸೆಳೆತ ಮತ್ತು ಕೊಂಕಣಿ ಭಾಷೆಯ ತುಡಿತಗಳೂ ಸೇರಿದ್ದರಿಂದ ಗೌಡ ಸಾರಸ್ವತರ ಬಗ್ಗೆ ಕ್ರೈಸ್ತರ ನಿರ್ಲಿಪ್ತತೆ ಸಾರಸ್ವತರ ಕೋಮುವಾದಕ್ಕೆ ಕುಮ್ಮಕ್ಕು ನೀಡಿ ಮುಂದಿನ ಅನರ್ಥ ಪರಂಪರೆಗೆ ಅವಕಾಶ ಕಲ್ಪಿಸಿತು. ಇದಲ್ಲದೆ ತುಳುನಾಡಿನ ನವವಲಸಿತ ನೆಲೆಯಲ್ಲಿ ಕೊಂಕಣಿ ಭಾಷಿಕ ಮತ್ತು ಜನಾಂಗೀಯ ಸೆಳೆತಕ್ಕೆ ಇನ್ನೊಂದು ಅತಂತ್ರತೆಯ ಮಗ್ಗುಲೂ ಇದೆ. ಗೋವೆಯಲ್ಲಿ ಪೊರ್ತುಗೀಸರು ಎದುರಿಸುತ್ತಿದ್ದ ರಾಜಕೀಯ ಬಿಕ್ಕಟ್ಟುಗಳಿಂದ ಅವರು ಹಿಂದುಗಳನ್ನು ಮಾತ್ರವಲ್ಲ ಮತಾಂತರಗೊಂಡ ದೇಶೀಯ ಕ್ರೈಸ್ತರನ್ನೂ ಗುಮಾನಿಯಿಂದ ಕಾಣ ಬೇಕಾಯಿತು. ಅಲ್ಲಿ ಮತಾಂತರಗೊಂಡವರಲ್ಲೂ ಎರಡು ವಿಭಜನೆಗಳಿದ್ದವು. ಒಂದು ಗುಂಪು ತಮ್ಮ ಅಧಿಕಾರದ ಉಳಿವಿಗಾಗಿ ಮತಾಂತರಗೊಂಡ ಭೂಮಾಲಕರದ್ದಾಗಿದ್ದರೆ, ಇನ್ನೊಂದು ಗುಂಪು ದುಡಿದುಣ್ಣುವ ಶ್ರಮಿಕರದ್ದಾಗಿತ್ತು. ಇದರಲ್ಲಿ ಪೋರ್ತುಗೀಸರ ಗುಮಾನಿಗೆ ಬಲಿಯಾಗಿ ಅವರಿಂದ ಹೊರದಬ್ಬಲ್ಪಟ್ಟವರು ಮತಾಂತರಗೊಂಡು ಕ್ರೈಸ್ತರಾದರೂ ಅವರದ್ದು ಭೂಮಾಲಕರ ಗುಂಪು. ಒಟ್ಟಿನಲ್ಲಿ ಭೂಮಾಲಕರ ಎರಡು ಮತೀಯ ಬಣಗಳಲ್ಲಿ ಇದ್ದ ವೃತ್ತಿ-ಆಸಕ್ತಿಗಳಲ್ಲಿ ಇದ್ದ ಸಹಸ್ಪಂದನಗಳೇ ಅವರುಗಳನ್ನು ಗೋವಾದಿಂದ ಹೊರದಬ್ಬಿತು. ಏಕೆಂದರೆ ಪೋರ್ತುಗೀಸರು ವೃತ್ತಿ-ಆಸಕ್ತಿಗಳಲ್ಲಿ ಅಪ್ಪಟ ವ್ಯಾಪಾರಿಗಳೇ ಆಗಿದ್ದು ಅವರಿಗೆ ದೇಶೀಯರ ಪೈಪೋಟಿಗಾರರನ್ನು ಬಗ್ಗುಬಡಿಯುವುದು ಒಂದು ರಣನೀತಿಯೇ ಆಗಿತ್ತು; ಅದರಲ್ಲಿ ಮತೀಯ ಸಂಬಂಧಗಳು ನಗಣ್ಯವಾಗಿತ್ತು. ಇವೆಲ್ಲಾ ನಮ್ಮ ಚಿಂತನೆಯ ನೆಲೆಯಾಗದಿದ್ದರೆ ಕರಾವಳಿಯಲ್ಲಿ ಕೋಮುವಾದಕ್ಕೆ ಪ್ರತಿಯಾಗಿ ಯಾವುದೇ ಶ್ರಮಶಕ್ತಿಯ ನೈತಿಕ ಪರ್ಯಾಯವನ್ನು ಕಟ್ಟುವುದು ಪ್ರಯಾಸದ ಕೆಲಸ.



ಈ ಎಲ್ಲಾ ಸೂಕ್ಷ್ಮಗಳನ್ನು ಗಮನಿಸದೆ ಮತೀಯ ನೆಲೆಯಲ್ಲೇ ದುಡುಕಿ ಹಿಂದುಗಳ ಮೇಲೆ ತಿರುಗಿಬಿದ್ದವರು ಬ್ಯಾರಿಗಳು. ಆಗ ಅದಕ್ಕೆ ಸಾತ್ ನೀಡಿದ್ದು ಕೇರಳದ ಮುಸ್ಲಿಮರ ಮತೀಯ ಏಕರೂಪೀಕರಣದ ಹುನ್ನಾರು ಎನ್ನುವುದು ಒಂದು ಕಟು ವಾಸ್ತವ. ಹಾಗೆ ನೋಡಿದರೆ ತುಳುನಾಡಿನ ಬ್ಯಾರಿಗಳಲ್ಲಿ ಇಂದಿಗೂ ಉಳಿದಿರುವ 'ಇಲ್ಲಂ' ಎಂಬ ೧೬ ಕುಲ ಮೂಲದ ನೆಲೆಯ ಪರಿಕಲ್ಪನೆ ಪ್ರಾಚೀನ ತುಳುವರ ಬುಡಕಟ್ಟು ಪರಂಪರೆಗೆ ಸಂವಾದಿಯಾದದ್ದು. ಅದು ಖಂಡಿತಕ್ಕೂ ಅರೇಬಿಯದಿಂದ ಬಂದುದಲ್ಲ! ಆದರೆ ಇದನ್ನು ತಿಳಿಯಲು ಕಣ್ಣು-ಕರುಳು ಎರಡೂ ಬೇಕಲ್ಲ! ಇಂತಹ ದೇಶೀಯ ಅನುಬಂಧಗಳನ್ನು ಆಲೋಚಿಸದೆ



ಕೇವಲ ಮತೀಯ ಉನ್ಮಾದದಲ್ಲಿ ಮೈಮರೆತಾಗ ಅದು ತನ್ನ ಬಹುತ್ವ ಮತ್ತು ಅನನ್ಯತೆ ಎರಡರ ನಾಶಕ್ಕೆ ರಹದಾರಿಯಾಗುತ್ತದೆ ಎನ್ನುವುದನ್ನು ಮರೆಯಬಾರದು. ಇಂತಹ ಧನಿಕರ ಧನಭ್ರಾಂತಿ ಮತ್ತು ಶ್ರಮಿಕರ ಮತಭ್ರಾಂತಿಯಲ್ಲಿ ಸ್ಥಳೀಯ ಬಹುರೂಪಿ ಧಾರೆಗಳು ಬತ್ತಬಾರದು, ಮಾನವೀಯತೆ ಮರೆಯಾಗಬಾರದು. ಸ್ಥಳೀಯ ನಿಸರ್ಗದೊಡನೆ ಬೆರೆಯದ 'ಮತ' ಇಲ್ಲಾ 'ಮನಸ್ಸು' ಎರಡೂ ಮಾನವೀಯತೆಯತ್ತ ಮುಖಮಾಡುವುದಾದರೂ ಹೇಗೆ?

ಆದರೆ ಏನು ಮಾಡೋಣ! ಇದು ಹೇಳಿದಷ್ಟು ಸರಳವಲ್ಲದ ಒಂದು ಸಂಕೀರ್ಣ ಸ್ಥಿತಿ. ಇಲ್ಲಿ ಧನಿಕರ ಧನಭ್ರಾಂತಿ ಮತ್ತು ಶ್ರಮಿಕರ ಮತಭ್ರಾಂತಿ ಎರಡರ ಇನ್ನೊಂದು ಉದಾಹರಣೆ, ಇದೇ ಪೋರ್ತುಗೀಸರು ಮಂಗಳೂರಿನಲ್ಲಿ ತೆಂಗಿನ ಮರಗಳನ್ನು ಕಡಿದದ್ದು. ಇದೂ ಕೂಡ ಯಾವತ್ತೂ ಮತೀಯ ರಾಜಕಾರಣದಲ್ಲೇ ಗಿರ್ಕಿ ಹೊಡೆಯುತ್ತಿದೆ. ಎಲ್ಲ ಕಾಲದಲ್ಲೂ ತುಳುನಾಡಿನಲ್ಲಿ ತೆಂಗಿನ ಮರಕ್ಕೆ ಬಹುರೂಪಿ ಆಯಾಮಗಳಿವೆ. ಇಲ್ಲಿ ಇದು ಮನೆಯ ಮುಂದೆ ಇರಲೇಬೇಕು; ಇದು ಇರುವ ಮನೆಗಳಿಗೆ ಭೂತಬಾಧೆ ತಟ್ಟದು; ಇಂತಹ ನಂಬಿಕೆಗಳ ಮುಖೇನ ನೆಲಮೂಲದ ತುಳುವರು ಶೋಷಕ ಪ್ರಭುತ್ವಕ್ಕೆ ಒಡ್ಡಿದ ಪ್ರತಿಭಟನೆಯ ನೆಲೆಗಳಿವೆ.

ತುಳುನಾಡಿನಲ್ಲಿ ಜನಸಂಖ್ಯೆ ನೆಲೆಯಲ್ಲಿ ಬಿಲ್ಲವರು ಬಲಯುತರು. ಯಾಕೆಂದರೆ ಅವರ ಜನಬಲ ೧೬.೬೪%. ಅವರು ಬಿಲ್ಲಾಳುಗಳಾಗಿದ್ದುದರಿಂದ 'ಬಿಲ್ಲವರು' ಎಂಬ ಮಾತು ಸದ್ಯಕ್ಕೆ ಒತ್ತಟ್ಟಗಿರಲಿ. ಕಾಯಕದ ನೆಲೆಯಲ್ಲಿ ಆರೋಗ್ಯ ರಕ್ಷಕ ವೈದ್ಯಕೀಯ ಪರಿಣತಿಯಿಂದ ಬಿಲ್ಲವರು 'ಬೈದ್ಯೆತಿ-ಬೈದ್ಯ' ಎಂಬ ಅಭಿಧಾನಕ್ಕೆ ಪಾತ್ರರು. ರೋಗಕ್ಕೆ ಮದ್ದು ಸಿದ್ಧಪಡಿಸುವ ಮತ್ತು ರೋಗಿಯ ನಾಡಿ ಅರಿತು ಮದ್ದು ಕೊಡುವ ಇಕ್ಕೆಲದಲ್ಲೂ ಇವರ ಪರಿಣತಿ ಇದೆ. ಹಾಗಾಗಿ ತೆಂಗು ಮತ್ತು ತಾಳೆ ಮರಗಳ ಜೊತೆ ಇವರದ್ದು ಘನಿಷ್ಠ ತಾದಾತ್ಮ್ಯ. ವೈದ್ಯಕೀಯದಲ್ಲಿ ಹೆಚ್ಚಿನ ಮದ್ದುಗಳಿಗೆ ಕಳ್ಳು-ಹೆಂಡ ಬೇಕಾಗುತ್ತದೆ. ಇದರ ಇನ್ನೊಂದು ಉತ್ಪನ್ನವೇ ಬೆಲ್ಲ. ಇದು ಕೂಡ ಮದ್ದಿನಲ್ಲಿ ಸೇರುವ ಒಂದು ಬಹುಮುಖ್ಯ ಮೂಲವಸ್ತು. ಆದ್ದರಿಂದ ಕಳ್ಳು, ಹೆಂಡ ಮತ್ತು ಬೆಲ್ಲ ಇವುಗಳ ಉತ್ಪಾದನೆಯ ತಂತ್ರಜ್ಞಾನ ಬಿಲ್ಲವರಲ್ಲಿತ್ತು. ಇನ್ನು ಉದ್ಯಮದ ದೃಷ್ಟಿಯಿಂದಲೂ ಇದು

ಜಗತ್ತಿನ ಪ್ರಾಚೀನತಮ ಜೀವನಾವಶ್ಯಕ ಉದ್ಯಮ. ಇವು ಆರ್ಥಿಕ ಬಲ ನೀಡುವ ಉದ್ಯಮಗಳು.

ಹೀಗಿದ್ದೂ ಇವರು ಅವರದ್ದೇ ಆದ ನೆಲಮೂಲದಲ್ಲಿ 'ಅನ್ಯರು' ಯಾಕಾದರು ? ಮೊದಲು ಕೊಡಲಿರಾಮನ ಪರಿವಾರದವರಿಂದ ಮತ್ತೆ ವ್ಯಾಪಾರಿ ಹಿತಾಸಕ್ತಿಯ ವಿದೇಶೀ ಆಕ್ರಮಣಶೀಲರಿಂದ ಬಿಲ್ಲವರನ್ನು ಅನ್ಯರನ್ನಾಗಿಸುವ ಪರಂಪರೆ ಹೇಗೆ ಹುಟ್ಟಿಕೊಂಡಿತು ? ಇದರ ಮರ್ಮವನ್ನು ಕೇವಲ ಸಾಮಾಜಿಕ, ಸಾಂಸ್ಕೃತಿಕ, ರಾಜಕೀಯನೆಲೆಯಲ್ಲಿ ಮಾತ್ರ ಅರಸದೆ ಅದರ ಆರ್ಥಿಕ ನೆಲೆಯನ್ನೂ ಪರಿಗಣಿಸ ಬೇಕಾಗುತ್ತದೆ. ಹಾಗೆ ನೋಡಿದರೆ ವೈದ್ಯರು ವೈದಿಕರಿಗೆ ಪ್ರಾಚೀನ ಕಾಲದಿಂದಲೂ ಅಸ್ಪೃಶ್ಯರು. ವೈದಿಕರು ಅವರ ದೇವರುಗಳಿಗೆಲ್ಲಾ ವೈದ್ಯರಾಗಿದ್ದ ಅಶ್ವಿನಿ ದೇವತೆಗಳನ್ನೇ ಬಹುಕಾಲ ಹೊರಗೆ ಇರಿಸಿರುವಾಗ, ಇಲ್ಲಿಗೆ ಬಂದ ಕೊಡಲಿ ರಾಮನ ಕುಲದವರಾದ ಅದೇ ವೈದಿಕರಿಗೆ ವೈದ್ಯವಿದ್ಯಾ ವಿಶಾರದರಾದ ಬಿಲ್ಲವರು ಅನ್ಯರಾಗುವುದು ಸಹಜ, ಅಲ್ಲವೆ ?

ಬಿಲ್ಲವರ ಉದ್ಯಮಶೀಲತೆ ನೆಲೆಗಳನ್ನೇ ಕಳ್ಳು-ಹೆಂಡಗಳ ನಿಮಿತ್ತ ಅಪವಿತ್ರಗೊಳಿಸಿ ಅವರಲ್ಲಿ ಕೀಳರಿಮೆಯನ್ನು ತುಂಬ ಲಾಯಿತು. ಅದಕ್ಕೆ ಬೆಂಬಲವಾಗಿ ವೈದಿಕ ದೇವಾಲಯದ ಆವರಣದಲ್ಲಿ ಸೇವೆಯ ನೆಪದಲ್ಲಿ ಕೆಲವು ಜಾತಿಯವರನ್ನು ಏಣಿಶ್ರೇಣಿಯ ಸಿದ್ಧಾಂತದಂತೆ ತಮ್ಮವರೆಂದು 'ಒಳಗಿಡುವ' ಮತ್ತು ಇನ್ನು ಕೆಲವರನ್ನು ಅನ್ಯರು ಎಂದು 'ಹೊರಗಿಡುವ' ತಂತ್ರಗಾರಿಕೆಗೆ ಚಾಲನೆ ದೊರೆಯಿತು. ವಸ್ತುಸ್ಥಿತಿ ಹಾಗಿರುವಾಗ ಇಂತಹ ಒಡೆದು ಆಳುವ ನೀತಿಗೆ ಕೇವಲ ವಿದೇಶೀ ಆಕ್ರಮಣಕಾರರತ್ತ ಬೊಟ್ಟುಮಾಡುವ ನೈತಿಕತೆ ನಮಗಿದೆಯೆ ? ಇಂದಿಗೂ ಹಿಂದುಗಳಲ್ಲೇ ಏಕಪಂಕ್ತಿಯ ಭೋಜನ ವಿಶ್ವ ಹಿಂದೂ ಪರಿಷತ್ತಿನ ಸಂಭ್ರಮಿತ ನೆಲೆ ಯಾದ ಉಡುಪಿಯ ಅಷ್ಟಮಠಕ್ಕೆ ಸಾಧ್ಯವಾಗದಿರುವಾಗ ಮುಂದೇನು ? ''ನಾವೆಲ್ಲಾ ಹಿಂದು ನಾವೆಲ್ಲ ಒಂದು'' ಎಂದರೆ ಯಾವ ಭ್ರಮಾಲೋಕದಲ್ಲಿ ನಾವಿದ್ದೇವೆ ಎನ್ನುವುದೇ ತಿಳಿಯುವುದಿಲ್ಲ! ಇಲ್ಲಿ ತಮ್ಮ ಮೂಲ ದೇವರಿಗೆ ಪರಿವಾರ ದೇವರು ಬೇಕೇ ವಿನಾ ಸಮಭಾವದ ಸಮತಾನೆಲೆಯ ದೇವರು, ದೇವಾಲಯದ ಒಳಗೂ ಬೇಕಿಲ್ಲ!

ತುಳುನಾಡಿನಲ್ಲಿ ವೈದಿಕರು ಬಿಲ್ಲವರನ್ನು ಅನ್ಯರನ್ನಾಗಿ ಬಗೆದುದಕ್ಕೆ ಇನ್ನೊಂದು ಮಗ್ಗುಲೂ ಇದೆ. ಬಿಲ್ಲವರಲ್ಲಿ ಒಂದು ವರ್ಗ 'ಪೂಜಾರಿ' (ದೈವಗಳ ಪೌರೋಹಿತ್ಯ-ಪಾತ್ರಿ) ಮತ್ತು ಬಲ್ಮೆ (ನಿಮಿತ್ತ-ಜ್ಯೋತಿಷ್ಯ) ಎರಡರಲ್ಲೂ ಗತಿ ಪಡೆದಿದ್ದರು. ಇದು ಮಾತ್ರ ಒಂದು ಜನಾಂಗದ ಉದ್ಯಮಶೀಲತೆಯನ್ನೇ ಕೊರೆದು ಬರಡಾಗಿಸುವ ಗೀಳು ಎನ್ನಲು ಅಡ್ಡಿ ಇಲ್ಲ. ಈ ಭಾವವಾದದ ಗೀಳಿನಲ್ಲೇ ಬಿಲ್ಲವರ ಪತನದ ಇತಿಹಾಸ ಮತ್ತು ಊಳಿಗಮಾನ್ಯ ಪರಂಪರೆಯ ಭೂತಾರಾಧನೆಯ ವಿಕಾಸದ (ವಿಕೃತಿಯ!) ಇತಿಹಾಸ ಇದೆ. ಬಿಲ್ಲವರ ಜಮೀನ್ದಾರಿ ಗುತ್ತಿನ ಮನೆಗಳಿಂದ ಹರಿಬಿಟ್ಟ ದುರಂತ ಚರಿತ್ರೆಯೂ ಇದೇ ಆಗಿದೆ. ಇದರಿಂದ ವ್ಯವಸಾಯದ ಮನೆಗಳೆಲ್ಲಾ ಶೋಷಣೆಗೆ ಒಳಗಾಗಿವೆ. ಒಂದು ಸಾಮಾನ್ಯ ಗ್ರಹಿಕೆಯಂತೆ ಕೇವಲ ಜೈನ ಮತೀಯರ ಮತ್ತು ಬಂಟ ಸಮುದಾಯದವರ ಗುತ್ತಿನ ಮನೆಗಳು ಮಾತ್ರ ತುಳುನಾಡಿನಲ್ಲಿದ್ದವು, ಇದೂ ಸರಿಯಲ್ಲ. ನೂರಾರು ಬಿಲ್ಲವರ ಗುತ್ತಿನ ಮನೆಗಳೂ ಇದ್ದವು; ಇಂದಿಗೂ ಇವೆ. ಉಳಿದವರ ಗುತ್ತಿನ ಮನೆಗಳಂತೆ ಇವು ಕೂಡ ಶೋಷಣೆಯ ನೆಲೆಗಳೇ ಆಗಿದ್ದವು. ಬಿಲ್ಲವರಲ್ಲಿದ್ದ 'ಪೂಜಾರಿಗಳು' ಮತ್ತು 'ಬಲ್ಮೆಯವರು' ಎಂಬ ವೃತ್ತಿನಿರತರು ಮಾತ್ರ ಬ್ರಾಹ್ಮಣರಿಗೆ ಎದುರಂಗಡಿ ಆಗಿದ್ದದ್ದು ಮತ್ತು ಅದರಿಂದ ಆಗುತ್ತಿದ್ದ ಆರ್ಥಿಕ ಪೈಪೋಟಿಗಳೇ ಬಿಲ್ಲವರನ್ನು ಅನ್ಯರನ್ನಾಗಿಸುವ ಅನಿವಾರ್ಯತೆ ಬ್ರಾಹ್ಮಣರಿಗೆ ಉಂಟು ಮಾಡಿದ್ದಿರಬೇಕು. ಈ ಜಾತೀಯ ತಿಪ್ಪರಲಾಗವೇ ಬಿಲ್ಲವರ ಉದ್ಯಮಶೀಲತೆಯ ಮೂಲ ವಸ್ತು. ತೆಂಗು ಪವಿತ್ರತೆಯ ಮೆಟ್ಟಲೇರಿದರೆ ಅದರ ವಿಭಿನ್ನ ಉತ್ಪಾದಕತ್ವದ ಉದ್ಯಮ ಶೀಲರು ಮಾತ್ರ ಹಿಂದೂ ಸಮಾಜದಲ್ಲಿ ಅನ್ಯರಾಗುತ್ತಾರೆ !

ಬುಡಕಟ್ಟು ಪರಂಪರೆಯ ಕಾಯಕದ ಮೇಲೆ ಪ್ರಹಾರ ನಡೆದಾಗ ಅತಂತ್ರರಾದ ಬುಡಕಟ್ಟು ಸಮುದಾಯಗಳು ಕ್ರೈಸ್ತ ಮತಕ್ಕೆ ಸೇರಲು ಒತ್ತಾಸೆ ಮತ್ತು ಒತ್ತಡ ಎರಡನ್ನೂ ಪೋರ್ತುಗೀಸರು ಒಡ್ಡಿದರು. ಅದಾಗಲೇ ಭೂಮಾಲಕ ರಾಗಿದ್ದ ಬಂಟರು, ಬಿಲ್ಲವರು, ಬ್ರಾಹ್ಮಣರು, ಸಾರಸ್ವತರು ಹೀಗೆ ಶೋಷಕರ ಒಂದು ಗುಂಪೇ ಅವಕಾಶಗಳ ಬೆನ್ನು ಹತ್ತಿ ಮಿಷನರಿಗಳ ಬಾಗಿಲಿಗೆ ಬಂದು ಕ್ರೈಸ್ತ ಮತಕ್ಕೆ ಮತಾಂತರಗೊಂಡಿರುತ್ತಾರೆ. ಅವರಿಗೆಲ್ಲಾ ಕೂಲಿಗಾಗಿ ಜನರೂ ಬೇಕಿತ್ತಲ್ಲ? ಇದಕ್ಕೆ ಭಿನ್ನವಾದ ನೆಲೆಯಲ್ಲಿ ಅನ್ನಕ್ಕಾಗಿ ಅತಂತ್ರರಾದ ಶ್ರಮಿಕರಿಗೆ ಮತಾಂತರವೆ ಹಿತಕರವೆಂದು ಕಾಣುತ್ತದೆ. ಇದಲ್ಲದೆ ಮಂಗಳೂರಿನಲ್ಲಿ ಈ ತಂತ್ರ ಕ್ರೈಸ್ತ ಬಂಡಾಯದ ಪ್ರೊಟೆಸ್ಟೆಂಟ್ ಪಂಥದ ಹರಡುವಿಕೆಯನ್ನು ತಡೆಯುವ ಕ್ಯಾತೋಲಿಕ್ ಪಂಗಡದ ತಂತ್ರವಾಗಿಯೂ ಉಪಯೋಗಿಸಲ್ಪಡುತ್ತದೆ. ಹೀಗಿದ್ದೂ ತುಳುನಾಡಿನಲ್ಲಿ ಪ್ರೊಟೆಸ್ಟೆಂಟ್ ಪಂಗಡಕ್ಕೆ ಸೇರಿದವರು ತುಳುವರೇ ಆಗಿ ತಮ್ಮ ಕುಲಮೂಲದ 'ಬರಿ' ಯಾ 'ಬಲಿ' ಎಂಬ ಕುಲನಾಮವನ್ನು ಇಂದಿಗೂ ಉಳಿಸಿಕೊಂಡಿರುವುದನ್ನು ಸ್ಥೂಲವಾಗಿಯಾದರೂ ಕಾಣಬಹುದು. ಇದರಿಂದ ಬಹುತ್ವಗಳ ತಲೆ ಮೆಟ್ಟುವ ಮತೀಯ ಏಕಶಿಲಾಕೃತಿಯ ಚಿಂತನೆಗಳು ಬಡವರ ಬಾಳಿನೊಂದಿಗೆ ಹೇಗೆ ಚಕ್ಕಂದ ವಾಡುತ್ತಿವೆ ಮತ್ತು ಅವು ನಿಸರ್ಗದ ಒಡನಾಟದಲ್ಲಿ ಬೆಳೆದುಬಂದ ಮೂಲನಿವಾಸಿಗಳ ಆರ್ಥಿಕ ಶಕ್ತಿಯನ್ನು ಯಾವ ರೀತಿಯಲ್ಲಿ ಮುರಿದಿದೆ ಎನ್ನುವ ಹುನ್ನಾರುಗಳೂ ಸಮದರ್ಶಿಗಳಿಗೆ ಗೋಚರಿಸದೆ ಇರದು.

ತುಳುನೆಲದ ಮೂಲನಿವಾಸಿಗಳಲ್ಲಿ ವೈದಿಕ, ಬೌದ್ಧ, ಜೈನ, ಮುಸ್ಲಿಂ, ಕ್ರೈಸ್ತ ಮೊದಲಾದ ಮತಗಳತ್ತ ಅಧಿಕಾರಕ್ಕಾಗಿ ಮತಾಂತರಗೊಂಡವರೆಷ್ಟು? ಅನ್ನಕ್ಕಾಗಿ ಮತಾಂತರ ಗೊಂಡವರೆಷ್ಟು? ಏಣಿಶ್ರೇಣಿಯ ಶೋಷಣೆಯ ಅಮಾನವೀಯತೆಗೆ ಸಿಡಿದು ಮತಾಂತರಗೊಂಡವರೆಷ್ಟು? ಹೀಗೆ ಒಂದಲ್ಲ ಒಂದು ಕಾರಣದಿಂದ ಮತಾಂತರ ಗೊಂಡವರು ನಿಜವಾಗಿಯೂ ತಮ್ಮ ಪೂರ್ವಕಾಲೀನ ಶೋಷಣೆಯಿಂದ ಬಿಡುಗಡೆ ಪಡೆದವರೆಷ್ಟು? ಸಮಾನತೆ, ಸ್ವಾತಂತ್ರ್ಯ, ಸ್ವಾಭಿಮಾನದಿಂದ ಈಗ ಕತ್ತೆತ್ತಿ ಬಾಳುತ್ತಿರು ವವರೆಷ್ಟು? ಸಹಬಾಳ್ವೆ ಮತ್ತು ಸಹಚಿಂತನೆಗಳನ್ನು ಗೌರವಿಸುವವರೆಷ್ಟು? ಇದರ ನಿಜದ ನೆಲೆಗಳನ್ನು ಗ್ರಹಿಸುತ್ತಲೇ ಕರಾವಳಿ ಕರ್ನಾಟಕದ ಬಹುತ್ವ ಮತ್ತು ಏಕರೂಪೀಕರಣದ ಅಪಾಯಗಳಿಂದ ಬಿಡುಗಡೆ ಪಡೆಯುವ ದಾರಿಯನ್ನು ಕಂಡುಕೊಳ್ಳಬೇಕಾಗಿದೆ.

ಇಲ್ಲವಾದಲ್ಲಿ ಎಲ್ಲೆಡೆ ನೆಲಮೂಲದ ಬಹುತ್ವ ಮತ್ತು ದುಡಿದುಣ್ಣುವವರ ಶೋಷಣೆಗಳು ಏಣಿಶ್ರೇಣಿಯ ಸಿದ್ಧಾಂತ ದಲ್ಲಿ ನಿರಂತರವಾಗುತ್ತದೆ. ಇದರಲ್ಲಿ ಮೇಲಿನವರು ಕೆಳಗಿನವರನ್ನು, ಕೆಳಗಿನವರು ಅವರಿಗಿಂತ ಕೆಳಗಿನವರನ್ನು ತುಳಿಯುವುದು ತಮ್ಮ ಹಕ್ಕೆಂದೇ ಭಾವಿಸುತ್ತಾರೆ. ಇದಕ್ಕೊಂದು ಉದಾಹರಣೆ ನೋಡಿ. ತುಳುನಾಡಿನಲ್ಲಿ ಬಿಲ್ಲವರ ಅನಂತರದಲ್ಲಿ ಒಂದು ಮಹತ್ವದ ಘಟಕ ಕೊರಗ ಜನಾಂಗದ್ದು. ಸರಕಾರಿ ದಾಖಲೆಯಲ್ಲಿ ಇವರು ಹೊಲೆಯರು. ಇವರ ಜನಸಂಖ್ಯೆ ೧೪.೭೩% ಎಂದು ೧೯೮೧ರ ಜನಗಣತಿಯಲ್ಲೇ ದಾಖಲಾಗಿದೆ. ಆದರೆ ಇವರದ್ದು ತೀರಾ ನಿಕೃಷ್ಟ ಬದುಕು. ಈ ನೆಲದ ಪ್ರಾಚೀನರು ಮಾತ್ರವಲ್ಲ ಸಹಜ ನೆಲೆದೊಡೆಯರೂ ಆಗಿದ್ದ ಇವರಿಂದು ಎಲ್ಲ ಸಮುದಾಯದವರಿಂದಲೂ ಶೋಷಣೆಗೆ ಒಳಗಾದವರು. ತುಳುವರ ಪ್ರಾಚೀನತಮ ಬಹುರೂಪಿ ನೆಲೆಗೆ ಮಹತ್ವ ಯೋಗದಾನ ನೀಡಿಯೂ ದುರಂತಕ್ಕೆ ಸಂದವರಿವರು, ಅಸ್ಪೃಶ್ಯತೆಯ ಬೇಗೆಯಲ್ಲಿ ಬೇಯುತ್ತಲೇ ಬದುಕುತ್ತಿರುವ ಶ್ರಮಿಕರು. ಇಂದಿಗೂ ಪುರಾತನ ಭಯೋತ್ಪಾದಕ ಕೊಡಲಿರಾಮನಿಂದ ಹಿಡಿದು ವಿಧ ವಿಧವಾದ ಮತಾಚಾರ್ಯರವರೆಗೆ ಸಾಗುತ್ತಲೇ ಬಂದ ಈ ಬಗೆಯ ಗತಿವಿಧಿಗಳಿಗೆ ಕೊರಗ ತನಿಯ ಎಂಬ ಪ್ರಾಚೀನ ಬಂಡಾಯಗಾರನೊಬ್ಬ ಬಹು ಹಿಂದೆಯೇ ಎತ್ತಿದ ಸ್ವಾಭಿಮಾನದ ನೈತಿಕ ಪ್ರಶ್ನೆಯೊಂದು ನಮ್ಮನ್ನು ಇಂದಿಗೂ ಆಲೋಚನೆಗೆ ಹಚ್ಚುತ್ತದೆ.

''ನಾನು ಹೊತ್ತು ತಂದ ಹರಕೆ ದೇವರಿಗೆ ಆಗಬಹು

## ಹೆಜ್ಜೆ ಹಾಕೋಣ ಬನ್ನಿ

ದುಂಡನೆಯ ಈ ಭೂಗೋಳ -
ಶ್ರಮಿಕನ ಬೆವರ ಹನಿಯಂತಿದೆ
ಬೆವರ ಹನಿಯಲಿ ಅರಳಿದ
ಕಾಮನಬಿಲ್ಲಿನಲ್ಲಿ ಜೀವನ ಜೋಕಾಲಿ ಜೀಕುತ
ನಾಡಭವಿಷ್ಯಕೆ ಹೊಸ ಭಾಷ್ಯ ಬರೆಯುತ್ತಿದೆ
ಅದರ ಹೃದಯಬಡಿತ ನವಯುಗದ
ಹಾಡಿಗೆ ತಾಳ ಹಾಕುತ್ತಿದೆ
ಹಾಡಿನ ಲಯಕೆ ಅನುಗುಣವಾಗಿ
ಹೆಜ್ಜೆ ಹಾಕೋಣ ಬನ್ನಿ

**ಜಂಬಣ್ಣ ಅಮರಚಿಂತ**
ಸಂಖ್ಯೆ ೮-೧೧(೮)೭೯೬, ವಿದ್ಯಾನಗರ,
ರಾಯಚೂರು - ೫೮೪೧೦೩

ದಾದರೆ, ನಾನ್ಯಾಕೆ ದೇವರಿಗೆ ನಿಷಿದ್ಧ?'' – ಹೀಗೆ ಕದ್ರಿ ದೇವಾಲಯದಲ್ಲಿ ಪ್ರಶ್ನಿಸಿದ್ದೇ ಅಪರಾಧವಾಯಿತೋ ಏನೊ! ಹೀಗೆ ಪ್ರಶ್ನಿಸುತ್ತಲೇ ಈತ ಸಂಪ್ರದಾಯಸ್ಥರ ಆಕ್ಷೇಪವನ್ನು ಧಿಕ್ಕರಿಸಿ ದೇವಾಲಯದ ವಠಾರದಲ್ಲಿದ್ದ ಮಾದಳದ ಮರ ಹತ್ತಿ ಹಣ್ಣು ಕೀಳುತ್ತಾನೆ. ತಕ್ಷಣ ಕೊರಗ ತನಿಯ ಮಾಯ ವಾಗುತ್ತಾನೆ! ಅದು ಹೇಗೆ? ಯಾರೀ ಕೊರಗ ತನಿಯ?

ಹೌದು, ಕೊರಗ ತನಿಯ ಹಾಲು ಕುಡಿಯುವ ಕಾಲಕ್ಕೆ ತಾಯಿ ಕೊರಪೊಲು, ಅನ್ನ ತಿನ್ನುವ ಕಾಲಕ್ಕೆ ತಂದೆ ಮಯರಂದ, ಹೀಗೆ ಇಬ್ಬರನ್ನೂ ಕಳಕೊಂಡು ತಬ್ಬಲಿ ಯಾಗುತ್ತಾನೆ. ಆದರೆ ಆಗಲೇ, ''ಏಳು ಕೊಪ್ಪದ ಕೊರಗರು ಅಳಿದುಹೋದರು'', ಎಂಬ ಜನಧ್ವನಿ ಮಾತ್ರ ದಿಗಿಲು ಹುಟ್ಟಿಸುವಂತಹದ್ದು. ಪ್ರಾಚೀನ ಮಾನವ ವಸತಿಯ ನೆಲೆಯಾದ ಕದ್ರಿಯ ಗುಡ್ಡದಲ್ಲಿದ್ದ ಕೊರಗರೆಲ್ಲಾ ಹೇಗೆ ಮತ್ತು ಯಾಕೆ ಅಳಿದುಹೋದರು? ಯಾವ ಬಲವತ್ತರವಾದ ಕಾರಣದಿಂದ ಕೊರಗ ತನಿಯ ತನ್ನವರ ಸಾಂಸ್ಕೃತಿಕ ಚಿನ್ಹೆಯಾದ ಡೋಲನ್ನು ಮರದಲ್ಲಿ ನೇತಾಡಿಸಿ, ತನ್ನ ಕೊಪ್ಪವಿದ್ದ ಸ್ಥಳಕ್ಕೆ ಮುಳ್ಳು ಹೊದಿಸಿ ಬತ್ತಲೆಯಾಗಿ ಕದ್ರಿಯಿಂದ ಓಡಬೇಕಾಯಿತು? ಇದು ಅಂದಿನ ಮತೀಯ ದಂಗೆಯ ದಾಖಲೆ ಯಾಕಲ್ಲ?

ಅಂದು ಕೊರಗ ತನಿಯನನ್ನು ಬತ್ತಲಾಗಿಸಿದ, ಕದ್ರಿಯಿಂದ ಹೊರದಬ್ಬಿದ, ಭಯೋತ್ಪಾದಕ ಮನಸ್ಸುಗಳೇ ೧೩.೦೩.೨೦೦೫ರಂದು ಆದಿ ಉಡುಪಿಯ ಹೆಲಿಪ್ಯಾಡಿನಲ್ಲಿ ತಂದೆ ಹಾಜಬ್ಬ ಮತ್ತು ಆತನ ಮಗ ಹಸನಬ್ಬ ಇಬ್ಬರಿಗೂ ದನದ ಕಳ್ಳಸಾಗಣೆಯ ಅಪವಾದ ಮೆತ್ತಿದ್ದು. ಅದಕ್ಕಾಗಿ ಹಿಂದೂ ಯುವಸೇನೆಯ ೫೦-೬೦ ತರುಣರು ಸೇರಿ ತಂದೆ-ಮಗ ಇಬ್ಬರನ್ನೂ ಸಂಪೂರ್ಣ ಬೆತ್ತಲೆಗೊಳಿಸಿ, ಅವಾಚ್ಯ ಶಬ್ದಗಳಿಂದ ಬೈಯುತ್ತಾ ನಡೆಸಿದ ಮಾರಣಾಂತಿಕ ಹಲ್ಲೆ ಒಂದೆಡೆಯಾದರೆ, ಇನ್ನೊಂದೆಡೆ ಇದಕ್ಕೆ ಸಾಕ್ಷಿಯಾಗಿ ಇದರ ಚೆಂದ ನೋಡಿದ ೫೦೦ಕ್ಕೂ ಹೆಚ್ಚು ಜನರ ಅಮಾನವೀಯತೆಯ ಅತಾರ್ಕಿಕತೆ ಕರಾವಳಿ ಕರ್ನಾಟಕದ ಬಹುತ್ವ ಮತ್ತು ಏಕರೂಪೀಕರಣದ ಅಪಾಯಗಳು ಜಗಜ್ಜಾಹೀರಾಗುತ್ತಿವೆಯಲ್ಲಾ! ಇಂತಹ ಅಪಾಯಗಳ ಸಾಮಾಜಿಕ, ರಾಜಕೀಯ, ಆರ್ಥಿಕ, ಸಾಂಸ್ಕೃತಿಕ ಬಹುರೂಪಿ ಷಡ್ಯಂತ್ರಗಳ ನೆಲೆಯನ್ನು ಅರಿಯಬೇಕಾದರೆ ಅದರ ಬೇರುಗಳನ್ನೇ ಕೆದಕಬೇಕಾಗುತ್ತದೆ.

ಅಂದಿನ ಭಯೋತ್ಪಾದನೆಯ ಉರಿಯಲ್ಲಿ ಬತ್ತಲಾಗಿಯೇ ಕದ್ರಿಯಿಂದ ಅಟ್ಟಲ್ಪಟ್ಟಾಗ ಕೊರಗ ತನಿಯನಿಗೆ ಆಶ್ರಯ ನೀಡಿದವಳೇ ಮೈರಕ್ಕೆ ಬೈದೆದಿ. ಇವರಿಬ್ಬರೂ ಒಂದೇ 'ಬಂಗೇರ' ಬಲಿಯವರು. ಈ 'ಬಲಿ' ಎನ್ನುವುದು ತುಳುವರ ಕುಲಮೂಲದ ಪ್ರಾಚೀನ ಗುರುತು. ಹಾಗಿದ್ದೂ ಏಣಿಶ್ರೇಣಿಯ ವ್ಯವಸ್ಥೆಯಲ್ಲಿ ಕೆಳಗಿನವನಾದ ಕೊರಗ ತನಿಯ ಮೈರಕ್ಕೆಗೆ ಒಳಗಿನ ಮಗನಾಗಲಾರ; ಎಷ್ಟೆಂದರೂ ಅನ್ಯನೇ! ಒಂದು ದಿನ ಕದ್ರಿ ದೇವಾಲಯಕ್ಕೆ ಹರಕೆಯ ಹಸಿರು ಹೊರೆಯ ಕಾಣಿಕೆ ಮುಟ್ಟಿಸಲಿಕ್ಕೆ ಮೈರಕ್ಕೆ ತನ್ನ ಒಕ್ಕಲಿನವರಾದ ಬೈಲಿನ ಬಾಕುಡರನ್ನು, ಓಣಿಯ ಮುಗೇರರನ್ನು, ಗದ್ದೆಯ ಮುಂಡಾಲರನ್ನು ಕರೆದಾಗ ಅವರು ನಿರಾಕರಿಸುತ್ತಾರೆ. ಇವರೆಲ್ಲಾ ಶ್ರೇಣೀಕರಣದ ಸಿದ್ಧಾಂತದಲ್ಲಿ ಕೊರಗ ತನಿಯನಿಗಿಂತ ಮೇಲ್ಜಾತಿಯವರು. ಅವರೆಲ್ಲರೂ ಈಗ ಕೊಡಲಿರಾಮನ ಭಯೋತ್ಪಾದಕ ನೆಲೆಯಾಗಿರುವ ಕದ್ರಿಗೆ ಹೋಗಲು ನಯ ನಾಜೂಕಿನಲ್ಲೇ ನಿರಾಕರಿಸುತ್ತಾರೆ. ಆಗ ಮೈರಕ್ಕೆ ಕೊರಗ ತನಿಯನಿಗೆ ಹೊರೆಯ ಕಾಣಿಕೆ ಕೊಂಡು ಹೋಗಲು ತಿಳಿಸುತ್ತಾಳೆ. ಈ ಪರಿಸ್ಥಿತಿಯಲ್ಲಿ ಕೊರಗ ತನಿಯ, ''ಈಗ ನನ್ನ ಮೋರೆ, ಹೊಟ್ಟೆ ಮತ್ತು ಬೆನ್ನು ನೋಡಿ, ಆದರೆ ಬರುವಾಗ ಇದನ್ನು ನೋಡಲಾಗದು'', ಎಂಬ ಒಗಟಿನ ಮಾತು ಹೇಳುತ್ತಾನೆ! ಒಮ್ಮೆಲೆ ಅವನ ಮನಸ್ಸಿನಲ್ಲಿ ತಮ್ಮವರ ಮೂಲಸ್ಥಾನ ಕದ್ರಿಯಲ್ಲಿನ ಬಾಲ್ಯದ ನೆನಪುಗಳ ಮೆರವಣಿಗೆ ನಡೆಯುತ್ತದೆ. ತಮ್ಮ ಕುಲನಾಶದ ಹತ್ಯಾಕಾಂಡದ ಚಿತ್ರಣ ಕಣ್ಣಿಗೆ ಕಟ್ಟುತ್ತದೆ. ''ಅನ್ಯಾಯಕ್ಕೆ ಪ್ರತಿಭಟನೆಯೊಂದೇ ಮದ್ದು'', ಎಂಬ ಬಂಡಾಯದ ಕಿಡಿ ಜಾಗೃತವಾಗುತ್ತದೆ. ''ನಾನು ಹೊತ್ತು ತಂದ ಹರಕೆ ದೇವರಿಗೆ ಆಗಬಹುದಾದರೆ, ನಾನ್ಯಾಕೆ ದೇವರಿಗೆ ನಿಷಿದ್ಧ?'' ಎಂದು ತನ್ನನ್ನು ತಾನೇ ಪ್ರಶ್ನಿಸುತ್ತಲೇ ಸಂಪ್ರದಾಯಸ್ಥರ ಆಕ್ಷೇಪಗಳನ್ನು ಧಿಕ್ಕರಿಸಿ ದೇವಾಲಯದ ವಠಾರದಲ್ಲಿದ್ದ ಮಾದಳದ ಮರ ಹತ್ತಿ ಹಣ್ಣು ಕೀಳುತ್ತಾನೆ. ಅಂದಿನ ಜಾತಿಕಟ್ಟನ್ನು ಮುರಿದು ನೀತಿಗೆಟ್ಟ ಇವನ ವರ್ತನೆಯನ್ನು ಕಂಡು ರೊಚ್ಚಿಗೆದ್ದ ಮೇಲ್ವರ್ಗದ ಮಂದಿ ಮುಗಿಬಿದ್ದು ಕೊರಗ ತನಿಯನ ಕೊಲೆ ಮಾಡುತ್ತಾರೆ! ಆದರೆ ತಮ್ಮ ಅಪರಾಧವನ್ನು ಮುಚ್ಚಲು ಅವರು ಕೊರಗ ತನಿಯ ಮಾಯವಾದ ಕಥೆ ಬೆಳೆಸಿದರೂ ಇಂದಿಗೂ ಜನಪದದ ದುಡಿಯುವ ವರ್ಗ ಇದನ್ನು ಮರೆತಿಲ್ಲ! ಅದಕ್ಕಾಗಿಯೇ, ಇದು ಒಂದಲ್ಲ ಒಂದು ದಿನ ಸ್ಫೋಟಕ ಶಕ್ತಿಯಾಗಿ ಸಿಡಿಯಬಹುದೆಂಬ ಅಳುಕು ಮೇಲ್ವರ್ಗದವರಲ್ಲಿ ಮನೆಮಾಡಿದೆ. ಅದಕ್ಕಾಗಿಯೇ ಜಾತಿ, ವರ್ಗ, ಮತ, ಪಂಗಡ ಎಂಬ ಏಣಿಶ್ರೇಣಿಯ ವಿಘಟನೆಯ ಕೊಂಡಿಗಳನ್ನು ಭಾವವಾದದಿಂದ ಮೇಲ್ವರ್ಗದ ಮಂದಿ ದಿನನಿತ್ಯ ಬಲಪಡಿಸುತ್ತಿದ್ದಾರೆ.

ಈಗ ಮಾತ್ರ ಕೊರಗ ತನಿಯ ತುಳು ಜನಪದೀಯ ನೆಲೆಯಲ್ಲಿ ''ಕೊರಗಜ್ಜ'' ಆಗಿದ್ದಾನೆ. ಮಾತ್ರವಲ್ಲ, ಮರೆತು ಹೋದದ್ದನ್ನು ನೆನಪಿಸುವ ಚಾರಿತ್ರಿಕ ಶಕ್ತಿಯಾಗಿದ್ದಾನೆ. ಆದರೆ ಅದು ಕೇವಲ ಕಳವಾದದ್ದನ್ನು ಪಡೆಯಲು ಕೊರಗಜ್ಜನಿಗೆ 'ಬೀಡ' ಸಲ್ಲಿಸುವ ಹರಕೆಯಾಗದೆ, ತುಳುವರ ಶ್ರಮ ಮತ್ತು ಸ್ವಾಭಿಮಾನದ ಮರೆವನ್ನು ನೆನಪಾಗಿಸುವ ಜಾಗೃತಿಯಾಗಬೇಕು. ಆದರೆ ಅದನ್ನು ದೆಸೆಗೆಡಿಸಲು ಆರಾಧನಾ ರಂಗದಲ್ಲಿ ಕೊರಗಜ್ಜನ ಕೋಲದಲ್ಲಿ ಯಾವುದೇ ಬೆಳಕಿನ ಉಪಯೋಗ ಕೂಡದು, ಇದನ್ನು ಸ್ತ್ರೀಯರು ನೋಡಬಾರದು, ಭೂತದ ವೇಷ ಬರೆಯುವಾಗ ಕೇವಲ ಬಿಳಿ ಬಣ್ಣ ಮಾತ್ರ ಬಳಕೆಯಾಗಬೇಕು ಎಂಬ ಕಟ್ಟಳೆ ಬೇರೆ ಸೇರಿಕೊಂಡಿದೆ. ಇವೆಲ್ಲ ದುಡಿಯುವ ವರ್ಗದ ಬಹುರೂಪಿ ಬಹುತ್ವವನ್ನು ಬಣ್ಣಗೆಡಿಸುವ ತಂತ್ರಗಳೆಂಬ ಜಾಗೃತಿ ಬಹುಸಮುದಾಯಗಳಿಗೆ ಇಂದು ಅಗತ್ಯ.

ಇಲ್ಲವಾದಲ್ಲಿ ಕುಡ್ಲ = ಮಂಗಳೂರು, ಒಡಿಪು = ಉಡುಪಿ, ಕುಕ್ಕೆ = ಸುಬ್ರಹ್ಮಣ್ಯ, ಕುಡುಮ = ಧರ್ಮಸ್ಥಳ, ಕುಡಾರ್ = ಮಲ್ಪೆ, ದೇಸಿಲ = ಶಿಶಿಲ ಆಗುತ್ತಲೇ ಇರುತ್ತದೆ. ''ಹೇಗಿದ್ದ ಕದ್ರಿ ಹೇಗಾಗಿದೆ,'' ಎನ್ನುವ ಕೊರಗ ತನಿಯನ ದಿಗಿಲಿನ ಸಹಜ ಒಳನೋಟ ನಮಗೆ ಸಿಗಲಾರದು; ಸಿಕ್ಕಿದರೂ ದಕ್ಕಲಾರದು. ತುಳುವಿನಲ್ಲಿ 'ಕದ್ರ್' ಅಂದರೆ ಸೂರ್ಯಕಿರಣ; 'ಕದ್ರ್ ಪೋಡಿಗೆ ದೆಪ್ಪುನ' ಅಂದರೆ ಮೊದಲ ಹೆದರಿಕೆ ತೆಗೆಯುವುದು. ಬಾಣಂತಿ ನಲ್ವತ್ತನೆಯ ದಿನಕ್ಕೆ ಅಂಗಳ ಇಳಿದು ಬಾವಿ



ಮುಟ್ಟಿ ಮುಂದಿನ ವ್ಯವಸಾಯಕ್ಕೆ ತೊಡಗುವುದು ಸ್ಥಳೀಯ ಪದ್ಧತಿ. ಅದೇ ದಿನ ನವಜಾತ ಶಿಶುವನ್ನು ತಮ್ಮ ಕುಲಮೂಲದ ಮೂಲಸ್ಥಾನಕ್ಕೆ ಕರೆದುಕೊಂಡುಹೋಗಿ ಉದಿಸುವ ಸೂರ್ಯನನ್ನು ತೋರಿಸುವುದು ಒಂದು ಪದ್ಧತಿ. ಇದಕ್ಕೆ 'ಕದ್ರ್ ಪೋಡಿಗೆ ದೆಪ್ಪುನಿ' ಅನ್ನುತ್ತಾರೆ. ತುಳುವರಿಗೆ ಸೂರ್ಯ, ಬೆಳಕು ಮತ್ತು ಎಚ್ಚರಿಕೆಯ ಸಂಕೇತ. ಅದಕ್ಕೆಂದೇ ಇಲ್ಲಿ ನವಜಾತ ಶಿಶುವಿನ ಭಯ ನಿವಾರಣೆಯ ಆಚರಣೆಗೆ ಪ್ರಾಶಸ್ತ್ಯ ದೊರೆಯುತ್ತದೆ. ಹಿಂದೊಮ್ಮೆ ಕೊರಗ ತನಿಯನ ತಾಯಿ ಕೊರಪಳು ಕೂಡ ಆತನಿಗೆ ಸೂರ್ಯದೇವರನ್ನು ಮೊದಲ ಬಾರಿ ತೋರಿಸಿ ಭಯ ನಿವಾರಣೆ ಮಾಡಿದ ತಾಣವೇ ಇದು; ಅದೇ ಆತ ಬಂಡಾಯವೆದ್ದ ತಾಣವೂ ಹೌದು; ಆತನ ಕೊಲೆಯೊಂದಿಗೆ ಆತನ ಧ್ವನಿ ಮೌನವಾದ ಡೋಲಿನ ನೆಲೆಯೂ ಹೌದು!

ಅಂದಿಗೂ ಇಂದಿಗೂ ಸೂರ್ಯೋದಯ ಮತ್ತು ಸೂರ್ಯಾಸ್ತಗಳ ವಿಹಂಗಮ ನೋಟಕ್ಕೆ ಕದ್ರಿ ಗುಡ್ಡ ರಮಣೀಯ ತಾಣ. ಆದರೆ ಇಂದು ಅದೇ ಕದ್ರಿ ಶ್ರೀಮಂತರ ವಸತಿಯ ನೆಲೆ. ಹಿಂದೊಮ್ಮೆ ಮಾವು, ಬಾಳೆ, ವಟ, ಅಶ್ವತ್ಥ, ಆಲ, ಬಿಲ್ವ ವೃಕ್ಷಗಳಿಂದ ಗುಡ್ಡಕ್ಕೆ ಕದ್ರಿ ಎಂಬ ಹೆಸರು ಬಂದದ್ದು ತುಳುವರ ಬೆಳಕು ಮತ್ತು ಎಚ್ಚರಿಕೆಯ ಸಂಕೇತವಾದ ಭಯ ನಿವಾರಣೆಯ ಸೂರ್ಯಕಿರಣದಿಂದಿರಬೇಕು. ಆದರೆ ತುಳು ನೆಲದಲ್ಲಿ ತುಳುಭಾಷೆಯನ್ನು ಬದಿಗೊತ್ತಿ ಸಂಸ್ಕೃತದ ಪರಿನೆಲಲ್ಲಿ ಸ್ಥಳನಾಮಕ್ಕೆ ಅರ್ಥ ಹುಡುಕಹೊರಟರೆ ಆಗುವ ಅನರ್ಥವೇ 'ಕದಳೀಕಾನನದಿಂದ ಕದ್ರಿ ಆಯಿತು' ಎನ್ನುವುದು. ಇದು ಒಂದು ಬೀಸು ಹೇಳಿಕೆ ಮಾತ್ರ. ಈಗ ಇಂತಹ ಬೀಸು ಹೇಳಿಕೆಗಳೇ ನಮ್ಮ ಕಲಿಕೆಯ ಪಠ್ಯ ಕೂಡ ಆಗುತ್ತಲಿವೆ. ಇಂಥವುಗಳೆಲ್ಲಾ ಕರಾವಳಿ ಕರ್ನಾಟಕದ ಬಹುತ್ವ ಮತ್ತು ಏಕರೂಪೀಕರಣದ ಅಪಾಯಗಳು ಎಂಬ ಎಚ್ಚರ ಮುಂದಿನ ಶೋಧ ಪ್ರತಿಶೋಧಗಳಿಗೆ ದಕ್ಕಿದರೆ ಒಳ್ಳೆಯದು.

**ರವಿ ರಾ. ಅಂಚನ್**
ಬಿ-೮೦೮, ಟ್ವಿನ್ ಟವರ್ಸ್, ಮನೀಶ್ ಪಾರ್ಕ್, ಪಂಪ್ ಹೌಸ್,
ಅಂಧೇರಿ (ಈಸ್ಟ್), ಮುಂಬಯಿ ೪೦೦೦೯೩

# ಎಲ್ಲಾ ಮಾಡಿದ್ದು ವಿದ್ಯೆಗಾಗಿ!

ವಿಜಯಾ ಶ್ರೀಧರ್

**ಮಾ**ರ್ಚ್ ಅಂದರೆ ಪರೀಕ್ಷಾ ಕಾಲ! ಮೊಮ್ಮಕ್ಕಳಿಗೆ ಪರೀಕ್ಷೆಗೆ ತಯಾರಾಗಲು ಸಹಾಯ ಮಾಡುವ ಮಕ್ಕಳನ್ನು ಕಂಡಾಗ, ಈ ಮಕ್ಕಳಿಗೆ ಪರೀಕ್ಷೆ ಹೊತ್ತಿಗೆ ನಾನು ಮಾಡುತ್ತಿದ್ದ ಮಾರ್ಗದರ್ಶನ ನೆನಪಾಗುತ್ತದೆ. ಅಲ್ಲಿಂದ ಮನಸ್ಸು ನಾನು ಶಾಲೆಗೆ ಹೋಗುವಾಗಿನ ಪರೀಕ್ಷೆಯ ದಿನಗಳೆಲ್ಲ ನೆನಪಾಗಿ ಬಿಡುತ್ತವೆ. ಪರೀಕ್ಷೆಗಳಿವೆ, ಎದುರಿಸುವ ಮಕ್ಕಳಿದ್ದಾರೆ, ಆದರೆ ಆಗಿನ ಮತ್ತು ಈಗಿನ ಪರಿಸ್ಥಿತಿ ಮಾತ್ರ ಬದಲಾಗಿದೆ ಅಷ್ಟೆ!

ತಿಂಗಳಿಗೆ ೧೦೦ರಿಂದ ೧೫೦ ರೂ. ಸಂಬಳ ಬರುತ್ತಿದ್ದ ಅಪ್ಪನ ಸರಕಾರಿ ನೌಕರಿಯಲ್ಲಿ ನಾಲ್ಕು ಮಕ್ಕಳ ವಿದ್ಯಾಭ್ಯಾಸ ಸುಲಭವಾಗಿರಲಿಲ್ಲ. ನಮ್ಮ ಪರೀಕ್ಷಾ ಕಾಲವೆಂದರೆ ಅದು ಅಪ್ಪ-ಅಮ್ಮನ ದೊಡ್ಡ ಪರೀಕ್ಷಾ ಕಾಲವೇ ಸರಿ. ನಾಲ್ಕು ಮಕ್ಕಳೂ ಪಾಸಾಗಿ ಮುಂದಿನ ತರಗತಿಗೆ ಹೋದಾಗ ಅಮ್ಮನಿಗೆ ಒಂದು ವರ್ಷ ಸಾರ್ಥಕವಾದ ಅನುಭವ. ಆದರೆ ಆಶ್ಚರ್ಯ ವೆಂದರೆ, ನಮಗ್ಯಾರಿಗೂ ಪರೀಕ್ಷೆ ಪಾಸಾಗುವುದರಲ್ಲಿ ಯಾವುದೇ ಸಂಶಯ ಇರಲಿಲ್ಲ. ಎಲ್ಲರಿಗಿಂತ ಜಾಸ್ತಿ ಅಂಕ ಗಳಿಸಿ ರ್‍ಯಾಂಕು ಬರಬೇಕೆಂಬುದೇ ನಮ್ಮ ಹಂಬಲವಾಗಿತ್ತು. ಆದರೆ ಅದು ''ನಾವು ಎಲ್ಲರಿಗಿಂತ ತುಂಬ ಬುದ್ಧಿವಂತರೆಂದು ಅನಿಸಿಕೊಳ್ಳಬೇಕೆಂಬ'' ಆಸೆಯಿಂದ ಅಲ್ಲ, ರ್‍ಯಾಂಕ್ ಬಂದರೆ ಸಿಗುವ ಸಣ್ಣ-ಪುಟ್ಟ ಬಹುಮಾನ, ಶಾಲೆಗೆ ತುಂಬಬೇಕಾದ ಫೀನಲ್ಲಿ ಸಿಗಬಹುದಾದ ರಿಯಾಯಿತಿಗಾಗಿ ಮಾತ್ರವಾಗಿತ್ತು.

ಮಲೆನಾಡಿನ ಶಿರ್ಶಿಯಲ್ಲಿ ನಮ್ಮ ವಿದ್ಯಾಭ್ಯಾಸದ ಹೆಚ್ಚಿನ ವರ್ಷಗಳು ಕಳೆದಿವೆ. ನಾವು ಸಣ್ಣವರಿದ್ದಾಗ, ಅಂದರೆ ಪ್ರಾಥಮಿಕ ಶಾಲೆಯಲ್ಲಿ ಓದುವಾಗ ಶಾಲೆ ಅಷ್ಟು ದೂರವಿರಲಿಲ್ಲ. ಮಕ್ಕಳಿಗೆ ಶಾಲೆ ಹತ್ತಿರ ಇರಬೇಕು ಎಂದು ಅಜ್ಜ ಯಾವಾಗಲೂ ಬುದ್ಧಿ ಹೇಳುತ್ತಿದ್ದರಂತೆ. ಹಾಗಾಗಿ ನಾನು, ನನ್ನ ತಮ್ಮ ೧, ೨ನೇ ತರಗತಿ ಓದಿದ ಶಾಲೆ ಮನೆಗೆ ಹತ್ತಿರವಿತ್ತು. ನಾನು ಶಾಲೆಗೆ ಸೇರಿದ್ದೇ ಒಂದು ವಿಚಿತ್ರ ಸಂಗತಿ. ಅಪ್ಪ-ಅಮ್ಮ, ಹಳ್ಳಿಯಲ್ಲಿದ್ದ ಅಜ್ಜ-ಅಜ್ಜಿ ಎಲ್ಲರೂ ವಿದ್ಯಾ ಪಕ್ಷಪಾತಿಗಳೇ! ಆದರೆ ಅಪ್ಪ-ಅಮ್ಮ ಮೊದಲ ಇಬ್ಬರು ಮಕ್ಕಳು ಹುಟ್ಟಿದಾಗ ತಮಗಿದ್ದ ಉತ್ಸಾಹವನ್ನು ನಾನು ಹುಟ್ಟುವಾಗ ಕಳೆದುಕೊಂಡಿದ್ದರು. ಆರ್ಥಿಕ ಸಂಕಷ್ಟ ಅವರನ್ನು ಸಾಕಷ್ಟು ಹಣ್ಣು ಮಾಡಿತ್ತು. ೨½ ವರ್ಷಗಳ ಅಂತರದ ನಾಲ್ಕು ಮಕ್ಕಳನ್ನು ಸಾಕುವ ತೊಂದರೆ ಅಷ್ಟಿಷ್ಟಲ್ಲ, ನಿಜ! ಊಟಕ್ಕೆ ತೊಂದರೆ ಇರಲಿಲ್ಲ. ಆದರೆ ವಿದ್ಯಾಭ್ಯಾಸದ ಹುಚ್ಚು ಹತ್ತಿದ್ದರಿಂದ ಎಲ್ಲ ಕಷ್ಟಗಳೂ ಸಂಭವಿಸುತ್ತಿದ್ದವು. ಮತ್ತೆ ವಿಶೇಷ ವೆಂದರೆ ನಮ್ಮ ಸುತ್ತಮುತ್ತಲಿನವರು, ಶಾಲೆಯಲ್ಲಿ ನಮ್ಮ ಸಹಪಾಠಿಗಳಲ್ಲಿ ಹೆಚ್ಚಿನವರು ನಮಗಿಂತ ಬಡವರು. ಅಲ್ಲದೇ ವಿದ್ಯೆ ಕಲಿಯುವಾಗ ಕಷ್ಟಪಡಲೇಬೇಕು. ಇಲ್ಲದಿದ್ದರೆ ವಿದ್ಯೆ ಲಭಿಸುವುದಿಲ್ಲ ಎಂಬುದು ಆಗಿನ ಎಲ್ಲರ ಅಭಿಪ್ರಾಯವಾಗಿತ್ತು. ಕಷ್ಟಪಟ್ಟು ಓದಿ, ಪರೀಕ್ಷೆ ಎದುರಿಸಿ ಒಳ್ಳೆ ಫಲಿತಾಂಶ ಬಂದಾಗ ಸಂತೋಷವೂ ಹೆಚ್ಚುತ್ತಿತ್ತು.

ನಮ್ಮ ವಿದ್ಯೆಗಾಗಿ ಅಪ್ಪ ಮಾಡುತ್ತಿದ್ದ ಉಪಾಯ-ಯೋಚನೆ-ಚಿಂತೆಗಳು ಒಂದು ರೀತಿಯದಾದರೆ, ಅಮ್ಮ ಪಡುತ್ತಿದ್ದ ಶ್ರಮವೇ ಬೇರೆ ರೀತಿಯದು. ಸ್ವತಃ ನಾವು ನಾಲ್ಕು ಮಕ್ಕಳು ವಿದ್ಯಾರ್ಜನೆಗಾಗಿ ಮಾಡುತ್ತಿದ್ದ ಪ್ರಯತ್ನ ಬೇರೆಯದೇ ರೀತಿಯದಾಗಿತ್ತು. ಅಪ್ಪ ತನ್ನ ಮೊದಲ ಎರಡು ಮಕ್ಕಳನ್ನು ಅಂದರೆ ನನ್ನ ಅಣ್ಣ, ಅಕ್ಕ ಇಬ್ಬರನ್ನೂ ೫ ವರ್ಷ ಮುಗಿದ ಕೂಡಲೇ ೧ನೇ ತರಗತಿಗೆ ಸೇರಿಸಿದ್ದ. ಅಂದರೆ ಅಣ್ಣ ೩ನೇ ತರಗತಿಯಲ್ಲಿ ಓದುವಾಗ ಅಕ್ಕ ೧ನೇ ತರಗತಿಯಲ್ಲಿ ಓದುತ್ತಿದ್ದಳು. ನಾನು ಅಕ್ಕನಿಗಿಂತ ೨½ ವರ್ಷ ಸಣ್ಣವಳಾದರೂ ನನ್ನನ್ನು ೬ ವರ್ಷಕ್ಕೆ ೧ನೇ ತರಗತಿಗೆ ಸೇರಿಸಿದ್ದ. ಅದೂ ಹಳ್ಳಿಯ ಅಜ್ಜನ ಮನೆಯಲ್ಲಿ ಸದಾ ಅಜ್ಜಿಯ ಬಾಲವಾಗಿ ತಿರುಗುತ್ತಿದ್ದ ನಾನೇ, ಅಜ್ಜಿಯ ಚೇಷ್ಟೆಯ ಮಾತಿಗೆ ನೊಂದು ಶಿರ್ಶಿ ಪೇಟೆಯ ಮನೆಗೆ ಬಂದು ಶಾಲೆಗೆ ಹೋಗಲೇಬೇಕೆಂದು ಹಠ ಮಾಡಿದಾಗ. ಅದು ಹೇಗಾಗಿತ್ತು ಅಂದರೆ, ನನಗಾಗ ಆರು ವರ್ಷ ತುಂಬಿತ್ತು. ಅಣ್ಣ-ಅಕ್ಕ, ಅಜ್ಜನ ಮನೆಯ ಹತ್ತಿರ ಇದ್ದ ಹಳ್ಳಿಯ ಶಾಲೆಯಲ್ಲಿ ಓದುತ್ತಿದ್ದರು. ಬೆಟ್ಟದ ದಾರಿಯಲ್ಲಿ ನಡೆದು, ಅಡಿಕೆ ತೋಟವನ್ನು ಹಾಯ್ದು, ಹೊಳೆ ದಾಟಲು ಹಾಕಿದ ಸಂಕದ ಮೇಲೆ ನಡೆದು ಒಬ್ಬರೇ ಮಾಸ್ತರ್ ಇದ್ದ ಶಾಲೆಗೆ ಹೋಗಬೇಕಾಗಿತ್ತು. ಹಳ್ಳಿ ಶಾಲೆಯ ದಾರಿ ದುರ್ಗಮವೆಂದು ಅಲ್ಲಿ ಶಾಲೆಗೆ ಸೇರಿಸಿರಲಿಲ್ಲ. ಶಿರ್ಶಿ ಪೇಟೆಯಲ್ಲಿ ಅಮ್ಮ-ಅಪ್ಪ, ಪುಟ್ಟ ತಮ್ಮ ಅಪ್ಪನ ಬಂಧುಗಳು, ಹೀಗಾಗಿ ಅಲ್ಲೂ ನನ್ನನ್ನು ಕರೆದೊಯ್ದು ಶಾಲೆಗೆ ಸೇರಿಸಿರಲಿಲ್ಲ. ಸದಾ ಅಜ್ಜಿಯ ಹಿಂದೆ ಸುತ್ತುವುದೇ ನನ್ನ ಕೆಲಸವಾಗಿತ್ತು. ಅಂಥ ಒಂದು



ಸಂದರ್ಭದಲ್ಲಿ ಅಜ್ಜಿ ನಗುತ್ತ, ''ವಿಜಯಳಿಗೆ ಶಾಲೆಯೇ ಬೇಡ, ಅಜ್ಜಿಯ ಹಿಂದೆ ತಿರುಗುವುದೇ ಮಜಾ'' ಎಂದು ನುಡಿದಿದ್ದಳು. ಅದು ಸಹಜ ಕೀಟಲೆ ಮಾತಾಗಿತ್ತು. ಆದರೆ ಬಾಲ್ಯದಿಂದಲೂ ತುಂಬ ಸೂಕ್ಷ್ಮ ಸಂವೇದಿಯಾಗಿದ್ದ ನನಗೆ ಅಪಮಾನವಾಗಿತ್ತು. ಅಂದೇ ಹಠ ಮಾಡಿ ಅಜ್ಜನ ಜೊತೆ ಶಿರ್ಶಿ ಪೇಟೆಯ ಅಪ್ಪ-ಅಮ್ಮ ಇದ್ದ ಬಾಡಿಗೆ ಮನೆಗೆ ಬಂದಿದ್ದೆ. ಮೇ ತಿಂಗಳು ಮುಗಿದಿತ್ತು. ಮನೆಯ ಹತ್ತಿರವಿದ್ದ ಸರಕಾರಿ ಶಾಲೆಗೆ ಹೋಗಿ ''ನಾನು ಸದಾಶಿವ ರಾಯರ ಮಗಳು, ಶಾಲೆಗೆ ಸೇರಿಸಿಕೊಳ್ಳಿ'' ಎಂದಿದ್ದೆ. ಹೆಡ್‌ಮಾಸ್ತರರು ನಮ್ಮ ಮನೆ ಪಕ್ಕದವರೇ! ''ಭಲೇ ಹುಡುಗಿ!'' ಎಂದು ೧ನೇ ತರಗತಿಗೆ ಸೇರಿಸಿದ್ದರು. ನಂತರ ಅಪ್ಪ ಯಾವಾಗಲೋ ಬಂದು ಅಗತ್ಯವಾದ ಮಾಹಿತಿ, ದಾಖಲೆಗಳನ್ನು ಕೊಟ್ಟರಬೇಕು. ೧ನೇ ತರಗತಿ ಮುಗಿದು ನಾನು ೨ನೇ ತರಗತಿಗೆ ಬಂದಾಗ ನಡೆದ ಎರಡು ಘಟನೆಗಳು ಅಚ್ಚಳಿಯದೆ ನೆನಪಿನಲ್ಲಿವೆ.

ಒಂದು ದಿನ ೨ನೇ ತರಗತಿಯಲ್ಲಿ ಕನ್ನಡ ಪಾಠ ನಡೆಯುತ್ತಿತ್ತು. ಆಗ ಮೊದಲನೇ ತರಗತಿಯಲ್ಲಿ ನನಗೆ ಕಲಿಸಿದ್ದ ಉಮಾ ಅಕ್ಕಾವರು ಹೇಳಿಕಳಿಸಿದ್ದರು. ೧ನೇ ತರಗತಿಯಲ್ಲಿ ನಾನು ಬರೆದಿದ್ದ ಮಗ್ಗಿ ಹಾಳೆ ಅವರ ಕೈಯಲ್ಲಿ ಇತ್ತು, ''೧೯ರ ಮಗ್ಗಿ ಹೇಳು'' ಎಂದರು. ನನಗೆ ೧೨ರವರೆಗೆ ಮಾತ್ರ ಮಗ್ಗಿ ಬರುತ್ತಿತ್ತು. ೧೯, ೩೮, ೫೭, ೭೬... ಮುಂದೆ ಬರಲಿಲ್ಲ. ಅಕ್ಕಾವರು ಕೆನ್ನೆಗೆ ಬಾರಿಸಿದ ಹೊಡೆತಕ್ಕೆ ಪ್ರಪಂಚವೇ ತಿರುಗಿದಂತಾಯ್ತು. ಅಲ್ಲಿಯವರೆಗೆ ಹೊಡೆತವನ್ನೇ ಕೇಳಿರದ, ನೋಡಿರದ ನನಗೆ, ಕಣ್ಣಲ್ಲಿ ಬಳಬಳನೇ ನೀರು ಸುರಿಯಿತು. ೧ನೇ ತರಗತಿಯಲ್ಲಿ ಪ್ರಥಮ ಸ್ಥಾನ ಪಡೆದಿದ್ದ ನನಗೆ ಮಗ್ಗಿ ಹೇಳಲು ತಪ್ಪಿದ್ದಕ್ಕೆ ಆ ಅಕ್ಕಾವರು ಕೊಟ್ಟ ಶಿಕ್ಷೆ ಉಗ್ರವಾಗಿತ್ತು. ಆ ನೋವನ್ನು, ಅಪಮಾನವನ್ನು ಯಾರ ಬಳಿಯೂ ಹೇಳಿಕೊಳ್ಳಲಿಲ್ಲ. ಮುಂದೆ ಗಣಿತಶಾಸ್ತ್ರದಲ್ಲಿ ಎಂ.ಎ. ಮಾಡಿದರೂ, ಮಗ್ಗಿ ಕುರಿತಾದ ಭಯ ಹೋಗಲಿಲ್ಲ. (ಅದೇ ಕಾಲೇಜಿನಲ್ಲಿ ದಯಾಳುವಾದ ಪ್ರೊಫೆಸರ್ ಒಬ್ಬರು, ೧೦ರ ತನಕ ಮಗ್ಗಿ ಕಲಿತರೆ ಸಾಕು, ಉಳಿದದ್ದು ಗುಣಾಕಾರದಿಂದ ಸುಲಭವಾಗಿ ಮಾಡಬಹುದು ಎಂದು ಮಾರ್ಗದರ್ಶನ ಮಾಡಿದ್ದರು!)

ಈಗ ಅಣ್ಣ ೭ನೇ ತರಗತಿಗೆ, ಅಕ್ಕ ೫ನೇ ತರಗತಿಗೆ ಪೇಟೆಯ ಶಾಲೆಗೆ ಸೇರಿದ್ದರು. ಹಾಗಾಗಿ ಸಣ್ಣ ಮನೆಯಲ್ಲಿ ಅಪ್ಪ-ಅಮ್ಮ, ನಾಲ್ವರು ಮಕ್ಕಳು, ಅಜ್ಜಿ (ಅಪ್ಪನ ತಾಯಿ) ತುಂಬಿದ್ದರು. ನಾನು ೨ನೇ ತರಗತಿಗೆ ಬಂದಾಗ ನನಗಿಂತ ೨½ ವರ್ಷ ಚಿಕ್ಕವನಾದ ತಮ್ಮನನ್ನು ೧ನೇ ತರಗತಿಗೆ ಅಪ್ಪ ಸೇರಿಸಿದ್ದ, ನನಗೆ ಆಗ ಖುಶಿಯೇ ಆಗಿತ್ತು. ಜೊತೆಯಾಗಿ ಶಾಲೆಗೆ ಹೋಗಬಹುದೆಂದು. ಆದರೆ ಒಂದು ದಿನ ಯಾವುದೋ ವಿಷಯಕ್ಕೆ ಮಕ್ಕಳಲ್ಲಿ ಜಗಳವಾಯ್ತು. ಆಗ ಅಣ್ಣ ''ನಾವು ನಾಲ್ವರಿಗೂ ೨½ ವರ್ಷಗಳ ಅಂತರವಿದೆ. ನಾನು ೭ನೇ ಕ್ಲಾಸು, ಸವಿತ ೫ನೇ ಕ್ಲಾಸು, ನೀನು ೩ನೇ ಕ್ಲಾಸು ಆಗಬೇಕಾಗಿತ್ತು. ತಮ್ಮ ನಿನಗಿಂತ ೨½ ವರ್ಷ

## ತಿರುಕರ ಪಥಯಾತ್ರೆ



೧
ರಾತ್ರಿ ಜಾರಿತು ಮರದ ಎಲೆಯಲಿ
ನೀರ ಹನಿಯಾಗಿ
ಹಗಲು ಕುಳಿತಿದೆ ಬದುಕ ಆವಿಗೆ
ಧಾವಂತದಲಿ ತಲೆಗಳು ತೇಲಾಡುತ
ಹೊತ್ತೇರಿದೆ; ಬೆಚ್ಚ ತೊಡಗಿದೆ ಬಿಸಿಲು
ತಿರುಕರ ನಿಶ್ಚಲತೆಗೆ!

೨
ಜತೆ ತಾನಿರದ ಅವಳ ತೋಳಿನ ಸುತ್ತ
ಅವನ ಹರಿವಿನ ತವಕ
ಸುಳಿವ ಗಾಳಿಯ ಒಳಗೆ ಕೆಂಗುಲಾಬಿಯ ಪುಳಕ
ಮೈ ರಕ್ತ ಹೆಪ್ಪುಗಟ್ಟಿಸಿದೆ ಗಾಂಧೀಜಿಯ
ಮುಗುಳುನಗೆ; ನೋಟುಗಳಲಿ ತಣ್ಣಗೆ!

೩
ನಿರೀಕ್ಷೆಯಿರದವನ ನೆತ್ತಿಯ ಮೇಲೆ
ನೂರೆಂಟು ಸುತ್ತಿಗೆ, ಕನಸೊಂದೇ ಕತ್ತಲಲಿ
ಜೀವಸ್ಪರ್ಶಕೆ ರಕ್ತ-ಬಣ್ಣದ ತೊಡಕು
ಮನುಷ್ಯರೆಂಬ ಅನಿವಾರ್ಯತೆಗೆ
ದೇವರೆಂಬ ಮೈಲಿಗೆ!

೪
ಬೇಡಿದ ಪ್ರೇಮಭಿಕ್ಷೆಯಲಿ ಹರಿದಾಡಿದ
ಜಿರಳೆ, ಪ್ರಣಯದಾಸೆಯಲಿ ಚೇಳು
ಮೈಯ್ಯಲಿ ಹಣದ ಪರಿಮಳವಿರದವನ
ಎದೆಯೊಳಗೆ ಅವಳದೊಂದು ಸ್ತಬ್ಧ ಚಿತ್ರ,
ಖರೀದಿಯಾಗಲಾರದ ಬದುಕ ಬಿಟ್ಟು ಹೋಗದ ಜಿಗುಪ್ಸೆ!

೫
ಆಸೆಯಲಿ ಅದ್ದಿ ತೆಗೆದಿಟ್ಟ ಮೌನ
ಅಂಡಲೆಯುವ ತಿರುಪೆ,
ಚಾಚಿದ ಬೊಗಸೆಯೊಳಗೊಂದು ಶೂನ್ಯ
ಆಕಾಶಕೆ ಕಾಯುತ ಕಾದ ನೆತ್ತಿಯಲಿ
ಕುದಿವ ನಿರ್ಲಿಪ್ತತೆ
ಹುಡುಕಿ ಸೋತ ಅಸ್ತಿತ್ವಕೆ ಅರ್ಥವಿಲ್ಲದ ಹೆಸರು!

೬
ದೇಹಗಳೆಷ್ಟೋ ಹುಟ್ಟಿದವು, ಸತ್ತವು
ಇಷ್ಟಿಷ್ಟು ಬದುಕನ್ನು ಪಡೆದವು
ಉಂಡವು, ಉಂಡವು
ಹಸಿದವು, ಹಸಿದವು...
ಎಂದಿನಂತೆ ಊರೆಲ್ಲ ತಿರುಕರ
ಕನಸು ನೆನಪುಗಳ ಸಾಲು - ಪಥಯಾತ್ರೆ!

**ಗಣೇಶ ಹೊಸ್ಮನೆ**
ಜಾನ್ಮನೆ - ೫೮೧ ೩೧೫, ಶಿರಸಿ, (ಉ.ಕ.)

ಸಣ್ಣವನು ೧ನೇ ಕ್ಲಾಸು'' ಅಂತ ಹಂಗಿಸಿದ. ನಾನು ಜಾಣ ಹುಡುಗಿಯಾಗಿದ್ದೆ. ಹೇಗೆ ಹೀಗಾಯ್ತು ಅಂತ ತುಂಬ ಅಳು ಬಂತು. ಆ ದಿನ ಜಗಳ ಮುಗಿದಿತ್ತು. ಆದರೆ ಆಗಾಗ ಹಾಗೆ ನೋವಾಗುವ ಪ್ರಸಂಗ ಬರುತ್ತಿತ್ತು. ಅಪ್ಪ-ಅಮ್ಮನ ಬಳಿ ಕೇಳಿದರೆ ಏನೇನೋ ಕಾರಣಗಳು. ಮುಂದೆ ಕಾಲೇಜಿಗೆ ಹೋಗುವಾಗ ಒಂದು ದಿನ ಹೀಗೆ ಮಾತು ಬಂದಾಗ ಅಪ್ಪ ಹೇಳಿದ್ದ ''ಮಕ್ಕಳ ಪಾಟಿ-ಪುಸ್ತಕ, ಪಟ್ಟಿ (ಅಂದರೆ ನೋಟ್ ಬುಕ್ಸ್) ತುಂಬ ದುಬಾರಿಯಾಗಿತ್ತು. ನಿನ್ನ ಪುಸ್ತಕಗಳು, ಮರು ವರ್ಷ ತಮ್ಮನಿಗೆ ಉಪಯೋಗವಾಗಲಿ, ಓದುವಾಗ ಅವನಿಗೂ ಸಹಾಯವಾಗಲಿ ಎಂದು ಹೀಗೆ ಮಾಡಿದೆ'' ಎಂದಿದ್ದ. ನನ್ನ ಮೇಲೆ ಅಪ್ಪ ಈ ಪ್ರಯೋಗ ಮಾಡಿದ ಅಂತ ಬಹುಕಾಲ ಬೇಸರವಿತ್ತು. ಆದರೆ ಈಗ ಜೀವನದ ಕಷ್ಟಗಳ ಬಗ್ಗೆ ಅರಿವು ಮೂಡಿದ ಮೇಲೆ, ಅನುಭವ ಬಂದ ಮೇಲೆ ಆ ಬೇಸರವಿಲ್ಲ, ಅವೆಲ್ಲವೂ ಕರಗಿಹೋಗಿದೆ ಅನಿಸುತ್ತದೆ. ಪಾಪ ! ಅಕ್ಕ-ಅಣ್ಣ ಇಬ್ಬರನ್ನು ಶಾಲೆಗೆ ಸೇರಿಸುವಾಗ ಇದ್ದ ಪರಿಸ್ಥಿತಿ, ನಾಲ್ಕು ಮಕ್ಕಳಾದ ಮೇಲೆ ಇನ್ನೂ ಹದಗೆಟ್ಟಿತ್ತು. ಆರ್ಥಿಕ ಸಂಕಷ್ಟಗಳೇ ಹೀಗೆ ನನ್ನನ್ನು ಒಂದು ವರ್ಷ ತಡವಾಗಿ ಶಾಲೆಗೆ ಸೇರಿಸಲು ಕಾರಣ ಎಂದು ಅರಿವಾಗಿದೆ. ಅಲ್ಲದೇ ಅಪ್ಪನ ಅಂತರಂಗಕ್ಕೆ ನಾನು ವಿದ್ಯೆ ಕಲಿತರೂ ಸರಕಾರಿ ನೌಕರಿ ಮಾಡಲಾರೆ ಎಂದು ಗೊತ್ತಿರಬೇಕು. ಅಣ್ಣ-ತಮ್ಮ-ಅಕ್ಕ ನೌಕರಿ ಮಾಡಿದರೂ, ನನಗೆ ಅದು ಹಲವು ಕಾರಣಗಳಿಂದ ಸಾಧ್ಯವಾಗಲಿಲ್ಲ. ಹಾಗಿರುವಾಗ ಒಂದು ವರ್ಷ ಬೇಗ ಪದವಿ, ಸ್ನಾತಕೋತ್ತರ ಪದವಿ ಗಳಿಸಿದ್ದರೂ ಹೆಚ್ಚಿನ ಅರ್ಥವಿರಲಿಲ್ಲ.

ನನ್ನ ಪುಸ್ತಕಗಳು ತಮ್ಮನಿಗೆ ಉಪಯೋಗವಾಗಲಿ ಎಂದು ಅಪ್ಪ ಮಾಡಿದ ವಿಚಾರ ಹೇಳಿದೆನಲ್ಲ. ಹಳೇ ಪುಸ್ತಕಗಳನ್ನು ನಾವು ದೊರಕಿಸಿಕೊಳ್ಳುವುದೇ ಒಂದು ಸಾಹಸ-ಸಾರ್ಥಕ ಕೆಲಸವಾಗಿತ್ತು. ಈ ಪ್ರಸಂಗ ಹೇಗೆ ಅಂದರೆ... ಉದಾಹರಣೆಗೆ ನಾನು ೪ನೇ ತರಗತಿಯಲ್ಲಿ ಇದ್ದೆ ಅಂದುಕೊಳ್ಳೋಣ. ಇನ್ನು ವಾರ್ಷಿಕ ಪರೀಕ್ಷೆಗೆ ೧ ತಿಂಗಳು ಇದ್ದಾಗಲೇ ೫ನೇ ತರಗತಿಯ ಜಾಣ ಹುಡುಗಿಯ ಗೆಳೆತನ ಸಂಪಾದಿಸುವುದು. ಅವಳು ಆ ವರ್ಷ ಹೊಸ ಪುಸ್ತಕ ಕೊಂಡಿದ್ದರೆ ಮುಕ್ಕಾಲು ಬೆಲೆಗೆ ತನ್ನ ಪುಸ್ತಕಗಳನ್ನು ಕೊಡಲು ಒಪ್ಪುತ್ತಿದ್ದಳು. ಅವಳೂ ಹಳೇ ಪುಸ್ತಕಗಳನ್ನು ಮುಕ್ಕಾಲು ಬೆಲೆಗೆ ಕೊಂಡಿದ್ದರೆ, ಈಗ ಅವಳು ಅರ್ಧ ಬೆಲೆಗೆ ಕೊಡುತ್ತಿದ್ದಳು. ನಾವು ಅದೇ ರೀತಿ ನಮ್ಮ ಪುಸ್ತಕಗಳನ್ನು ಕೆಳಗಿನ ತರಗತಿಯವರಿಗೆ ಮಾರುತ್ತಿದ್ದೆವು. ನಾವು ಪುಸ್ತಕ ಮಾರಿ ಬಂದ ದುಡ್ಡು ನಮಗೆ ಪುಸ್ತಕ ಕೊಳ್ಳಲು ಉಪಯೋಗವಾಗುತ್ತಿತ್ತು. ಆದರೆ ನಮ್ಮಪ್ಪ ಮಾಡಿದ ಬುದ್ಧಿವಂತಿಕೆಯಿಂದ ತಮ್ಮನಿಗೆ ಯಾವಾಗಲೂ ನನ್ನ ಹಳೇ ಪುಸ್ತಕ ಉಚಿತವಾಗಿ ಕೊಡಬೇಕಾಗಿತ್ತು. ಅಣ್ಣ-ಅಕ್ಕ-ತಮ್ಮ, ಎಲ್ಲರೂ ತಮ್ಮ ಪುಸ್ತಕಗಳನ್ನು ಅರ್ಧ ಬೆಲೆಗೆ ಮಾರುತ್ತಿದ್ದರು. ಅಣ್ಣ-ಅಕ್ಕ, ಹಳೇ ಪುಸ್ತಕಗಳನ್ನು ಅರ್ಧ ಬೆಲೆಗೆ ಕೊಳ್ಳುತ್ತಿದ್ದರು. ನನಗೆ ಹಳೇ ಪುಸ್ತಕಗಳ ದುಡ್ಡು ಸಿಗುತ್ತಿರಲಿಲ್ಲ. ಪ್ರತಿವರ್ಷ ಪ್ರಾರಂಭದಲ್ಲಿ ಅಮ್ಮ, ನಾಲ್ಕೂ ಮಕ್ಕಳಿಗೆ ಪುಸ್ತಕ-ಪಟ್ಟಿ-ಪೆನ್ಸಿಲು-ಪೆನ್ನು... ಮುಂತಾದ ವಸ್ತುಗಳಿಗಾಗಿ ಪ್ರತಿಯೊಬ್ಬರಿಗೂ




ಇಷ್ಟಿಷ್ಟು ಅಂತ ಹಣ ಕೊಡುತ್ತಿದ್ದಳು. ಈ ಸಂದರ್ಭದಲ್ಲಿ ಸಣ್ಣ-ಪುಟ್ಟ ಜಗಳ ಆಗುತ್ತಿತ್ತು. ಎಲ್ಲಾ ಮಾಡಿದ್ದು ವಿದ್ಯೆಗಾಗಿ!

ಹಳೇ ಪುಸ್ತಕಗಳನ್ನು ಮಾರುವ-ಕೊಳ್ಳುವ ಸಾಹಸ ಒಂದಾದರೆ ಪಟ್ಟಿಗಳ (ನೋಟ್ ಬುಕ್‌ಗಳ) ಕತೆ ಇನ್ನೊಂದು. ಪರೀಕ್ಷೆ ಮುಗಿದ ದಿನವೇ ರಾತ್ರಿ ನಾಲ್ವರೂ ಲ್ಯಾಂಟೀನ್ ದೀಪದ ಸುತ್ತಲೂ ಕುಳಿತು, ನಮ್ಮ ನಮ್ಮ ಪಟ್ಟಿ ಪುಸ್ತಕಗಳ ರಾಶಿ ಹಾಕಿಕೊಳ್ಳುತ್ತಿದ್ದೆವು. ಪುಸ್ತಕಗಳನ್ನು ಬೇರೆ ಕಡೆ ತೆಗೆದಿಡುತ್ತಿದ್ದೆವು. ಪಟ್ಟಿಗಳಲ್ಲಿ ಇರುವ ಖಾಲಿ ಹಾಳೆಗಳನ್ನು ಹರಿದು ಒಟ್ಟು ಮಾಡುತ್ತಿದ್ದೆವು. ಬರೆದ ಹಾಳೆಗಳ ರಾಶಿಯನ್ನು ರದ್ದಿ ಮಾರುವವನಿಗೆ ಹಾಕಲು ಅಣ್ಣ ಜೋಡಿಸಿ ಇಡುತ್ತಿದ್ದ. ನಮ್ಮ ನಮ್ಮ ಖಾಲಿ ಹಾಳೆಗಳನ್ನು ದಪ್ಪ ಸೂಜಿ, ಟ್ವೈನ್ ದಾರದಿಂದ ಹೊಲಿದು ಹೊಸ ಪಟ್ಟಿ ಮಾಡಿ ಕೊಡುತ್ತಿದ್ದ. ಇದು ಬರುವ ವರ್ಷಕ್ಕೆ ಕಚ್ಚಾ ಪಟ್ಟಿಯಾಗಿ ಉಪಯೋಗವಾಗುತ್ತಿತ್ತು. ರದ್ದಿ ಮಾರಿದ್ದರಿಂದ ಒಂದಾಣೆ, ಎರಡಾಣೆ ಬಂದರೆ ಅದರಿಂದ ಒಂದೆರಡು ಹೊಸ ಪಟ್ಟಿ ಕೊಳ್ಳಲು ಉಪಯೋಗವಾಗುತ್ತಿತ್ತು.

ಪರೀಕ್ಷೆಯ ಫಲಿತಾಂಶ ಬಂದು ಎಲ್ಲರೂ ಚೆನ್ನಾಗಿ ಪಾಸಾದ ಸಂಭ್ರಮ ಒಂದೆರಡು ದಿನಗಳು ಮಾತ್ರ. ಮರುದಿನವೇ ಮರುವರ್ಷದ ಪುಸ್ತಕಗಳನ್ನು ತಂದು ದಪ್ಪ ಹಾಳೆಗಳಿಂದ ಬೈಂಡ್ ಹಾಕುವ ಗಲಾಟೆ. ಅಣ್ಣ-ಅಕ್ಕ ಉದಾರವಾಗಿ ನನಗೆ, ನನ್ನ ತಮ್ಮನಿಗೆ ಈ ಕೆಲಸವನ್ನು ಮಾಡಿಕೊಟ್ಟು ತಮ್ಮ ಮುದ್ದಾದ ಕೈಬರೆಹದಿಂದ ನಮ್ಮ ಹೆಸರು, ತರಗತಿ, ಶಾಲೆ, ಊರು ಬರೆದುಕೊಡುತ್ತಿದ್ದರು. ಈ ಕೆಲಸವೂ ದುಬಾರಿಯಾಗುವ ಸಂದರ್ಭ ಬಂತು, ಹೇಗೆಂದರೆ...

ನಮ್ಮ ಪಕ್ಕದ ಮನೆ ಪೊಲೀಸ್ ಇನ್ಸ್‌ಪೆಕ್ಟರ್ ಮಕ್ಕಳು ಕಾನ್ವೆಂಟಿನಲ್ಲಿ ಓದುತ್ತಿದ್ದರು. ಒಂದು ವರ್ಷ, ಕಾನ್ವೆಂಟ್ ವಾರ್ಷಿಕೋತ್ಸವಕ್ಕೆ ಪಕ್ಕದ ಮನೆಯವರ ಒತ್ತಾಯಕ್ಕೆ ಅಮ್ಮ-ಅಜ್ಜಿ ಹೋಗಿಬಂದರು. ಅಲ್ಲಿಯ ಮಕ್ಕಳ ಶಿಸ್ತು, ನರ್ತನ, ಹಾಡು ಕೇಳಿ ಬೆರಗಾದರು. ಹಿಂದೆ-ಮುಂದೆ ವಿಚಾರಿಸದೆ ಮನೆಯ ಹತ್ತಿರದ ಸರಕಾರಿ ಶಾಲೆ ಬಿಡಿಸಿ ಅಕ್ಕನನ್ನು ೬ನೇ ತರಗತಿಗೆ ನನ್ನನ್ನು ೩ನೇ ತರಗತಿಗೆ ತಮ್ಮನನ್ನು ೨ನೇ ತರಗತಿಗೆ ದೂರದ ಕಾನ್ವೆಂಟ್‌ಗೆ ಸೇರಿಸಿದ್ದರು. ಅಣ್ಣ ಆ ವರ್ಷ ೮ನೇ ತರಗತಿಗಾಗಿ ಶಿರ್ಶಿಯ ಶ್ರೀ ಮಾರಿಕಾಂಬ ಹೈಸ್ಕೂಲ್ ಸೇರಿದ್ದ.

ಇಲ್ಲಿ ಹೊಸ ಸಮಸ್ಯೆಗಳು ಎದುರಾಗಿದ್ದವು. ಯಾವಾಗಲೂ ಸಮವಸ್ತ್ರ ಧರಿಸಬೇಕು, ಶನಿವಾರ ಬಿಳೀ ಸಮವಸ್ತ್ರ ಬೇಕು. ಪುಸ್ತಕ, ಬರೆಯುವ ಪುಸ್ತಕಗಳಿಗೆ ಖಾಕಿ ಬೈಂಡ್ ಹಾಕಬೇಕು. ಇಷ್ಟು ದಿನ ಬಳಪ, ಪೆನ್ಸಿಲ್‌ಗಳಿಂದ ಬರೆಯುತ್ತಿದ್ದರೆ ಮೇಲಿನ ತರಗತಿಗಳಿಗೆ ಬಂದ ಹಾಗೆ ಲೆಕ್ಕಣಿಕೆ ಶಾಯಿ(ಮಸಿದೌತಿ)ಯಿಂದ ಬರೆಯಬೇಕಾದ ಕಷ್ಟ ನಂತರ ಪೆನ್ನುಗಳ ಬಳಕೆ ಬಂದಾಗ ಒಳ್ಳೆ ಹೆಸರಿರುವ ಪೆನ್ನು ತೆಗೆದುಕೊಳ್ಳಬೇಕಾಗಿತ್ತು. ಏನೇ ಆದರೂ, ನಾನು, ನನ್ನ ತಮ್ಮ ಪೆನ್ನು ಲೀಕಾಗಿ ಸದಾ ಕೈ ಬೆರಳುಗಳಿಗೆ ಮಸಿ ಹಾಕಿಕೊಂಡೇ ಇರುತ್ತಿದ್ದೆವು. ಅಣ್ಣ-ಅಕ್ಕ ಪೆನ್ನನ್ನು ತುಂಬ ಜೋಪಾನವಾಗಿ ಬಳಸುತ್ತಿದ್ದರು, ನಾವು ಸಣ್ಣವರಿದ್ದಾಗ ಬಾಲ್‌ಪೆನ್ನು ಇರಲಿಲ್ಲ. ಅದು ಬಳಕೆಗೆ ಬಂದ ಎಷ್ಟೋ ವರ್ಷಗಳವರೆಗೆ ಅದನ್ನು ಬಳಸಲು ಶಾಲೆ-ಹೈಸ್ಕೂಲ್‌ಗಳಲ್ಲಿ ನಿಷೇಧವಿತ್ತು. ಏನೇ ಆದರೂ ಬಾಲ್‌ಪೆನ್ನು ಕಂಡುಹಿಡಿದ ಪುಣ್ಯಾತ್ಮನಿಗೆ ಸಾವಿರ ನಮಸ್ಕಾರಗಳು.

ಈಗಿನ ಬಾಲ್‌ಪೆನ್ನುಗಳು, ವಿದ್ಯುತ್ ದೀಪಗಳ ಸೌಕರ್ಯಗಳನ್ನು ಕಂಡಾಗ, ನಮ್ಮ ಬಾಲ್ಯದ ಓದುವ-ಬರೆಯುವ ಕಷ್ಟದ ದಿನಗಳು ನೆನಪಾಗಿಬಿಡುತ್ತವೆ. ನಮ್ಮ (ಅಪ್ಪ-ಅಮ್ಮನ) ಮನೆಯಲ್ಲಿ ನಾವು ಸಣ್ಣವರಿದ್ದಾಗ ವಿದ್ಯುತ್ ದೀಪಗಳಿರಲಿಲ್ಲ. ಅಡಿಗೆ ಮನೆಯಲ್ಲಿ ಚಿಮಣಿ ಬುರುಡೆ, ಒಂದೆರಡು ಸಣ್ಣ ಲ್ಯಾಂಪ್‌ಗಳು, ಒಂದು ದೊಡ್ಡ ಲ್ಯಾಂಟೀನ್ ಇದ್ದವು. ಚಿಮಣಿ ಎಣ್ಣೆ(ಸೀಮೆಎಣ್ಣೆ)ಯಿಂದ ಉರಿಯುವ ಈ ದೀಪದಿಂದ ಮಸಿ, ಹೊಗೆ, ವಾಸನೆ ಬರುತ್ತಿದ್ದವು. ಸದಾ ಇವುಗಳನ್ನು ಸ್ವಚ್ಛವಾಗಿಡುವುದು, ಎಣ್ಣೆ ಹಾಕುವುದು, ಬತ್ತಿ ಹಾಕುವುದು, ಅದರ ಗ್ಯಾಸಿನ ಬುರುಡೆಯನ್ನು ಸುಣ್ಣ ಹಚ್ಚಿ, ಬಿಳಿ ಬಟ್ಟೆಯಿಂದ ಉಜ್ಜುವುದು ಎಲ್ಲವನ್ನೂ ಮಾಡಬೇಕಾಗಿತ್ತು. ಅಕ್ಕ ಪ್ರತಿ ಶನಿವಾರ ಈ ಎಲ್ಲ ಕೆಲಸವನ್ನು ಮಾಡುತ್ತಿದ್ದಳು. ರಾತ್ರಿ ದೊಡ್ಡ ಒಳದಲ್ಲಿ ಕುಳಿತು ನಾಲ್ಕು ಜನರೂ ಓದುತ್ತಿದ್ದೆವು. ಲ್ಯಾಂಟೀನ್‌ನ ಎರಡು ಭಾಗದಲ್ಲಿ ಚೆನ್ನಾಗಿ ಬೆಳಕು ಬರುತ್ತದೆ. ಆದರೆ ಇನ್ನೆರಡು ಬದಿಗೆ ಕಂಬಿಗಳು ಬರುವುದರಿಂದ ಬೆಳಕು ಅಷ್ಟಾಗಿ ಬರುವುದಿಲ್ಲ. ಅಣ್ಣ ತಾನು ದೊಡ್ಡ ತರಗತಿಯಲ್ಲಿ ಓದುವವನೆಂದು ಬೆಳಕಿರುವ ಒಂದು ಬದಿಗೆ ಕೂಡ್ರುತ್ತಿದ್ದ. ಇನ್ನೊಂದು ಬದಿ ಯಾವ ರೀತಿಯಿಂದ ನೋಡಿದರೂ ಅಕ್ಕನಿಗೆ ಸೇರಬೇಕಾಗಿತ್ತು. ಆದರೆ ತಮ್ಮ ಸಣ್ಣವನೆಂಬ ಕಾರಣಕ್ಕೆ, ನಾನಂತೂ ಸ್ವಭಾವತಃ ಹಠಮಾರಿಯೇ. ಆದ್ದರಿಂದ ಜಗಳ ಮಾಡುತ್ತಿದ್ದೆವು. ಆ ದೀಪಗಳ ಎಲ್ಲ ಜವಾಬ್ದಾರಿ ವಹಿಸಿದ್ದ ಅಕ್ಕ ಮೌನವಾಗಿಯೇ ಅಲ್ಲಿಂದ ಎದ್ದು ನಡುಮನೆಯ ಸಣ್ಣ ಲ್ಯಾಂಪಿನ ಬಳಿ ಹೋಗುತ್ತಿದ್ದಳು. ಓದುತ್ತ, ಓದುತ್ತ ನಿದ್ರೆ ಬಂದು ಮುಂದೆ ಬಾಗಿ ಅವಳ ನೀಳವಾದ

ಮುಂಗೂದಲು ಸುಟ್ಟು ವಾಸನೆ ಬಂದಾಗ ಅಪ್ಪ-ಅಮ್ಮನಿಗೆ ಸಿಟ್ಟು ಬರುತ್ತಿತ್ತು. ಆಗ ''ಎಲ್ಲರೂ ಸರದಿಯ ಪ್ರಕಾರ 'ಲ್ಯಾಂಟೀನ್'ನ ಬೆಳಕು ಬರುವ ಜಾಗದಲ್ಲಿ ಕೂಡಬೇಕು'' ಎಂದು ಅಪ್ಪಣೆ ಮಾಡುತ್ತಿದ್ದರು.

ಓದುವ ಕಷ್ಟ ಹೀಗಾದರೆ ಬರೆಯುವ ಕಷ್ಟ ಇನ್ನೊಂದು ರೀತಿಯದಾಗಿತ್ತು. ಪೆನ್ಸಿಲು ಸದಾ ಮುರಿಯುತ್ತಿತ್ತು. ಪೆನ್ಸಿಲ್‌ಅನ್ನು ಚೂಪು ಮಾಡಲು ಅಣ್ಣನ ಸಹಾಯ ಬೇಕಾಗುತ್ತಿತ್ತು. ಅಣ್ಣನಿಗೆ ಸಿಟ್ಟು ಬಂದಾಗ ಬ್ಲೇಡಿನಿಂದ ನಾವೇ ಮಾಡಲು ಹೋಗಿ ಬೆರಳಿನಿಂದ ರಕ್ತ ಬರುತ್ತಿತ್ತು. ಲೇಖನಿ ಬರುವ ಕಾಲಕ್ಕೆ ನಾವು ಪೆನ್ಸಿಲ್‌ನಿಂದ ಬರೆಯುವುದು ಮುಗಿದು ಶಾಯಿ ಮತ್ತು ಲೆಕ್ಕಣಿಕೆ (ಕೆಲವರು ಇದಕ್ಕೆ ಕಲಂ, ಲೇಖನಿ ಎಂದು ಹೇಳುತ್ತಾರೆ) ಉಪಯೋಗಿಸುವ ಹಂತಕ್ಕೆ ಬಂದಿದ್ದೆವು. ಅದರ ಮೊದಲು ಕೆಲಕಾಲ ರದ್ದಿ ಪೇಪರಿನಲ್ಲಿ ಜೋಡಿ ಗೆರೆಗಳ ಮಧ್ಯೆ ಬಗಿನಿ ಮರದ ಕಡ್ಡಿಯನ್ನು ಮಸಿಯಲ್ಲಿ ಅದ್ದಿ ಬರೆದು ರೂಢಿ ಮಾಡಿಕೊಳ್ಳಬೇಕಿತ್ತು. ಬಗಿನಿ ಮರಗಳು ಸಾಧಾರಣವಾಗಿ ಹಿತ್ತಲ ಮೂಲೆಯಲ್ಲಿ ಇರುತ್ತಿದ್ದವು. ಅಪ್ಪ ಪೇಟೆಯಿಂದ ತಂದ ಶಾಯಿ ಪುಡಿಯನ್ನು ಹದವಾಗಿ ನೀರಿನಲ್ಲಿ ಕದಡಿ ಬಾಟ್ಲಿಯಲ್ಲಿ ತುಂಬಿಡುವುದು ಅಣ್ಣನ ಕೆಲಸ. ಸಣ್ಣ-ಸಣ್ಣ ಮಸಿ ಕುಡಿಕೆಯಲ್ಲಿ ಈ ಶಾಯಿಯನ್ನು ಹಾಕಿಕೊಂಡು ಅದರಲ್ಲಿ ನಿಬ್ಬು ಕೂಡಿಸಿದ ಲೆಕ್ಕಣಿಕೆಯನ್ನು ಅದ್ದಿ ಬರೆಯಬೇಕಿತ್ತು. ಸ್ವಲ್ಪ ದಿನಗಳ ನಂತರ ತಯಾರಾದ ಮಸಿದೌತಿಗಳೇ ಬರತೊಡಗಿದವು. ಕೈ-ಮೈ-ಬಟ್ಟೆ-ಪುಸ್ತಕಕ್ಕೆ ಮಸಿ ಬಡಿದುಕೊಳ್ಳುತ್ತ ಬರೆಯುವ ಕೆಲಸ ಬಹು ಕಷ್ಟದಾಯಕವಾಗಿತ್ತು. ಒಮ್ಮೆ ಹೀಗೆ ಬರೆಯುವಾಗ ಮಸಿ ಬಾಟ್ಲಿ ನನ್ನ ನಿಬಂಧದ ಪಟ್ಟಿಯ ಮೇಲೆ ಬಿದ್ದು ಇಡೀ ಪಟ್ಟಿಯೇ ಹಾಳಾಗಿತ್ತು. ಆಗ ನನ್ನ ಜೊತೆಗೆ ಅಮ್ಮನಿಗೂ ಅಳು ಬಂದುಬಿಟ್ಟಿತ್ತು. ಆಗ ಮತ್ತೆ ಹೊಸ ೧೦೦ ಹಾಳೆಗಳ ಹೊಸ ಪಟ್ಟಿ ತಂದು ೧೦-೧೨ ನಿಬಂಧಗಳನ್ನು ೨-೩ ದಿನಗಳಲ್ಲಿ ಹೊಸದಾಗಿ ಬರೆದು ಗುರುಗಳ ಬಳಿ ಮತ್ತೆ ಎಲ್ಲದಕ್ಕೂ ಸಹಿ ಹಾಕಿಸಿಕೊಳ್ಳುವವರೆಗೆ ಎಲ್ಲರಿಗೂ ತೀರ ಆತಂಕವಾಗಿತ್ತು. ನಂತರ ಬಂದವು ನಾನಾ ರೀತಿಯ ಪೆನ್ನುಗಳು. ಇದರಲ್ಲಿ ಶಾಯಿ ತುಂಬಿ ವಾರಗಟ್ಟಳೆ ಬರೆಯಬಹುದಿತ್ತು. ಸ್ವಲ್ಪ ವರ್ಷಗಳ ನಂತರ ಬಾಲ್‌ಪೆನ್ನು ಬಂದರೂ ಅದನ್ನು ವಿದ್ಯಾರ್ಥಿಗಳು ಬಳಸುವಂತಿರಲಿಲ್ಲ.

ಒಂದು ವರ್ಷ ಪರೀಕ್ಷೆ ಹತ್ತಿರ ಬಂತು. ಸೋಮವಾರ ಪರೀಕ್ಷೆ ಎನ್ನುವಾಗ ನಾಲ್ವರೂ ನಮ್ಮ ಪಟ್ಟಿ-ಪುಸ್ತಕ-ಪೆನ್ನು, ಪೆನ್ಸಿಲು, ರಬ್ಬರ್, ಕಂಪಾಸ್ ಬಾಕ್ಸ್,... ಎಲ್ಲವುಗಳ ಸಿದ್ಧತೆಗೆ ತೊಡಗಿದೆವು. ಒಂದು ದೊಡ್ಡ ಪಾತ್ರೆಯಲ್ಲಿ ನೀರು ಹಾಕಿ ಎಲ್ಲರ ಪೆನ್ನುಗಳ ಕಾಲು-ತಲೆ-ನಿಬ್ಬು (ಅಂದರೆ ಪೆನ್ನಿನ ವಿವಿಧ ಭಾಗಗಳನ್ನು) ಹಾಕಿದೆವು. ಅಷ್ಟರಲ್ಲಿ ಶಿರ್ಶಿಯ ಮಾರಿಕಾಂಬಾ ಜಾತ್ರೆಗಾಗಿ ಬಂದ ನಾಟಕ ಕಂಪನಿಯ ಪ್ರಚಾರದ ಗಾಡಿ ಬಂತು. ನಾಲ್ವರೂ ರಸ್ತೆಗೆ ಓಡಿದೆವು. ನಮ್ಮ ಕೆಲಸ ನೋಡುತ್ತಿದ್ದ ಅಮ್ಮ, ನಮಗೆ ಸಹಾಯ ಮಾಡಲು ಆ ಪೆನ್ನುಗಳು ತುಂಬಿದ ನೀರಿನ ಪಾತ್ರೆಯನ್ನು ಒಲೆ ಮೇಲೆ ಇಟ್ಟಳು. ಅಮ್ಮನ ಉದ್ದೇಶ ನೀರು ಸ್ವಲ್ಪ ಬಿಸಿಯಾದರೆ, ಪೆನ್ನುಗಳು ಚೆನ್ನಾಗಿ ಸ್ವಚ್ಛವಾಗುತ್ತದೆ ಎಂದು. ಆದರೆ ಅಮ್ಮನೂ ಪಾತ್ರೆಯನ್ನು ಒಲೆ ಮೇಲೆ ಇಟ್ಟು ನಮ್ಮನ್ನು ನೋಡಲು ಹೊರಬಂದು ನಾಟಕದ ಪ್ರಚಾರ ಕೇಳುತ್ತ ಮೈ ಮರೆತಳು. ಪೆನ್ನುಗಳು ಕರಗಿ ಮುದ್ದೆಯಾಗಿ ಮನೆ ತುಂಬ ಪ್ಲಾಸ್ಟಿಕ್ ಸುಟ್ಟ ವಾಸನೆ ತುಂಬಿದಾಗ ಎಲ್ಲರೂ ಅಡಿಗೆ ಮನೆಗೆ ಓಡಿ ಬಂದು ದಿಗ್ಭ್ರಾಂತರಾಗಿ ಕುಳಿತೆವು. ಅಷ್ಟರಲ್ಲಿ ಅಪ್ಪ ಪೇಟೆಯಿಂದ ಬಂದಿದ್ದ. ಅವನು ನರಸಿಂಹಾವತಾರ ತಾಳಬಹುದೆಂದು ಎಲ್ಲರಿಗೂ ಭಯ. ಅಪರೂಪಕ್ಕೆ ಅಮ್ಮನ ಮುಗ್ಧತನಕ್ಕೆ, ಮರೆವಿಗೆ ನಕ್ಕುಬಿಟ್ಟಿದ್ದ. ಆಮೇಲೆ ಅಣ್ಣ-ಅಕ್ಕ ಇಬ್ಬರಿಗೂ ಹೊಸ ಪೆನ್ನುಗಳು, ನನಗೆ-ತಮ್ಮನಿಗೆ ಅಪ್ಪನ ಎರಡು ಹಳೆಯ ಪೆನ್ನುಗಳು ಸಿಕ್ಕಿದ್ದವು. ಪರೀಕ್ಷಾ ಸಮಯದ ಈ ಸಂಕಟ ಆ ಕಾಲದಲ್ಲಿ ತುಂಬ ದುಃಖ ಉಂಟುಮಾಡಿದ್ದರೂ, ಮುಂದೆ ಎಷ್ಟೋ ವರ್ಷಗಳ ಕಾಲ ನಮಗೆಲ್ಲಾ ನಗು ತರುತ್ತಿತ್ತು.

ಇವೆಲ್ಲವುಗಳ ಮಧ್ಯೆ ಅಪ್ಪನಿಗೆ ಅವನ ಸರಕಾರಿ ನೌಕರಿ ನಿಮಿತ್ತ ೨ ವರ್ಷಕ್ಕೊಮ್ಮೆ ವರ್ಗವಾಗುತ್ತಿತ್ತು. ಊರು, ಮನೆ, ಶಾಲೆ ಬದಲಿಸುತ್ತ ಹೇಗೋ ತಮ್ಮ ೭ನೇ ತರಗತಿ ಮುಗಿಸುವ ತನಕ ಅಲೆಮಾರಿ ಜೀವನ ನಡೆಸಬೇಕಾಗಿತ್ತು. ನಂತರ ಶಿರ್ಶಿಯಲ್ಲಿ ದೂರದ ಹೊಸ ಬಡಾವಣೆಯಲ್ಲಿ ಸ್ವಂತ ಮನೆಯಲ್ಲಿ ವಾಸಿಸುತ್ತಾ ಹೈಸ್ಕೂಲ್-ಕಾಲೇಜಿಗೆ ಓದಲು ಹೋಗುವಾಗ ಪ್ರಾಥಮಿಕ ಶಾಲೆಯ ಕಷ್ಟಗಳೇ ಸುಲಭವೆಂದು ಅನಿಸತೊಡಗಿತ್ತು! ಅದು ಬೇರೆಯದೇ ಕತೆ !!


ವಿಜಯಾ ಶ್ರೀಧರ್

ಕೇರಾಫ್ ಡಾ|| ಕೆ. ಆರ್. ಶ್ರೀಧರ್

೧ನೇ ಮುಖ್ಯರಸ್ತೆ, ರಾಜೇಂದ್ರನಗರ, ಶಿವಮೊಗ್ಗ - ೫೭೭ ೨೦೪.





ಎಂ. ಎಸ್. ಕೃಷ್ಣನ್ ಸ್ಮರಣ ಸಂಸ್ಥೆ, 'ಹೊಸತು' ಮತ್ತು ನವಕರ್ನಾಟಕ ಪ್ರಕಾಶನದ ವತಿಯಿಂದ 'ಲೋಕಸಭೆಯ ಪರಮಾಧಿಕಾರ ಅನುಲ್ಲಂಘನೀಯ' ಎಂಬ ವಿಷಯದ ಬಗ್ಗೆ ಚರ್ಚಾಸ್ಪರ್ಧೆ ನಡೆಯಿತು. ನಗರದ ಬೇರೆ ಬೇರೆ ಕಾಲೇಜುಗಳ ೪೯ ವಿದ್ಯಾರ್ಥಿ-ವಿದ್ಯಾರ್ಥಿನಿಯರು ಚರ್ಚಾಕೂಟದಲ್ಲಿ ಭಾಗವಹಿಸಿದ್ದರು. ಇದೇ ಸಂದರ್ಭದಲ್ಲಿ ವೈ. ಜಿ. ಮುರಳೀಧರ ಅವರು ಬರೆದಿರುವ 'ಏನಿದು ಲೋಕ್‌ಪಾಲ್ ?' ಕೃತಿಯ ಅನಾವರಣ ನಡೆಯಿತು. ಶ್ರೀ ಕೋ. ಚೆನ್ನಬಸಪ್ಪ ಅಧ್ಯಕ್ಷತೆ ವಹಿಸಿದ್ದರು. ಪ್ರಾ|| ತೂಪ್ಪಿಲ್ ವೆಂಕಟೇಶ್, ನ್ಯಾಯವಾದಿ ಶ್ರೀಮತಿ ಹೇಮಲತಾ ಮಹಿಷಿ ಮತ್ತು ಪ್ರಾಧ್ಯಾಪಕ ಡಾ|| ಸಿದ್ಧಲಿಂಗಸ್ವಾಮಿ ತೀರ್ಪುಗಾರರಾಗಿ ಸಹಕರಿಸಿದರು. ಕುಮಾರಿ ಗಾಯತ್ರಿ ಚರ್ಚಾಸ್ಪರ್ಧೆಯಲ್ಲಿ ಮೊದಲ ಬಹುಮಾನ ಗಳಿಸಿದರು.

# ಅಖಿಲ ಭಾರತ ಮೂರನೇ ದಲಿತ ಸಾಹಿತ್ಯ ಸಮ್ಮೇಳನ

## ಮೂಡ್ನಾಕೂಡು ಚಿನ್ನಸ್ವಾಮಿ

*(ಕೊಪ್ಪಳದಲ್ಲಿ ಕಳೆದ ಜೂನ್ ೧೮-೧೯, ೨೦೧೧ರಂದು ಜರುಗಿದ ದಲಿತ ಸಾಹಿತ್ಯ ಸಮ್ಮೇಳನದಲ್ಲಿ ಶ್ರೀ ಮೂಡ್ನಾಕೂಡು ಚಿನ್ನಸ್ವಾಮಿ ಅವರು ಮಾಡಿದ ಅಧ್ಯಕ್ಷೀಯ ಭಾಷಣದ ಸಾರಾಂಶ.)*

ದಲಿತ ಸಾಹಿತ್ಯ ಪರಿಷತ್ತು ಜನ್ಮ ತಳೆದು ಸುಮಾರು ೧೪ ವರ್ಷಗಳು ಸಂದಿವೆ. ಅದು ಕರ್ನಾಟಕದ ಕೇಂದ್ರಭಾಗವಾದ ಗದಗಿನಲ್ಲಿ ಜನ್ಮ ತಾಳಿತು. ಅದರ ಸಂಸ್ಥಾಪಕ ನಿರ್ದೇಶಕರಲ್ಲಿ ನಾನೂ ಒಬ್ಬ ಎಂದು ಹೇಳಿಕೊಳ್ಳಲು ಹೆಮ್ಮೆ ಎನಿಸುತ್ತದೆ. ಸಂಸ್ಥೆಗಳು, ಸಂಘಟನೆಗಳು ನಾಯಿಕೊಡೆಗಳಂತೆ ಹುಟ್ಟಿ ಮರೆಯಾಗುವ ಕಾಲದಲ್ಲಿ ಅದರ ಅಧ್ಯಕ್ಷರಾದ ಡಾ॥ ಅರ್ಜುನ ಗೊಳಸಂಗಿಯವರು ಪರಿಷತ್ತನ್ನು ಬಿಟ್ಟೂಬಿಡದೇ ಸಂಘಟಿಸುತ್ತಾ ಜಿಲ್ಲೆಯಿಂದ ಜಿಲ್ಲೆಗೆ ಪ್ರವಹಿಸುವಂತೆ ನೋಡಿಕೊಂಡಿದ್ದಾರೆ. ನಮ್ಮದೇನಿದ್ದರೂ ಹೊರಗಣ ಮೆರಗು. ಗೊಳಸಂಗಿಯವರ ಏಕಾಂಗಿ ಹೋರಾಟದ ಫಲ ಇಂದು ವ್ಯವಸ್ಥಿತವಾಗಿ ಸ್ಥಾಪಿತವಾಗಿರುವ, ಈಗ ಅಖಿಲಭಾರತ ವ್ಯಾಪ್ತಿಯನ್ನು ಪಡೆದುಕೊಂಡಿರುವ ದಲಿತ ಸಾಹಿತ್ಯ ಪರಿಷತ್ತು. ಪರಿಷತ್ತಿನ ದಶಮಾನೋತ್ಸವದ ನಂತರ ಎರಡು ರಾಜ್ಯ ಮಟ್ಟದ ಸಮ್ಮೇಳನಗಳು ಜರುಗಿವೆ. ನನ್ನ ಹಿರಿಯ ಮಿತ್ರರಿಬ್ಬರು ಅಧ್ಯಕ್ಷೀಯ ಪಟ್ಟವನ್ನು ನಿರ್ವಹಿಸಿದ್ದಾರೆ. ಸಮ್ಮೇಳನ ಕೇವಲ ಗೋಷ್ಠಿಗಳಿಗೆ, ಚರ್ಚೆಗೆ ಸೀಮಿತಗೊಳ್ಳದೆ ದಲಿತ ಸಾಹಿತ್ಯದ ಕೃತಿಗಳನ್ನು, ಸಾಹಿತಿಗಳನ್ನು ಗುರುತಿಸುವುದು, ಪುಸ್ತಕ ಬಹುಮಾನ ನೀಡುವುದು, ವ್ಯಕ್ತಿ ಮತ್ತು ಸಂಘಟನೆಗಳನ್ನು ಗುರುತಿಸಿ ಗೌರವ ಪ್ರಶಸ್ತಿಗಳನ್ನು ನೀಡುವುದು ಜತೆಗೆ ಸಂಗೀತ ಸಾಧಕರಿಗೆ ಬೃಹದ್ದೇಶಿ ಪ್ರಶಸ್ತಿ, ದಲಿತ ಚೇತನ, ದಲಿತಸಿರಿ ಪ್ರಶಸ್ತಿ ಇತ್ಯಾದಿ ಸಮ್ಮೇಳನದ ಅರ್ಥವಂತಿಕೆಯನ್ನು ಹೆಚ್ಚಿಸಿವೆ. ಇದು ಒಂದು ಸರ್ಕಾರ ಹಲವು ಇಲಾಖೆಗಳ ಮೂಲಕ ಮಾಡುವ ಅತ್ಯಂತ ಜವಾಬ್ದಾರಿಯುತ ಕೆಲಸಗಳು. ಇದಕ್ಕಾಗಿ ದಲಿತ ಸಾಹಿತ್ಯ ಪರಿಷತ್ತನ್ನು ಮನಸಾರೆ ಅಭಿನಂದಿಸುತ್ತೇನೆ. ಇತ್ತೀಚೆಗಷ್ಟೆ ಅಂದರೆ ಏಪ್ರಿಲ್ ೧೯ರಿಂದ ೨೧ರವರೆಗೆ ಭಾಲ್ಕಿಯಲ್ಲಿ ನಡೆದ ಕಲ್ಯಾಣ ನಾಡಿನ ಶರಣ ಪರಿಷತ್ತು ನಡೆಸಿದ ರಾಜ್ಯ ಮಟ್ಟದ ಸಮ್ಮೇಳನದ ಸರ್ವಾಧ್ಯಕ್ಷನಾಗುವ ಅವಕಾಶವೂ ನನಗೆ ಒದಗಿಬಂದಿತ್ತು. ಲಿಂಗಾಯಿತೇತರ ಸಾಂಸ್ಕೃತಿಕ ವ್ಯಕ್ತಿಯೊಬ್ಬರನ್ನು ಸಮ್ಮೇಳನಾಧ್ಯಕ್ಷರಾಗಿ ಆರಿಸುವ ಅವರ ಆದರ್ಶ ಮೆಚ್ಚುವಂತಹುದು. ಆ ಕಾರಣಕ್ಕಾಗಿ ನಾನು ಈ ಜವಾಬ್ದಾರಿಯನ್ನು ಮುಂದಿನಸಲ ಹೊರಬಹುದೆ ಎಂದು ಕೇಳಿಕೊಂಡಿದ್ದೆ. ಆದರೂ ಪರಿಷತ್ತಿನ ಅಧ್ಯಕ್ಷರು ನನ್ನ ಮಾತನ್ನು ಒಪ್ಪುವಂತೆ ಕಾಣಲಿಲ್ಲ. ಹಾಗಾಗಿ ಇಂದು ನಿಮ್ಮ ಮುಂದೆ ನಿಂತಿದ್ದೇನೆ.

ಭಾರತೀಯ ಸಂದರ್ಭದಲ್ಲಿ ದಲಿತನೊಬ್ಬನ ಅರ್ಹತೆ ಬಡತನ + ಅಸ್ಪೃಶ್ಯತೆ + ಅವಮಾನ. ಈ ಮೂರು ಒಲೆ ಹಚ್ಚಲು ಒಡ್ಡುವ ಕಲ್ಲುಗಳಾದರೆ ನಡುವೆ ಇಟ್ಟ ಮರದ ಕೊಳ್ಳಿಯಂತಿದ್ದವನು ನಾನು. ಅದಕ್ಕೆ ಅಕ್ಷರವೆಂಬ ಕಿಡಿ ಹೊತ್ತಿಕೊಂಡಾಗ ಬೆಂದು ಬೂದಿಯಾದವನು. ಹೊಟ್ಟೆಪಾಡಿಗಾಗಿ ನಾನು ಓದಿದ ಜಮಾ ಖರ್ಚು, ಪಡೆದುಕೊಂಡ ಹುದ್ದೆ ಸಾರಿಗೆ, ಲೆಕ್ಕಪತ್ರ; ಇವುಗಳ ನಡುವೆಯೂ ನಾನು ಅಭಿವ್ಯಕ್ತಿಯನ್ನು ಕಂಡುಕೊಳ್ಳಲು ಈ ಬೆಂದು ಬೂದಿಯಾದ ನೋವೇ ಕಾರಣ. ಈ ನೊಂದ ನೋವನ್ನು ನೊಂದವರಿಗೂ ನೋಯದವರಿಗೂ ತಿಳಿಸುವ ಯತ್ನ ಮಾಡುತ್ತಿರುವಾಗ, ಆರು ಕವಿತಾ ಸಂಕಲನಗಳು ಸೇರಿದಂತೆ ೨೩ ಪುಸ್ತಕಗಳು ಹೊರಬಂದಿವೆ. ಅದನ್ನು ಗುರುತಿಸಿ ಬಂಧುಗಳಾದ ನೀವು ನನಗೆ ಈ ಗೌರವವನ್ನು ನೀಡಿದ್ದೀರಿ. ಅದಕ್ಕಾಗಿ ಮೊದಲಿಗೆ ನಾನು ಕೃತಜ್ಞತೆಯನ್ನು ಸಲ್ಲಿಸುತ್ತೇನೆ.

ಈ ಮೂರನೇ ಸಮ್ಮೇಳನವು ಕೊಪ್ಪಳದಲ್ಲಿ ನಡೆಯುತ್ತಿರುವುದು ನನ್ನ ಸಂತೋಷವನ್ನು ಹೆಚ್ಚಿಸಿದೆ. ಯಾಕೆಂದರೆ ಇದು ಕವಿರಾಜಮಾರ್ಗಕಾರ ಉಲ್ಲೇಖಿಸಿರುವಂತೆ ತಿರುಳ್ಗನ್ನಡ ನಾಡು. ಕೊಪ್ಪಳವನ್ನು 'ವಿದಿತಮಹಾಕೊಪಣ' ಎಂದು ಕರೆದಿರುವುದು ಅಂದಿನ ಕಾಲದಲ್ಲಿ ಈ ಊರಿನ ಪ್ರಸಿದ್ಧಿ ಎಂತಹುದಿತ್ತು ಎಂಬುದನ್ನು ಹೇಳುತ್ತದೆ. ಜೊತೆಗೆ ಇಂದು ದಲಿತರಿಗೆ ಪ್ರಿಯವಾಗಿರುವ ಬೌದ್ಧಧರ್ಮ ಇಲ್ಲಿ ಪ್ರಚಲಿತವಿತ್ತು ಎಂಬುದನ್ನು ಇದುವರೆಗೆ ದಕ್ಕಿರುವ ಅಶೋಕನ ಶಾಸನಗಳು ಹೇಳುತ್ತವೆ. ಗವಿಮಠ ಮತ್ತು ಪಾಲ್ಕಿಗುಂಡಿನ ಶಾಸನಗಳು ಇದಕ್ಕೆ ಸಾಕ್ಷಿಯಾಗಿವೆ. ಮೌರ್ಯ ಸಾಮ್ರಾಜ್ಯವು ದಕ್ಷಿಣಕ್ಕೆ ವಿಸ್ತರಿಸುತ್ತಾ ಕರ್ನಾಟಕವನ್ನು ಆವರಿಸಿಕೊಂಡಿತ್ತು. ಕೊಪ್ಪಳ ಮತ್ತು ಸುತ್ತಮುತ್ತಲಿನ ಜಿಲ್ಲೆಗಳಲ್ಲಿ ಕಂಡುಬರುವ ಶಿಲಾಶಾಸನಗಳು ಅದರಲ್ಲೂ ಮುಖ್ಯವಾಗಿ ರಾಯಚೂರು ಜಿಲ್ಲೆಯ ಮಸ್ಕಿ, ಗುಲ್ಬರ್ಗ ಜಿಲ್ಲೆಯ ಸನ್ನತಿ, ಚಿತ್ರದುರ್ಗ ಜಿಲ್ಲೆಯ ಬ್ರಹ್ಮಗಿರಿ, ಸಿದ್ಧಾಪುರ, ಜಟಿಂಗರಾಮೇಶ್ವರ, ಬಳ್ಳಾರಿ ಜಿಲ್ಲೆಯ ನಿಟ್ಟೂರು ಅಶೋಕನ ಆಳ್ವಿಕೆಯನ್ನು ಸಾರಿ ಹೇಳುತ್ತಿವೆ. ಈ ಶಾಸನಗಳಲ್ಲಿ ಅಶೋಕ ಸಾಮ್ರಾಟನು ತನ್ನ ಸಾಮ್ರಾಜ್ಯದ ಜನರು ಆಚರಿಸಬೇಕಾದ ಧರ್ಮವನ್ನು ಕುರಿತು ಹೇಳಿದ್ದಾನೆನ್ನಲಾಗಿದೆ. ಬಹಳ ಮುಖ್ಯವಾಗಿ ಗಮನಿಸಬೇಕಾದ


ಮೂಡ್ನಾಕೂಡು ಚಿನ್ನಸ್ವಾಮಿ

ಅಂಶವೇನೆಂದರೆ ದೇವಾನಾಂಪ್ರಿಯನ ಆಶಯ ಕ್ಷುದ್ರ ಜನರೂ ಕೂಡ ತಮ್ಮ ಪ್ರಯತ್ನದಿಂದ ಸ್ವರ್ಗವನ್ನು ಪಡೆಯಬಹುದು ಎಂಬುದಾಗಿತ್ತು. ಕ್ರಿ.ಪೂ. ಮೂರನೇ ಶತಮಾನದಲ್ಲಿಯೇ ಸಾಮ್ರಾಟ್ ಅಶೋಕ ವೇದವಿಧಿತವಾದ ವರ್ಣಾಶ್ರಮ, ತತ್ಫಲವಾದ ಜಾತಿಪದ್ಧತಿಗಳಿಗೆ ವಜ್ರಾಘಾತವನ್ನು ನೀಡಿದ್ದ, ಅಸಮಾನತೆಯನ್ನು ಧ್ವಂಸ ಮಾಡಿದ್ದನೆಂಬುದು ಇದರಿಂದ ನಮಗೆ ತಿಳಿಯುತ್ತದೆ. ಅಷ್ಟೇ ಅಲ್ಲದೆ, ಜೈನ ಮತ್ತು ಲಿಂಗಾಯತ ಧರ್ಮಗಳಿಗೂ ಆಶ್ರಯತಾಣವಾದ ಕೊಪ್ಪಳ ಐತಿಹಾಸಿಕವಾಗಿಯೂ, ಸಾಂಸ್ಕೃತಿಕವಾಗಿಯೂ ಪ್ರಾಮುಖ್ಯತೆಯನ್ನು ಪಡೆದು ಕೊಂಡಿದೆ. ಇಂತಹ ಹೆಮ್ಮೆಯ ನಗರಿಯಲ್ಲಿ ನನಗೆ ಈ ಗೌರವ ಸಲ್ಲುತ್ತಿರುವುದು ನನ್ನ ಸಂತೋಷವನ್ನು ಹೆಚ್ಚಿಸಿದೆ.

**ದಲಿತ ಸಾಹಿತ್ಯಕ್ಕೆ ಬುನಾದಿ**

ದಲಿತ ಸಾಹಿತ್ಯಕ್ಕೆ ಬುನಾದಿ ಎಂದರೆ ಅಂಬೇಡ್ಕರ್ ಸಾಹಿತ್ಯವೇ. ೨೦ನೇ ಶತಮಾನದ ಪೂರ್ವಾರ್ಧದಲ್ಲಿ ಅಂಬೇಡ್ಕರ್‌ರವರ ಸುದೀರ್ಘ ಹೋರಾಟ ಮತ್ತು ಓದಿನ ಫಲವಾಗಿ ಅವರ ಸಿದ್ಧಾಂತಗಳು ರೂಪಿತಗೊಂಡವು. ೨೦ನೇ ಶತಮಾನದ ಉತ್ತರಾರ್ಧದಲ್ಲಿ ಭಾರತದ ಕೆಲವು ಭಾಗಗಳಲ್ಲಿ ದಲಿತ ಚಳವಳಿಗಳು ಪ್ರಾರಂಭವಾದವು. ಆ ಮೂಲಕ ದಲಿತ ಸಾಹಿತ್ಯ ಸೃಷ್ಟಿಯಾಯಿತು. ಅದು ಅಂಬೇಡ್ಕರ್ ಪ್ರಣೀತ ಸಿದ್ಧಾಂತಗಳಿಗೆ ಪೂರಕವಾಗಿಯೇ ಇತ್ತು. ಅದು ಸಹಜವಾಗಿತ್ತು. ಯಾಕೆಂದರೆ ದಲಿತ ವಿಮೋಚನೆ ಎಂದರೆ ನಾನು ಮೇಲೆ ಹೇಳಿದ ಹಾಗೆ ಬಡತನ, ಅಸ್ಪೃಶ್ಯತೆ ಮತ್ತು ಅವಮಾನಗಳ ಸಂಕೋಲೆಗಳಿಂದ ಬಿಡುಗಡೆ. ಈ ಬಿಡುಗಡೆಯ ಹಾದಿಯನ್ನು ಅಂಬೇಡ್ಕರ್ ಸಮರ್ಥವಾಗಿ, ವೈಜ್ಞಾನಿಕವಾಗಿ ತಮ್ಮ ಸಿದ್ಧಾಂತಗಳಲ್ಲಿ ನಿರೂಪಿಸಿದರು. ಆದ್ದರಿಂದ ದಲಿತ ಸಾಹಿತ್ಯದ ಆದಿ ಅಂಬೇಡ್ಕರ್ ಸಿದ್ಧಾಂತವಾದರೆ ಅಂತ್ಯವೂ ಅಂಬೇಡ್ಕರ್ ಸಿದ್ಧಾಂತವೇ ಆಗಿದೆ.

ಈ ದೃಷ್ಟಿಯಲ್ಲಿ ದಲಿತರು ಡಾ|| ಬಾಬಾಸಾಹೇಬ್ ಅಂಬೇಡ್ಕರ್ ಅವರನ್ನು ಗ್ರಹಿಸಿಕೊಳ್ಳುವುದು ಬಹಳ ಮುಖ್ಯವೆನಿಸುತ್ತದೆ. ಅವರ ಸಾಮಾಜಿಕ ಸಿಟ್ಟು ಬಡತನದ ವಿರುದ್ಧವಾಗಿತ್ತು. ದಲಿತರಿಗಾಗಿ ಪರ್ಯಾಯ ಸಂಸ್ಕೃತಿಯೊಂದರ ಹುಡುಕಾಟ ಅಸ್ಪೃಶ್ಯತೆಯ ಕಳಂಕದಿಂದ ಪಾರು ಮಾಡುವುದಾಗಿತ್ತು. ಅವರು ಪ್ರತಿಪಾದಿಸಿದ ಧರ್ಮಾಂತರ ಅವಮಾನವನ್ನು ಮೀರುವುದಕ್ಕಾಗಿತ್ತು. ಇವುಗಳನ್ನು ಸರಿಯಾಗಿ ಗ್ರಹಿಸದ ಬಹುಸಂಖ್ಯಾತ ದಲಿತರು ಅಂಬೇಡ್ಕರವರು ದೊರಕಿಸಿಕೊಟ್ಟ, ಆರ್ಥಿಕ ಸಬಲತೆಗೆ ರಹದಾರಿ ಎನಿಸಿದ, ಮೀಸಲಾತಿಯೊಂದನ್ನು ಮಾತ್ರ ಪಡೆದು ಕೊಂಡು ಇತರ ಸಿದ್ಧಾಂತಗಳಿಗೆ ಬೆನ್ನು ತಿರುಗಿಸಿದ್ದಾರೆ. ಸಂಸ್ಕೃತೀಕರಣಕ್ಕೆ ಒಳಗಾಗುವುದು, ಶ್ರೇಣೀಕೃತ ಜಾತಿ ಪದ್ಧತಿಯ ಕೆಳಹಂತದಲ್ಲಿದ್ದರೂ ಬ್ರಾಹ್ಮಣ್ಯದ ಅನುಕಂಪ ಗಿಟ್ಟಿಸಿಕೊಳ್ಳುವುದು ವಿಮೋಚನೆ ಎಂದು ತಿಳಿದು ಕೊಂಡಿದ್ದಾರೆ. ಇಂದು ದಲಿತ ಸಾಹಿತ್ಯ ಸಮೃದ್ಧವಾಗಿ ಬೆಳೆದಿದ್ದರೂ ಪುಂಖಾನುಪುಂಖವಾಗಿ ಪುಸ್ತಕಗಳು ಹೊರ ಬರುತ್ತಿದ್ದರೂ ಧರ್ಮಾಂತರದ ಮಾತಿರಲಿ, ದಲಿತರೊಳಗೆ ಒಳಪಂಗಡಗಳು ಗಟ್ಟಿಗೊಳ್ಳುತ್ತಿರುವುದು ಗೋಚರವಾಗುತ್ತಿದೆ. ಆದುದರಿಂದ ಮುಖ್ಯ ವಾಹಿನಿಯ ಸಾಹಿತ್ಯದಂತೆ ದಲಿತ ಸಾಹಿತ್ಯಕ್ಕೂ ಕ್ರಾಂತಿ ಉಂಟುಮಾಡಲು ಸಾಧ್ಯವಾಗಲಾರದು.

**ಜಾತಿವಿನಾಶ - ಅಣಕ**

ಅಂಬೇಡ್ಕರ್ ಚಾತುರ್ವರ್ಣ್ಯವನ್ನು ಅವ್ಯವಹಾರ್ಯ, ಹಾನಿಕರ ಹಾಗೂ ವ್ಯರ್ಥ ಎಂದು ಹೇಳುತ್ತಾರೆ. ವರ್ಣ ತತ್ವ ಮತ್ತು ಜಾತಿ ತತ್ವ ಮೂಲತಃ ಬೇರೆಬೇರೆಯಾಗಿ ಇರುವುದಲ್ಲದೇ ಪರಸ್ಪರ ವಿರುದ್ಧವೂ ಆಗಿವೆ ಎಂದು ನಿರ್ಣಯಿಸುತ್ತಾರೆ. ಏಕೆಂದರೆ, ''ವರ್ಣಗಳಲ್ಲಿ ಮನುಷ್ಯರಿಗೆ ಯೋಗ್ಯತೆಯನ್ನು ಆರೋಪಿಸಲಾಗಿದೆ, ಆಜನ್ಮದಿಂದ ಸಿದ್ಧವಾಗುವ ೪೦೦೦ ಜಾತಿಗಳನ್ನು ಕರಗಿಸಿ ಯೋಗ್ಯತಾನುಸಾರವಾಗಿ ಸ್ಥಾನ ನೀಡುವ ಚಾತುರ್ವರ್ಣ್ಯವನ್ನು ನೀವು ಹೇಗೆ ನಿರ್ಮಿಸುವಿರಿ,'' ಎಂದು ಕೇಳುತ್ತಾರೆ. ಆದ್ದರಿಂದ ವರ್ಣಪದ್ಧತಿಯನ್ನು ಜಾರಿಮಾಡಬೇಕಾದರೆ ಮೊದಲು ಜಾತಿಪದ್ಧತಿಯನ್ನು ನಾಶಮಾಡಬೇಕೆಂಬುದು ಅವರ ವಾದ. ಜಾತಿಪದ್ಧತಿಯ ಸಮರ್ಥನೆಗೆ ಕೆಲವರು ವಂಶಶುದ್ಧಿಯ ತತ್ವವನ್ನು ಬಳಸಿಕೊಂಡಿರುವುದನ್ನು ಅವರು ಖಂಡಿಸುತ್ತಾರೆ. ಜಗತ್ತಿನಲ್ಲಿ ಎಲ್ಲಿಯೂ ಶುದ್ಧವಂಶ ಎಂಬುದು ಉಳಿದಿಲ್ಲ, ಎಲ್ಲಾ ಕಡೆಯೂ ವಂಶಗಳು ಸಂಕರವಾಗಿ ಹೋಗಿವೆ. ವಾಸ್ತವದಲ್ಲಿ ಭಾರತದ ವಿವಿಧ ಜನಾಂಗಗಳಲ್ಲಿ ಪರಸ್ಪರ ರಕ್ತ ಸಂಬಂಧ ಹಾಗೂ ಸಂಕರಗಳು ನಡೆದುಹೋದ ಬಹಳ ಕಾಲದ ನಂತರ ಜಾತಿಪದ್ಧತಿ ಹುಟ್ಟಿತು. ಆದ್ದರಿಂದ ಜಾತಿಭೇದಗಳನ್ನು ಜನಾಂಗ ಭೇದಗಳೆಂದು ತಿಳಿಯಲು ಸಾಧ್ಯವಿಲ್ಲ. ಪಂಜಾಬದ ಬ್ರಾಹ್ಮಣನಿಗೂ ಮದ್ರಾಸಿ ಬ್ರಾಹ್ಮಣನಿಗೂ ಸಂಬಂಧವಿಲ್ಲ. ಹಾಗೆಯೇ ಬಂಗಾಳದ ಅಸ್ಪೃಶ್ಯನಿಗೂ ಮದ್ರಾಸಿ ಅಸ್ಪೃಶ್ಯನಿಗೂ ಯಾವ ವಂಶೀಯ ಸಂಬಂಧವೂ ಇಲ್ಲ ಹೀಗೆ ವಾದವು ಮುಂದುವರಿಯುತ್ತದೆ.

ಇಂದಿನ ವಿದ್ಯಮಾನಗಳನ್ನು ನೋಡಿದರೆ ಜಾತಿ ವಿನಾಶವಾಗುವ ಲಕ್ಷಣಗಳು ನಮಗೆ ಕಾಣಿಸುತ್ತಿಲ್ಲ. ಬದಲಾಗಿ ಅವು ಒಳಜಾತಿಗಳಾಗಿ ಮತ್ತಷ್ಟು ಗಟ್ಟಿಗೊಳ್ಳುತ್ತಿವೆ. ಈ ದೇಶದ ಸ್ವಾತಂತ್ರ್ಯಕ್ಕೆ ೬೫ ವರ್ಷಗಳಾಗುತ್ತ ಬಂತು. ಉದಾರವಾದಿ ಸಂಸದೀಯ ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಭಾರತ ಬದಲಾವಣೆಯನ್ನು ಕಂಡಿದೆ. ಈ ಬದಲಾವಣೆ ಕೇವಲ ಮೇಲ್ಪದರದ ಬದಲಾವಣೆ. ಈ ದೇಶದ ಆರ್ಥಿಕತೆ, ಅಷ್ಟಿಷ್ಟು ವಿಜ್ಞಾನ, ತಂತ್ರಜ್ಞಾನ ಇತ್ಯಾದಿಯ ಫಲಿತಗಳು ಮೇಲ್ವರ್ಗಕ್ಕೆ ಮಾತ್ರ ಸಂದಿವೆ ಮತ್ತು ಅವರನ್ನು ಇನ್ನಷ್ಟು ಮೇಲಕ್ಕೆತ್ತಿವೆ. ಬಂಡವಾಳಶಾಹಿ ಆರ್ಥಿಕ ನೀತಿ ಬಡವರನ್ನು, ತುಳಿಯಲ್ಪಟ್ಟವರನ್ನು, ಶೋಷಿತರನ್ನು ಸಮರ್ಪಕವಾಗಿ ಮುಟ್ಟಲು ಸಾಧ್ಯವಾಗಿಲ್ಲ, ಹೀಗಾಗಿ, ಬಡವ ಮತ್ತು ಶ್ರೀಮಂತನ ನಡುವೆ ಕಂದಕ ಹೆಚ್ಚಾಗುತ್ತಿದೆ. ದೇಶದ ಮುಕ್ತ ಆರ್ಥಿಕತೆ ವಿಶ್ವದಲ್ಲಿಯೇ ಶ್ರೀಮಂತರೆನಿಸಿಕೊಳ್ಳಬಲ್ಲ ಒಂದಷ್ಟು ಬಂಡವಾಳಶಾಹಿಗಳನ್ನು ಸೃಷ್ಟಿಸಿದೆ. ಆದರೆ ಜಾತಿಪದ್ಧತಿ ದೇಶವನ್ನು ಮಧ್ಯಕಾಲೀನ ಯುಗದಲ್ಲಿಯೇ ನಿಲ್ಲಿಸಿದೆ. ಉತ್ತರ ಭಾರತದ ಹಳ್ಳಿಗಳಲ್ಲಿ ಇಂದಿಗೂ ಖಾಪ್ ಪಂಚಾಯಿತಿಗಳು ನಡೆಯುತ್ತಿವೆ. ಅಲ್ಲಿ ಜಾತಿಯ ಹೊರಗೆ ಮದುವೆಯಾದವರನ್ನು, ಜಾತಿಕಟ್ಟಳೆಗಳನ್ನು ಮೀರುವವರನ್ನು ಕಠೋರವಾಗಿ ಶಿಕ್ಷಿಸಲಾಗುತ್ತಿದೆ, ಮರಣದಂಡನೆಯೂ ಸೇರಿದಂತೆ! ಇದನ್ನು ಸಮರ್ಥಿಸಿಕೊಂಡು ಸಂಸತ್ತಿನಲ್ಲಿ ವಾದ ಮಂಡಿಸಿದ ಸಂಸದರು ನಮ್ಮಲ್ಲಿದ್ದಾರೆ.

**ಮುಳ್ಳಿನಿಂದಲೇ ಮುಳ್ಳು ತೆಗೆಯುವ ಕೆಲಸ**

ಈಗ ಜಾತಿಗಣತಿಗೆ ಕೇಂದ್ರ ಸರ್ಕಾರವು ಅಸ್ತು ಎಂದಿದೆ. ಈ ತೀರ್ಮಾನವನ್ನು ಹಲವರು ವಿರೋಧಿಸುತ್ತಿದ್ದಾರೆ. ಯಾಕೆಂದರೆ ಯಾವ ಯಾವ ಜಾತಿಗಳಲ್ಲಿ ಎಷ್ಟು ಬಡವರು ಎಷ್ಟು ಶ್ರೀಮಂತರು ಇದ್ದಾರೆ ಎಂಬುದು ತಿಳಿದುಹೋಗುತ್ತದೆ. ಸಂಪತ್ತು ಎಲ್ಲೆಲ್ಲಿ ಕ್ರೋಡೀಕರಿಸಿದೆ ಎಂಬುದು ತಿಳಿದುಬರುತ್ತದೆ. ದಿನವೊಂದಕ್ಕೆ ಕೇವಲ ೬೦ ರೂ.ಗಳಲ್ಲಿ ಜೀವನ ನಡೆಸುವ ಶೇಕಡ ೭೦ರಷ್ಟು ಜನಸಂಖ್ಯೆ (ಅಂದರೆ ಬಡವರು ಮತ್ತು ಕೆಳವರ್ಗದವರು) ಇದಕ್ಕೆ ಹೇಗೆ ಪ್ರತಿಕ್ರಿಯಿಸುತ್ತಾರೆ ಎಂದು ಕಾದು

ನೋಡಬೇಕಾಗಿದೆ. ಇದು ಜಾತಿವಿನಾಶಕ್ಕೆ ಮಾರ್ಗ ತೋರಿಸುತ್ತದೋ ಅಥವಾ ಜಾತಿಗಳ ನಡುವೆ ಕಾದಾಟಕ್ಕೆ ಕಾರಣವಾಗುತ್ತದೋ ಎಂಬುದನ್ನು ಸಮಾಜ ಶಾಸ್ತ್ರಜ್ಞರು ಹೇಳಬೇಕಾಗಿದೆ. ಇದು ಮುಳ್ಳಿನಿಂದಲೇ ಮುಳ್ಳು ತೆಗೆಯುವ ಕೆಲಸದಂತೆ ಕಾಣುತ್ತಿದೆ. ಎಲ್ಲರಿಗಿಂತಲೂ ಹೆಚ್ಚಾಗಿ ದಲಿತರಿಗೆ ಜಾತಿವಿನಾಶ ಬೇಕಾಗಿದೆ. ಯಾಕೆಂದರೆ ಅತ್ಯಂತ ಕೆಳಸ್ತರದಲ್ಲಿರುವವರು ಜಾತಿಕಾರಣದಿಂದ ದಬ್ಬಾಳಿಕೆಗೆ ಗುರಿಯಾಗಿದ್ದಾರೆ. ದಬ್ಬಾಳಿಕೆ ಮತ್ತು ದೌರ್ಜನ್ಯಗಳಿಂದ ಹೊರಬರಬೇಕಾದರೆ ಜಾತಿಯಿಂದ ಹೊರಬರಬೇಕು.

**ಸಾಮಾಜಿಕ ನ್ಯಾಯ**

ನಾನು ಆಗಲೇ ಹೇಳಿದಂತೆ ದಲಿತ ಸಾಹಿತ್ಯಕ್ಕೆ ಮೂಲಧಾತು ಅಂಬೇಡ್ಕರ್ ಸಾಹಿತ್ಯವೇ. ಅಂಬೇಡ್ಕರ್ ಬದುಕು ಮತ್ತು ಬರಹಗಳು ಸಾಮಾಜಿಕ ನ್ಯಾಯಕ್ಕಾಗಿ ತುಡಿಯುತ್ತಿವೆ. ಸೃಜನಶೀಲತೆಯ ಹಂತದಲ್ಲಿ ದಲಿತ ಸಾಹಿತ್ಯವು ಸಾಮಾಜಿಕ ನ್ಯಾಯವನ್ನೇ ಪ್ರತಿಪಾದಿಸ ಬೇಕಾಗುತ್ತದೆ. ಕಲೆಯ ನೆಪದಲ್ಲಿ ಬೆತ್ತಲೆಸೇವೆಯನ್ನು ಯಾರೂ ಮಾಡಕೂಡದು. ಈ ದೇಶದ ವಿಚಿತ್ರ ಹಾಗೂ ವಿಕೃತ ದರ್ಶನವಾದ ಜಾತಿಪದ್ಧತಿ ಸೃಷ್ಟಿಸಿರುವ ಅಸಮಾನತೆ ಮತ್ತು ಅಪನ್ಯಾಯಗಳನ್ನು ದಲಿತ ಸಾಹಿತಿಗಳು ಸಾತ್ವಿಕ ಮಂಡನೆಯಿಂದ ಮಣಿಸಬೇಕಾಗಿದೆ; ಅಸಮಾನತೆ ಮತ್ತು ಅಪನ್ಯಾಯ ಮೌಲ್ಯಗಳಲ್ಲ, ಅವು ಅಪಮೌಲ್ಯಗಳು ಎಂದು ಸಾಬೀತುಪಡಿಸಬೇಕಾಗಿದೆ. ಈ ನಿಟ್ಟಿನಲ್ಲಿ ನಮ್ಮ ಸಾಹಿತಿಗಳು ಈಗಾಗಲೇ ಕಂಕಣಬದ್ಧರಾಗಿ ದುಡಿಯು ತ್ತಿದ್ದಾರೆ. ನನಗೆ ಹೊಸ ತಲೆಮಾರಿನ ಲೇಖಕರ ಮೇಲೆ ಅಪಾರವಾದ ನಂಬಿಕೆ ಇದೆ. ಅವರಲ್ಲನೇಕರು ಸಮಾಜದ ಆಳದಲ್ಲಿ ಹುದುಗಿರುವ ಅತಿಸೂಕ್ಷ್ಮಗಳನ್ನು ಅರಿತುಕೊಂಡು ಬರೆಯಬಲ್ಲವರಾಗಿದ್ದಾರೆ. ಕನ್ನಡವೂ ಸೇರಿದಂತೆ ಭಾರತದ ಅನೇಕ ಭಾಷೆಗಳಲ್ಲಿ ಒಳ್ಳೆಯ ಕೃತಿಗಳು ಬರುತ್ತಿವೆ. ಈ ಸಮಾನ ಮನಸ್ಕ ಸಾಹಿತ್ಯವನ್ನು ಅನುವಾದಗಳ ಮೂಲಕ ಅಂತರ್ವಿನಿಮಯ ಮಾಡಿಕೊಂಡು ದಲಿತ ಸಾಹಿತ್ಯದ ಪರಿಧಿಯನ್ನು ನಾವು ಹಿಗ್ಗಿಸಿಕೊಳ್ಳಬೇಕಾಗಿದೆ.

**ಅಸ್ಪೃಶ್ಯತೆಯ ವಿರುದ್ಧ ಆಂದೋಳನ**

ಇತ್ತೀಚೆಗೆ ಭ್ರಷ್ಟಾಚಾರದ ವಿರುದ್ಧ ಆಂದೋಳನಗಳು ಪೈಪೋಟಿಯಲ್ಲಿ ಶುರುವಾಗಿವೆ. ಅದು ಸ್ವಾಗತಾರ್ಹವೇ. ಅಷ್ಟೇ ಅಪಾಯಕಾರಿಯಾದ ಅಮಾನವೀಯವಾದ ಅಸ್ಪೃಶ್ಯತೆ ಈ ದೇಶದಲ್ಲಿ ಇನ್ನೂ ಜೀವಂತವಾಗಿದೆ. ಆದ್ದರಿಂದ ಅಸ್ಪೃಶ್ಯತೆಯನ್ನು ತೊಡೆದುಹಾಕಲು ಅಂತಹ ಒಂದು ಆಂದೋಳನವೇ ಪ್ರಾರಂಭವಾಗಬೇಕಾಗಿದೆ. ಭಾರತದ ಕುರೂಪಕ್ಕೆ ಮೂಡಿರುವ ಎರಡು ಕೋಡು ಗಳೆಂದರೆ ಭ್ರಷ್ಟಾಚಾರ ಮತ್ತು ಅಸ್ಪೃಶ್ಯತೆ. ಈ ಕಳಂಕದ ವಿನಾಶಕ್ಕಾಗಿ ಉಪವಾಸ ಸತ್ಯಾಗ್ರಹ ಹೂಡಬಲ್ಲ ಅಣ್ಣಾ ಹಜಾರೆಯವರಂತಹ ಒಬ್ಬ ನಾಯಕ ಉದಯಿಸ ಬೇಕಾಗಿದೆ. ಭ್ರಷ್ಟಾಚಾರದಿಂದ ದೇಶದ ಭೌತಿಕ ಅಭಿವೃದ್ಧಿ ಶಿಥಿಲಗೊಳ್ಳುತ್ತದೆ, ಅಸ್ಪೃಶ್ಯತೆ ದೇಶದ ನೈತಿಕ ಬಲವನ್ನು ನಾಶಮಾಡುತ್ತದೆ, ಮಾನಸಿಕ ಅಭಿವೃದ್ಧಿಯನ್ನು ಕುಂಠಿತ ಗೊಳಿಸುತ್ತದೆ. ದೇಶ ಹೃದಯವೈಶಾಲ್ಯವುಳ್ಳ ವ್ಯಕ್ತಿತ್ವಗಳನ್ನು ಸೃಷ್ಟಿಸುವುದರಲ್ಲಿ ಸೋಲುತ್ತದೆ. ಭಾರತ ಇತರ ದೇಶಗಳ ಎದುರು ತಲೆತಗ್ಗಿಸಬೇಕಾಗುತ್ತದೆ. ''ನಿಮ್ಮ ದೇಶದಲ್ಲಿ ಮನುಷ್ಯರನ್ನು ಇಷ್ಟು ಹೀನಾಯವಾಗಿ ಕಾಣಲಾಗುತ್ತದೆ.

• ಬದಲಾವಣೆ




ಮಾನವ ಹಕ್ಕುಗಳಿಗೆ ಅಲ್ಲಿ ಅಸ್ತಿತ್ವವೇ ಇಲ್ಲ'', ಎಂದು ಹೆರವರು ನಮ್ಮನ್ನು ಮೂದಲಿಸುವಂತಾಗಿದೆ.

ಇಲ್ಲಿ ಅಂಬೇಡ್ಕರ್‌ರವರ ಈ ಮಾತುಗಳನ್ನು ಉಲ್ಲೇಖಿಸಲು ಇಚ್ಛಿಸುತ್ತೇನೆ : ''ಜಾತಿಯಿಂದ ಹಿಂದುಗಳ ನೀತಿ ಶೋಚನೀಯ ಅವಸ್ಥೆಗೆ ತಲುಪಿದೆ. ಜಾತಿ ಸಾರ್ವಜನಿಕ ಭಾವನೆಯನ್ನು ನಾಶಗೊಳಿಸಿದೆ; ಹೃದಯ ವೈಶಾಲ್ಯವನ್ನು ಹಾಳುಮಾಡಿದೆ; ಸಾರ್ವಜನಿಕ ಅಭಿಪ್ರಾಯ ಗಳಿಗೆ ಅವಕಾಶವಿಲ್ಲದಂತೆ ಮಾಡಿದೆ. ಹಿಂದುವಿನ ಸಮಾಜ ಅವನ ಜಾತಿಗೆ ಸೀಮಿತವಾದದ್ದು. ಸದ್ಗುಣ ಹಾಗೂ ನೀತಿ ಎರಡೂ ಜಾತೀಯತೆಯ ಮುಷ್ಟಿಯಲ್ಲಿ ಸಿಕ್ಕಿಕೊಂಡಿವೆ. ಸಹಾನುಭೂತಿ ಯಾರಿಗೆ ಆವಶ್ಯಕವೋ ಅವನಿಗೆ ಅದು ಸಿಕ್ಕುತ್ತಿಲ್ಲ. ಶ್ಲಾಘ್ಯತೆ ದೊರೆಯಬೇಕಾದವರಿಗೆ ಅದು ದೊರೆಯುತ್ತಿಲ್ಲ. ದಾನಧರ್ಮಗಳನ್ನು ಬೇಡುವವರಿದ್ದಾರೆ; ಅವರಿಗೆ ಕೊಡುವವರೆ ಇಲ್ಲ. ದಯಾದಾನವಿಲ್ಲ ವೆಂದೇನೂ ಅಲ್ಲ. ಆದರೆ ಅದು ಜಾತಿಯನ್ನು ದಾಟಿ ಹೋಗಲಾರದು. ಸಹಾನುಭೂತಿ ತಮ್ಮ ಜಾತಿಯವರಿಗೆ ಉಂಟು; ಇತರರಿಗೆ ಇಲ್ಲ. ಸದ್ಗುಣಿಯಾದ ಮಹಾಪುರುಷ ನೊಬ್ಬನು ನೇಕಾರನಾಗಿ ಬಂದರೆ ಹಿಂದುವು ಅವನನ್ನು ಅನುಸರಿಸುವನೆ ? ಆತನು ಮಹಾತ್ಮನೇ ಆಗಿರಲಿ, ಅವನನ್ನು ಮುಂದಾಳೆಂದು ಒಪ್ಪಿಕೊಳ್ಳಬೇಕಾದರೆ ಅವನು ತಮ್ಮ ಜಾತಿಯವನೇ ಆಗಿರತಕ್ಕದ್ದು. ಮುಂದಾಳು ಬ್ರಾಹ್ಮಣ ನಾಗಿದ್ದರೆ ಮಾತ್ರ ಬ್ರಾಹ್ಮಣರು ಅವನ ಅನುಯಾಯಿ ಗಳಾಗುತ್ತಾರೆ. ಕ್ಷತ್ರಿಯನು ಮುಂದಾಳಾದರೆ ಮಾತ್ರ ಕ್ಷತ್ರಿಯರು ಅವನ ಅನುಯಾಯಿಗಳಾಗುತ್ತಾರೆ. ಇತರ ಜಾತಿಗಳಿಗೂ ಈ ಮಾತು ಅನ್ವಯಿಸುತ್ತದೆ. ಒಬ್ಬ ಮನುಷ್ಯನ ಜಾತಿ ಯಾವುದೇ ಇರಲಿ, ಅವನ ಯೋಗ್ಯತೆಯನ್ನು ಮನ್ನಿಸಬೇಕೆಂಬ ಬುದ್ಧಿ ಅಥವಾ ಹಾಗೆ ಮಾಡುವ ಧೈರ್ಯ ಹಿಂದುವಿಗೆ ಇಲ್ಲ. ತಮ್ಮ ಜಾತಿಯವನಾದರೆ ಮಾತ್ರ ಅವನನ್ನು ಮನ್ನಿಸುತ್ತಾನೆ. ಅನಾಗರಿಕ ಜನರ ಗುಂಪಿನ ನೀತಿ ಎಷ್ಟು ಸಂಕುಚಿತವೋ ಅಷ್ಟು ಸಂಕುಚಿತವಾಗಿದೆ ಜಾತಿಯ ನೀತಿ. ಸರಿಯಿರಲಿ, ತಪ್ಪಿರಲಿ ತನ್ನ ಜಾತಿ ಮುಖ್ಯ; ಸಜ್ಜನನೊ, ದುರ್ಜನನೊ ತಮ್ಮ ಜಾತಿಯವನೆಂಬುದು ಮುಖ್ಯ. ಹೀಗೆ ತಂತಮ್ಮ ಜಾತಿಯ ಹಿತವನ್ನೇ ನೋಡಿ ಕೊಳ್ಳುತ್ತ ಹಿಂದುಗಳು ದೇಶಕ್ಕೆ ದ್ರೋಹ ಬಗೆದಿಲ್ಲವೆ ?'' (ಡಾ॥ ಬಿ. ಆರ್. ಅಂಬೇಡ್ಕರರ ಜಾತಿಮೀಮಾಂಸೆ - ಅನು : ಡಾ॥ ಕಮಲಾ ಹಂಪನಾ).

ಈ ಮಾತುಗಳು ಇವತ್ತಿಗೂ ಪ್ರಸ್ತುತವೆನಿಸಿ ಕಠೋರ ಸತ್ಯವನ್ನು ಹೇಳುತ್ತಿವೆ. ಎಲ್ಲ ದೇಶಗಳಲ್ಲೂ ಭ್ರಷ್ಟಾಚಾರ ಇದೆ. ಆದರೆ ಇಲ್ಲಿನ ಭ್ರಷ್ಟಾಚಾರ ಬ್ರಹ್ಮರಾಕ್ಷಸನಂತೆ ಬೆಳೆಯಲು ಜಾತಿ ಪದ್ಧತಿಯೂ ಕಾರಣ. ಆದ್ದರಿಂದ ಒಂದನ್ನು ಹೊರತುಪಡಿಸಿ ಇನ್ನೊಂದರ ವಿರುದ್ಧ ಹೋರಾಡುವುದು ಕೆಸರಿನೊಳಗೆ ಕಾಲಿಟ್ಟು ತಲೆಯ ಮೇಲಿನ ಕೆಸರನ್ನು ಸ್ವಚ್ಛ ಮಾಡಿಕೊಂಡಂತೆ ಕಾಣುತ್ತದೆ. ಮತ್ತೆ ಕಾಲು ತೊಳೆದುಕೊಳ್ಳುವವರೆಗೆ ತಲೆಗೆ ಕೆಸರಾಗಿ ರುತ್ತದೆ. ''ಅಸ್ಪೃಶ್ಯತೆಗೆ ಮಾನ್ಯತೆ ನೀಡಿ ಹಿಂದು ಧರ್ಮವು ಪಾಪಕೃತ್ಯ ಎಸಗಿದೆ'', ಎಂದು ಗಾಂಧೀಜಿ ವಿಷಾದಿಸುತ್ತಾರೆ. ಇಂದು ಅವರು ಬದುಕಿದ್ದಿದ್ದರೆ ಅಸ್ಪೃಶ್ಯತೆ ವಿರುದ್ಧ ಉಪವಾಸ ಕೂರುತ್ತಿದ್ದರು ಎಂಬುದರಲ್ಲಿ ಅನುಮಾನವೇ ಇಲ್ಲ.

ನಮ್ಮ ದೇಶದಲ್ಲಿಯೆ ಕೇರಳ ಸಂಪೂರ್ಣ ಸಾಕ್ಷರತೆ ಹೊಂದಿದ ರಾಜ್ಯವೆನಿಸಿಕೊಂಡಿದೆ. ಅಲ್ಲಿ ಹಿಂದು, ಕ್ರೈಸ್ತ, ಮುಸಲ್ಮಾನರು ಹೆಚ್ಚೂಕಡಿಮೆ ಸಮಸಂಖ್ಯೆಯಲ್ಲಿದ್ದಾರೆ. ಅಲ್ಲಿ ನಡೆದ ಒಂದು ಘಟನೆ ತೀರಾ ಅಸಹ್ಯ ಹುಟ್ಟಿಸು ವಂತಿದೆ. ದಿನಾಂಕ ೩೧-೩-೨೦೧೧ರಲ್ಲಿ ಪರಿಶಿಷ್ಟ ಜಾತಿಗೆ ಸೇರಿದ ಅಲ್ಲಿನ ಸರ್ಕಾರದ ಇಲಾಖಾ ಮುಖ್ಯಸ್ಥರೊಬ್ಬರು ನಿವೃತ್ತಿ ಹೊಂದಿದರು. ಸುಮಾರು ಏಳು ವರ್ಷಗಳ ಕಾಲ ಅವರು ನೋಂದಣಿ ಮಹಾ ನಿರ್ದೇಶಕರಾಗಿ ಕೆಲಸ ಮಾಡಿ ನಿವೃತ್ತರಾದರು. ನಿವೃತ್ತಿಯ ಮರುದಿನ ಅವರು ಉಪಯೋಗಿಸಿದ ಚೇಂಬರನ್ನು, ಪೀಠೋಪಕರಣ ಗಳನ್ನು ಅಲ್ಲಿನ ಸಿಬ್ಬಂದಿ ಸಗಣಿ, ಗಂಜಲ ಪೂಸಿಸಿ ಶುದ್ಧೀಕರಿಸಿದ್ದಾರೆ. ಅಷ್ಟೇ ಅಲ್ಲ, ಅವರು ಉಪಯೋಗಿ ಸುತ್ತಿದ್ದ ಕಾರಿಗೂ ಶುದ್ಧೀಕರಣವಾಗಿದೆ. ಎ. ಕೆ. ರಾಮಕೃಷ್ಣನ್ ಎಂಬ ಆ ದಲಿತ ಅಧಿಕಾರಿ ಮಾನವ ಹಕ್ಕುಗಳ ಆಯೋಗಕ್ಕೆ ಈ ಕುರಿತು ದೂರು ಸಲ್ಲಿಸಿದ್ದಾರೆ.

ಇನ್ನೊಂದು ವಿಚಿತ್ರ ಘಟನೆ ಕರ್ನಾಟಕದ ಮಂಡ್ಯ ಜಿಲ್ಲೆಯ ಹೊಸಪುರದಲ್ಲಿ ನಡೆದಿದೆ. ಗ್ರಾಮದೇವತೆಯ ಹಬ್ಬದ ದಿನ ಸವರ್ಣೀಯರ ಕೇರಿಯಲ್ಲಿ ನೀರಿನ ಪೈಪು ಒಡೆದಿದೆ. ಅಲ್ಲಿನ ಬಿಲ್ ಕಲೆಕ್ಟರ್ ತತ್‌ಕ್ಷಣಕ್ಕೆ ಸಿಕ್ಕಿದ ವಾಟರ್‌ಮನ್‌ನನ್ನು ಕರೆತಂದು ರಿಪೇರಿ ಮಾಡಿಸಿದ್ದಾರೆ. ವಾಟರ್‌ಮನ್ ದಲಿತನಾಗಿದ್ದನೆನ್ನುವುದು ಸವರ್ಣೀಯ ಯುವಕರಿಗೆ ನುಂಗಲಾರದ ಕೆಂಡವಾಯಿತು. ದಲಿತ ಮುಟ್ಟಿದ ನೀರು ಮನೆಯೊಳಗೆ ಬರುವ ನಲ್ಲಿಯಲ್ಲಿ ಹರಿಯುವುದೆಂದರೇನು! ನೀರು ಮೈಲಿಗೆಯಾಗುವು ದಿಲ್ಲವೆ ? ಕರೆತಂದವನನ್ನೂ, ರಿಪೇರಿ ಮಾಡಿದವನನ್ನೂ ಹಿಡಿದು ಚೆನ್ನಾಗಿ ಥಳಿಸಿದರು. ಪುಂಡರ ನಡುವಿನ ಘರ್ಷಣೆ ಕಿಚ್ಚಾಯಿತು, ಕೇರಿಗಳಿಗೆ ವ್ಯಾಪಿಸಿತು. ಹಬ್ಬದ ಸಂಭ್ರಮ ಹಾಳಾಯಿತು. ಈ ವೈಷಮ್ಯ ಇನ್ನೆಷ್ಟು ವರ್ಷ ಹಳ್ಳಿಯನ್ನು ಕಾಡುತ್ತದೆಯೋ ?

ಈ ಘಟನೆಗಳನ್ನು ಯಾಕೆ ಹೇಳಬೇಕಾಯಿತೆಂದರೆ ಅಂಬೇಡ್ಕರ್ ಬಾಲಕನಾಗಿದ್ದಾಗ ಅನುಭವಿಸಿದ ಜಾತಿ

ನಿಂದನೆ, ಅಸ್ಪೃಶ್ಯತೆಯ ಆಚರಣೆ ಅಷ್ಟೇ ಹಸಿಹಸಿಯಾಗಿ ಈಗಲೂ ವ್ಯಕ್ತಗೊಳ್ಳುತ್ತಿದೆ. ಇದೆಂಥ ಸೋಜಿಗ! ಅಂಬೇಡ್ಕರ್ ತಮ್ಮ ಬಾಲ್ಯದಲ್ಲಿ ಶಾಲೆ ಕಲಿಯುವಾಗ ತರಗತಿಯ ಮೂಲೆಯಲ್ಲಿ ಬೇರೆಯಾಗಿ ಕೂರಬೇಕಾಗಿತ್ತು. ಉಪಾಧ್ಯಾಯರು ಅವರ ಪುಸ್ತಕಗಳನ್ನು ಮುಟ್ಟುತ್ತಿರಲಿಲ್ಲ. ಸವರ್ಣೀಯ ಹುಡುಗರಂತೆ ನೀರು ಕುಡಿಯಲಾಗುತ್ತಿರಲಿಲ್ಲ ಎಂದೆಲ್ಲಾ ಓದಿದ್ದೇವೆ. ಸುಮಾರು ಕಾಲು ಶತಮಾನಗಳ ನಂತರ ಅದೇ ಅಂಬೇಡ್ಕರ್ ನಿಮ್ನ ವರ್ಗಗಳ ನೇತಾರನಾಗಿ, ನಿಮ್ನ ವರ್ಗಗಳ ಆರ್ಥಿಕ ಮತ್ತು ಸಾಮಾಜಿಕ ಸ್ಥಿತಿಗತಿಗಳನ್ನು ಪರಿಶೀಲಿಸಿ ವರದಿ ನೀಡಲು ಅಂದಿನ ಬಾಂಬೆ ಪ್ರೆಸಿಡೆನ್ಸಿ ನೇಮಿಸಿದ್ದ ಸಮಿತಿಯ ಪ್ರತಿನಿಧಿಯಾಗಿ ಬೆಳಗಾಂ, ಖಾಂದೇಶ್ ಮತ್ತು ನಾಸಿಕ್ ಜಿಲ್ಲೆಗಳಿಗೆ ಭೇಟಿ ನೀಡುತ್ತಾರೆ. ಆಗ ಅವರ ಅನುಭವಕ್ಕೆ ಬಂದ ಘಟನೆಗಳು ಹೀಗಿವೆ.

ಪೂರ್ವ ಖಾಂದೇಶ್ ಜಿಲ್ಲೆಯ ಹಳ್ಳಿಯೊಂದರಲ್ಲಿ ಪೋಷಕರೊಬ್ಬರು ತಮ್ಮ ಹುಡುಗನನ್ನು ತರಗತಿಯ ಒಳಗಡೆ ಕೂರಿಸದೆ ವೆರಾಂಡದಲ್ಲಿ ಕೂರಿಸುತ್ತಾರೆ ಎಂದು ದೂರಿತ್ತಿದ್ದರು. ಅದನ್ನು ಪರಿಶೀಲಿಸಲು ಹೋದ ಅಂಬೇಡ್ಕರರನ್ನು ಸ್ಥಳೀಯ ಪ್ರಾಥಮಿಕ ಶಾಲೆಯ ಮುಖ್ಯೋಪಾಧ್ಯಾಯ ತರಗತಿಯೊಳಗೆ ಪ್ರವೇಶಿಸಲು ಬಿಡಲೇಇಲ್ಲ.

ಅದೇ ಸಮಿತಿಯ ಪರ್ಯಟನೆಯಲ್ಲಿ ನಡೆದ ಇನ್ನೊಂದು ಘಟನೆ : ಚಾಲೀಸ್‌ಗಾಂವ್ ಎಂಬ ಹಳ್ಳಿಯನ್ನು ತಲುಪಿದಾಗ ಅಲ್ಲಿನ ದಲಿತರು ಅಂಬೇಡ್ಕರ್ ಅವರಿಗೆ ಭರ್ಜರಿ ಸ್ವಾಗತವನ್ನು ನೀಡಿ ತಮ್ಮ ಕೇರಿಗೆ ಭೇಟಿ ನೀಡಲು ಆಹ್ವಾನಿಸುತ್ತಾರೆ. ಆದರೆ ಅಲ್ಲಿನ ಟಾಂಗಾ ಚಾಲಕರು ಈ ಅಸ್ಪೃಶ್ಯ ನಾಯಕನನ್ನು ಹೊತ್ತೊಯ್ಯಲು ನಿರಾಕರಿಸುತ್ತಾರೆ. ಒಬ್ಬ ಮಾತ್ರ ಆ ಊರಿನ ಅಸ್ಪೃಶ್ಯನೊಬ್ಬನಿಗೆ ಟಾಂಗಾ ಓಡಿಸಲು ಕೊಡುತ್ತಾನೆ. ಅನನುಭವಿ ಸಾರಥಿಗೆ ಕುದುರೆ ಸೆಡ್ಡು ಹೊಡೆದ ಕಾರಣ ಟಾಂಗಾ ಮೊಗಚುತ್ತದೆ. ಅಂಬೇಡ್ಕರ್ ಕಲ್ಲು ದಾರಿಯ ಮೇಲೆ ಬೀಳುತ್ತಾರೆ, ತೀವ್ರ ಪೆಟ್ಟಾಗುತ್ತದೆ. ಬಲಗಾಲಿನ ಮೂಳೆ ಮುರಿದು ಒಂದು ತಿಂಗಳ ಕಾಲ ಕೋಲು ಹಿಡಿದು ನಡೆಯುವ ಸ್ಥಿತಿಯಲ್ಲಿ ಇರುತ್ತಾರೆ. ಅಂಬೇಡ್ಕರ್ ಅನುಭವಿಸಿದ ಇಂಥ ಅವಮಾನಗಳೆಷ್ಟೋ. ಆದ್ದರಿಂದಲೇ ಅವರು ಜಾತಿ ನಿರ್ಮೂಲನದ ಆಂದೋಳನಕ್ಕೆ ಕರೆಕೊಟ್ಟರು. ಅಸ್ಪೃಶ್ಯರ ಮುಂದಾಳತ್ವದಲ್ಲಿ ಅದು ಸಾಧ್ಯವಾಗುವುದಿಲ್ಲವೆಂಬ ವಿಚಾರವನ್ನು ಮನಗಂಡು ಜಾತಿಧರ್ಮವನ್ನೇ ತಿರಸ್ಕರಿಸಿ, ಹೊರ ಬಂದರು. ಇಂಥ ಘಟನೆಗಳು ಈಗಲೂ ಮರುಕಳಿಸುತ್ತಿವೆಯಲ್ಲವೆ ? ಕಾರಣಗಳೇನು ? ಆದ್ದರಿಂದಲೇ ಅಂಬೇಡ್ಕರ್ ''ಅಜ್ಞಾನಿಯನ್ನು ಅಜ್ಞಾನಿಯಾಗಿರಲು ಮತ್ತು ಬಡವನು ಬಡವನಾಗಿಯೇ ಇರಲು ನಿರ್ಬಂಧಿಸುವ ಧರ್ಮವು ಧರ್ಮವಲ್ಲ, ಅದು ಒಂದು ಪೀಡೆ,'' ಎಂದು ನೇರವಾಗಿಯೇ ದಾಳಿಯಿಡುತ್ತಾರೆ.

**ಯಥಾಸ್ಥಿತಿಯ ಮುಂದುವರಿಕೆ**

ಪರಿಸ್ಥಿತಿ ಈಗ ಬಹಳ ಸುಧಾರಿಸಿದೆ ಎನ್ನುವವರಿಗೇನು ಕಡಿಮೆ ಇಲ್ಲ. ದಲಿತರ ನಡುವೆಯೂ ಈ ಭಾವನೆ ಇದೆ. ಆ ಕಾಲದಲ್ಲಿಯೂ ಅಂಬೇಡ್ಕರ್ ಎಂಬ ಹೆಸರಿನ ಉಪಾಧ್ಯಾಯರಿದ್ದರು. ನಾಲ್ವಡಿ ಕೃಷ್ಣರಾಜ ಒಡೆಯರ್ ಇದ್ದರು, ಶಾಹು ಮಹಾರಾಜರಿದ್ದರು, ಸುಧಾರಕ ಮನಸ್ಸುಗಳು ಅನೇಕವಿದ್ದುವು. ಈಗಲೂ ಅಂಥ ಮನಸ್ಸುಗಳಿವೆ. ಆದರೆ ಒಟ್ಟಾರೆ ಸಮಾಜದ ಮನಸ್ಸು ಬದಲಾದಂತೆ ಕಾಣಿಸುತ್ತದೆಯೇ ? ಸಂವಿಧಾನದತ್ತವಾದ ಸರ್ಕಾರ ಹಿಡಿದ ಕಾನೂನಿನ ಬಾರುಕೋಲು ಕ್ರಿಯಾಶೀಲವಾದಾಗ ಹೊರ ನೋಟಕ್ಕಾದರೂ ಅಷ್ಟಿಷ್ಟು ಸುಧಾರಿಸಿದಂತೆ ಕಾಣಿಸುತ್ತದೆ. ಈ ದೇಶ ಸತ್ತಿಲ್ಲ, ಕೊಳೆಯುತ್ತಿದೆ ಎಂದು ಯಾರೋ ಹೇಳಿದ್ದಾರೆ.

ನಮ್ಮ ದೇಶಕ್ಕೆ ಎರಡು ಸಂವಿಧಾನಗಳಿವೆ. ಇದನ್ನು ಈಗಾಗಲೇ ನಾನು ಒಂದುಕಡೆ ಬರೆದಿದ್ದೇನೆ. ಒಂದು ಅಂಬೇಡ್ಕರ್ ಪ್ರಣೀತ ಲಿಖಿತ ಸಂವಿಧಾನ, ಇನ್ನೊಂದು ಮನು ಪ್ರಣೀತ ಅಲಿಖಿತ ಸಂವಿಧಾನ. ಲಿಖಿತ ಸಂವಿಧಾನ ಸ್ವಾತಂತ್ರ್ಯ, ಸಮಾನತೆ, ಭ್ರಾತೃತ್ವವನ್ನು ಹೇಳುತ್ತದೆ. ಅಲಿಖಿತ ಸಂವಿಧಾನ ಮೇಲು, ಕೀಳು, ದಾಸ್ಯ, ಅಸ್ಪೃಶ್ಯತೆ ಇತ್ಯಾದಿ ತಾರತಮ್ಯಗಳನ್ನು ಹೇಳುತ್ತದೆ. ಅಂಬೇಡ್ಕರ್ ವಿರಚಿತ ಸಂವಿಧಾನ ಆಡಳಿತ ಪ್ರಧಾನವಾದದ್ದು, ಮನುವಿರಚಿತ ಸಂವಿಧಾನ ಸಂಸ್ಕೃತಿ ಪ್ರಧಾನವಾದದ್ದು. ನಮ್ಮ ಅಂತರಂಗದ ಬದುಕನ್ನು ಕಟ್ಟಿಕೊಡುವುದು ಸಂಸ್ಕೃತಿಯೆ. ನಮ್ಮ ಬಹಿರಂಗದ ಬದುಕಿಗೆ ದಾರಿ ತೋರುವುದು, ನಿರ್ಬಂಧ ಹೇರುವುದು ಆಡಳಿತ. ನಮ್ಮ ದೇಶದ ಹಳ್ಳಿ ಹಳ್ಳಿಗಳಲ್ಲಿ ಜನಜೀವನ ಜಾತಿನಿರ್ದೇಶಿತ ಸಂಸ್ಕೃತಿ ಎಂಬುದು ನಿರ್ವಿವಾದ ಸಂಗತಿ. ಪ್ರಜಾಪ್ರಭುತ್ವವಾದೀ ಆಡಳಿತಕ್ಕೂ ಮತ್ತು ದಾಸ್ಯವಾದೀ ಜಾತಿಪದ್ಧತಿಗೂ ಹೊಂದಾಣಿಕೆ ಸಾಧ್ಯವಿಲ್ಲ. ಆದ್ದರಿಂದಲೇ ಸದಾ ಘರ್ಷಣೆ. ಅಧಿಕೃತ ಸಂವಿಧಾನಾತ್ಮಕ ಆಡಳಿತಕ್ಕೆ ತಲೆನೋವು.

ಸಂಸ್ಕೃತಿಗೆ ಹಲವು ಆಯಾಮಗಳಿವೆ. ಸಾಮಾಜಿಕ, ಧಾರ್ಮಿಕ ಇತ್ಯಾದಿ. ಸಮಾಜ ಚಲನಶೀಲವಾಗಿರುವಾಗ ಸಂಸ್ಕೃತಿ ನಿಂತ ನೀರಾಗುವುದಿಲ್ಲ. ಬದಲಾವಣೆಗೊಳಪಡುತ್ತದೆ. ಇದೇ ನಮ್ಮ ಸಂಸ್ಕೃತಿ ಎನ್ನುವುದು ಮೂರ್ಖತನ. ಇತಿಹಾಸವನ್ನು ತೆರೆದು ನೋಡಿದರೆ ಆಯಾ ಕಾಲಘಟ್ಟಗಳಲ್ಲಿ, ಆಯಾ ಭೂ ಪ್ರದೇಶಗಳಲ್ಲಿ ಬೇರೆ ಬೇರೆ ಸಂಸ್ಕೃತಿ ಚಹರೆಗಳನ್ನು ಕಾಣಲು ಸಾಧ್ಯ. ಬುದ್ಧ, ಬಸವ, ಅಂಬೇಡ್ಕರ್ ಈ ಮೂವರು ಸಂಸ್ಕೃತಿಯನ್ನು ಸಾಮಾಜಿಕ ಆಯಾಮದಿಂದ ಗ್ರಹಿಸಿದವರು, ಅರ್ಥೈಸಿದವರು. ಆದ್ದರಿಂದಲೇ ಅವರು ನಮಗೆ ಇಂದು ಹೆಚ್ಚು ಪ್ರಸ್ತುತರು. ಸಂಸ್ಕೃತಿಯನ್ನು ಧಾರ್ಮಿಕ ಆಯಾಮದಿಂದ ನೋಡಿದಾಗ ಕೇರಳದಲ್ಲಿ ನಡೆದಂತಹ ಘಟನೆಗಳು ಸಂಭವಿಸುತ್ತವೆ. ಮನುಷ್ಯನನ್ನು ಬೇರ್ಪಡಿಸುವ, ಏಕಾಂಗಿಯನ್ನಾಗಿಸುವ, ಅವಹೇಳನ ಮಾಡುವ ಸ್ವಾಭಿಮಾನವನ್ನು ಖಿಲಗೊಳಿಸುವ ಈ ಜಾತಿಪದ್ಧತಿ ಇರುವ ದೇಶದಲ್ಲಿ ಈ ಮಹನೀಯರು ಬರದಿದ್ದರೆ ಏನಾಗುತ್ತಿತ್ತು – ಊಹಿಸಲಸಾಧ್ಯ.

**ಉಪಸಂಹಾರ**

ಸಾಹಿತ್ಯದ ಬಹುಮುಖ್ಯ ಜವಾಬ್ದಾರಿ ಎಂದರೆ ಸಮಾಜದ, ಜನವರ್ಗದ ವೈಚಾರಿಕ ದಿಕ್ಕನ್ನು ನಿಯಂತ್ರಿಸುವುದು ಅಥವಾ ಬದಲಿಸುವುದು. ಅಂತಹ ಕೆಲಸವನ್ನು ದಲಿತ ಸಾಹಿತ್ಯ ಮಾಡುತ್ತ ಬಂದಿದೆ. ಸಂಪ್ರದಾಯಯುಕ್ತ ಹಿಂದೂ ಸಮಾಜ ಈಗ ದಲಿತರನ್ನು ನೋಡುವ ದೃಷ್ಟಿಕೋನವೇ ಬೇರೆಯಾಗಿದೆ. ಅಂದರೆ ದಲಿತರು ತಮ್ಮ ಅಸ್ತಿತ್ವವನ್ನು ಕಂಡುಕೊಂಡಿದ್ದಾರೆ. ತಮ್ಮ ಏಳಿಗೆಗೆ ಹೊಸ ಹೊಸ ಸಾಧ್ಯತೆಗಳನ್ನು ಹುಡುಕುತ್ತಿದ್ದಾರೆ. ಕತ್ತಲಲ್ಲಿದ್ದ ದಲಿತ ಲೋಕ ಈಗ ಬೆಳಕಿನತ್ತ ಚಲಿಸುತ್ತಿದೆ. ಎಲ್ಲ ರಂಗಗಳಲ್ಲಿಯೂ ದಲಿತರು ತಮ್ಮ ಅಸ್ತಿತ್ವವನ್ನು ಗಟ್ಟಿಗೊಳಿಸುತ್ತಿದ್ದಾರೆ. ಪುಣೆಯಲ್ಲಿ ಇತ್ತೀಚೆಗೆ ''ದಲಿತ್ ಚೇಂಬರ್ ಆಫ್ ಕಾಮರ್ಸ್'' ಎಂಬ ದಲಿತ ಬಂಡವಾಳಶಾಹಿಗಳ ಸಂಸ್ಥೆ ಹುಟ್ಟಿಕೊಂಡಿದೆ. ಇದು ಬೇರೆ ರಾಜ್ಯಗಳಿಗೂ ಹರಡುತ್ತಿದೆ. ರಾಜಕೀಯ, ಆಡಳಿತ, ತಂತ್ರಜ್ಞಾನ ಇತ್ಯಾದಿ ಕ್ಷೇತ್ರಗಳಲ್ಲಿ ದಲಿತರ ಪಾಲು ಶೇಕಡ ೧೮ಅನ್ನು ಮುಟ್ಟದಿದ್ದರೂ ಗಮನಾರ್ಹವಾಗಿ ಹೆಚ್ಚಿದೆ. ಹೀಗಾಗಿ ತಮ್ಮ ಭೀಕರ ಭೂತಕಾಲದಿಂದ ಹೊರಗೆ ಬರುವ ಎಲ್ಲ ಪ್ರಯತ್ನಗಳು ನಡೆಯುತ್ತಿವೆ. ಆದರೆ ನಾನು ಮೇಲೆ ಹೇಳಿದ ಹಾಗೆ ಅಲಿಖಿತ ಸಂವಿಧಾನದ ಮುಸುಕು ಕಾರ್ಯಾಚರಣೆಗಳು ಇನ್ನೂ ನಡೆಯುತ್ತಿದ್ದು ಹಳ್ಳಿಗಾಡಿನ ದಲಿತರ ಏಳಿಗೆ ನಿರೀಕ್ಷಿಸಿದಷ್ಟು ಸಾಧ್ಯವಾಗಿಲ್ಲ. ನಗರಗಳಲ್ಲಿ ಮಾನಸಿಕ ಅಸ್ಪೃಶ್ಯತೆಯಿಂದ ಪಾರಾಗಲು ಸಾಧ್ಯವಾಗಿಲ್ಲ.

ಜಗತ್ತಿನ ಶ್ರೇಷ್ಠ ಸಾಹಿತ್ಯವೆಲ್ಲವೂ ಇಲ್ಲದವರ ಕರುಳಿನ ದನಿಯಾಗಿದೆ. ಕಪ್ಪು ಸಾಹಿತ್ಯದಲ್ಲಿ ದೊಡ್ಡ ಹೆಸರುಗಳಾದ ವೋಲೆ ಸೋಯಿಂಕಾ, ಪ್ಯಾಬ್ಲೋ ನೆರೂಡ, ಟೋನಿ ಮಾರಿಸನ್, ಲ್ಯಾಟಿನ್ ಅಮೆರಿಕಾದ ಗಾರ್ಸಿಯಾ ಮಾರ್ಕ್ವೆಸ್ ಇನ್ನೂ ಮುಂತಾದವರಿಗೆ ಸಾಹಿತ್ಯದಲ್ಲಿ ನೊಬೆಲ್ ಪ್ರಶಸ್ತಿ ಸಿಕ್ಕಿದೆ. ಜಗತ್ತು ಅವರ ಸಾಹಿತ್ಯಗಳನ್ನು, ದೇಶಗಳನ್ನು ನಿತ್ಯವೂ ಚರ್ಚಿಸುತ್ತಿದೆ. ಭಾರತದ ದಲಿತ ಸಾಹಿತ್ಯ ಹುಟ್ಟಿ ೪ ದಶಕಗಳು ಕಳೆದವು. ಕತ್ತಲೆ ಜಗತ್ತಿನ ಅನುಭವ ಲೋಕದ ಅನೇಕ ಗಟ್ಟಿ ಕೃತಿಗಳು ಹೊರಬಂದಿವೆ. ಕಪ್ಪು ಸಾಹಿತ್ಯವನ್ನು ಹೊರಗಿನವರು ಕುತೂಹಲದಿಂದ ಗಮನಿಸಿದಷ್ಟು ದಲಿತ ಸಾಹಿತ್ಯವನ್ನು ಗಮನಿಸುತ್ತಿಲ್ಲ. ಯಾಕೆಂದರೆ ಇಲ್ಲಿನ ಸವರ್ಣೀಯ ವಿಮರ್ಶಕರು ನಮ್ಮದು ಆಧ್ಯಾತ್ಮಿಕ ದೇಶ, ನಮ್ಮ ಸಂಸ್ಕೃತಿ ಶ್ರೇಷ್ಠ ಎಂದು ಹೇಳುತ್ತಿದ್ದಾರೆ. ಅಸ್ಪೃಶ್ಯ ಸಂಸ್ಕೃತಿಯೊಂದನ್ನು ಇಲ್ಲಿ ಅದುಮಿಡಲಾಗಿದೆ ಎಂದು ಹೇಳಿಕೊಳ್ಳುತ್ತಿಲ್ಲ. ಕೇಳಿದರೆ ಅದನ್ನು ಕಟ್ಟಳೆಯಲ್ಲಿ ಹೋಗಲಾಡಿಸಿದ್ದೇವೆ ಎನ್ನುತ್ತಾರೆ. ಆಚರಣೆಯಲ್ಲಿರುವುದನ್ನು ಮರೆಮಾಚುತ್ತಾರೆ. ಆದರೂ ದಲಿತ ಲೋಕದ ಕೆಲವು ಕೃತಿಗಳು ಸಾಗರದಾಚೆಯ ಬೇರೆ ಭಾಷೆಗಳಲ್ಲಿ ಪ್ರಕಟಗೊಂಡಿವೆ. ಮರಾಠಿಯ ನರೇಂದ್ರ ಜಾದವ್ ಫ್ರೆಂಚ್‌ಗೆ, ತಮಿಳಿನ ಭಾಮ ಸೇರಿದಂತೆ ಹಲವರು ಇಂಗ್ಲಿಷಿಗೆ ಅನುವಾದಗೊಂಡಿದ್ದಾರೆ. ನನ್ನ ಕತೆಗಳನ್ನು ಲ್ಯಾಟಿನ್ ಅಮೆರಿಕಾದ ವೆನೆಝುವೇಲಾ ಸರ್ಕಾರ ಸ್ಪ್ಯಾನಿಷ್ ಭಾಷೆಯಲ್ಲಿ ಪ್ರಕಟಿಸಿದೆ. ಈಗ ಬರೆಯುತ್ತಿರುವ ಹೊಸ ಪೀಳಿಗೆ ಇನ್ನೂ ಹೆಚ್ಚಿನ ಭರವಸೆ ಮೂಡಿಸಿದೆ. ಜಾಗತೀಕರಣದ ಮೋಡ ಭೂಮಿಯ ಮೇಲಿನ ಎಲ್ಲಾ ಭಾಷೆಗಳನ್ನು ಆವರಿಸಿಕೊಳ್ಳುತ್ತಿರುವಾಗ ದಲಿತ ಸಾಹಿತ್ಯಕ್ಕೆ ಉತ್ತಮ ಭವಿಷ್ಯವಿದೆ ಎಂದು ಹೇಳಲೇಬೇಕು.

ಸಮ್ಮೇಳನಾಧ್ಯಕ್ಷರ ಪದವಿಯನ್ನಿತ್ತು ಗೌರವಿಸಿದ್ದಕ್ಕೆ ದಲಿತ ಸಾಹಿತ್ಯ ಪರಿಷತ್ತಿನ ಸಂಘಟಕ ಮಿತ್ರರಿಗೆ ಮತ್ತೊಮ್ಮೆ ವಂದಿಸುತ್ತಾ ನನ್ನ ಅಧ್ಯಕ್ಷ ಭಾಷಣವನ್ನು ಮುಕ್ತಾಯಗೊಳಿಸುತ್ತೇನೆ.

**ಮೂಡ್ನಾಕೂಡು ಚಿನ್ನಸ್ವಾಮಿ**
ಚೀಫ್ ಅಕೌಂಟ್ಸ್ ಆಫೀಸರ್, ಬಿ.ಎಂ.ಟಿ.ಸಿ., ಸೆಂಟ್ರಲ್ ಆಫೀಸ್
ಶಾಂತಿನಗರ, ಬೆಂಗಳೂರು - ೫೬೦ ೦೨೭

ವೈಜ್ಞಾನಿಕ ಮತ್ತು ಔದ್ಯಮಿಕ ಸಂಶೋಧನೆ ಮಂಡಳಿಯ ವ್ಯಾಪ್ತಿಯೊಳಗೆ ಬರುವ ರಾಷ್ಟ್ರೀಯ ಸಾಗರ ವಿಜ್ಞಾನ ಸಂಸ್ಥೆ (ಎನ್.ಐ.ಓ.) ಕಳೆದ 50 ವರ್ಷಗಳಿಂದ ಸಾಗರಾಧ್ಯಯನ ಮತ್ತು ಸಂಶೋಧನೆಯಲ್ಲಿ ಹಾಗೂ ನಮ್ಮ ದೇಶಕ್ಕೆ ಬೇಕಾಗುವ ಭಾವೀ ವಿಜ್ಞಾನಿಗಳನ್ನು ರೂಪುಗೊಳಿಸುವ ಮಹತ್ತರ ಕಾರ್ಯದಲ್ಲಿ ತೊಡಗಿಕೊಂಡಿದೆ.




# ರಾಷ್ಟ್ರೀಯ ಸಾಗರ ವಿಜ್ಞಾನ ಸಂಸ್ಥೆ

**ಪರಂಜ್ಯೋತಿ**

**ಗೋ**ವಾದ ರಾಜಧಾನಿ ಪಣಜಿಯ ದೋನಾ ಪಾಲಾ ವಿಭಾಗದ ಒಂದು ಎತ್ತರದ ಪ್ರದೇಶದಲ್ಲಿದೆ ರಾಷ್ಟ್ರೀಯ ಸಾಗರವಿಜ್ಞಾನ ಸಂಸ್ಥೆ (ಎನ್.ಐ.ಓ.). ಸಂಸ್ಥೆಯ ಕಚೇರಿಯ ಮುಂಭಾಗದಲ್ಲಿ ನಿಂತರೆ ಪಶ್ಚಿಮದಲ್ಲಿ ಮಾಂಡವಿ ಮತ್ತು ಜುವಾರಿ ನದಿಗಳು ಅರಬ್ಬಿ ಸಮುದ್ರದೊಂದಿಗೆ ಸಂಗಮವಾಗುವ ದೃಶ್ಯ ಕಾಣಿಸುತ್ತದೆ. ವೈಜ್ಞಾನಿಕ ಮತ್ತು ಔದ್ಯಮಿಕ ಸಂಶೋಧನ ಮಂಡಳಿಯ (**ಸಿಎಸ್‌ಐಆರ್**) ವ್ಯಾಪ್ತಿಗೆ ಸೇರುವ ಇದನ್ನು ೧೯೬೬ರಲ್ಲಿ ಸ್ಥಾಪಿಸಲಾಯಿತು. ಗೋವಾದಲ್ಲಿ ಮುಖ್ಯ ಕಚೇರಿಯನ್ನು ಹೊಂದಿದ್ದು, ಮುಂಬೈ, ಕೊಚ್ಚಿ ಮತ್ತು ವಿಶಾಖಪಟ್ಟಣಗಳಲ್ಲಿ ಪ್ರಾದೇಶಿಕ ಕೇಂದ್ರಗಳನ್ನು ಹೊಂದಿದೆ. ಗೋವಾದಲ್ಲಿರುವ ಸಂಶೋಧನ ಕೇಂದ್ರವು ಸಿಎಸ್‌ಐಆರ್ ಜಾಲಬಂಧದ ೩೭ ಸಂಶೋಧನ ಕೇಂದ್ರಗಳಲ್ಲೊಂದು. ಇದು ದೇಶದ ಪ್ರಮುಖ ಸಾಗರ ಸಂಶೋಧನ ಸಂಸ್ಥೆ. ಇದರಲ್ಲಿ ೧೯೦ ಮಂದಿ ಪ್ರಮುಖ ವಿಜ್ಞಾನಿಗಳು ಸೇರಿದಂತೆ ಸುಮಾರು ೬೦೦ಕ್ಕೂ ಹೆಚ್ಚು ಸಿಬ್ಬಂದಿಗಳಿದ್ದಾರೆ. ಈ ಪೈಕಿ ೧೧೫ ಮಂದಿ ಸ್ನಾತಕೋತ್ತರ ಪದವೀಧರರಿದ್ದು ಇವರು ಸಾಗರ ವಿಜ್ಞಾನದ ಬೇರೆ ಬೇರೆ ವಿಷಯಗಳ ಕುರಿತು ಅಧ್ಯಯನ, ಸಂಶೋಧನೆಗಳಲ್ಲಿ ತೊಡಗಿಕೊಂಡಿದ್ದಾರೆ.

ಮೊದಲಿಗೆ ಅಂಟಾರ್ಕ್‌ಟಿಕ್ ಅನ್ವೇಷಣ ಯೋಜನೆ ಸಾಗರ ವಿಜ್ಞಾನ ಸಂಸ್ಥೆಯ ಒಂದು ಭಾಗವಾಗಿ ಕಾರ್ಯ ನಿರ್ವಹಿಸುತ್ತಿತ್ತು. ಈಗ ಅದು ಸಂಸ್ಥೆಯಿಂದ ಬೇರ್ಪಟ್ಟು ಪ್ರತ್ಯೇಕ ಶಾಖೆಯಾಗಿದೆ.

ಅತ್ಯಾಧುನಿಕ ಉಪಕರಣಗಳ ಸಹಿತ ಪ್ರಯೋಗಾಲಯಗಳನ್ನು ಹೊಂದಿರುವ 'ಸಾಗರ್ ಶುಕ್ತಿ', 'ಸಿಂಧು ಸಂಕಲ್ಪ', 'ಸಿಂಧು ಸಾಧನ', 'ಸಾಗರ ಕನ್ಯ' – ಮುಂತಾದ ಸಂಶೋಧನ ಹಡಗುಗಳಿವೆ. ಇವುಗಳಲ್ಲಿ ವಿಜ್ಞಾನಿಗಳು ಮತ್ತು ಸಿಬ್ಬಂದಿಗಳು ನೀರಿನ ಮೇಲುಮೈ ಹಾಗೂ ಆಳ ನೀರಿನಲ್ಲಿ ಸಂಶೋಧನೆ ನಡೆಸುತ್ತಾರೆ. ಈ ಹಡಗುಗಳು ೮ರಿಂದ ೩೫ ದಿನಗಳವರೆಗೆ ಸಾಗರದ ನೀರಿನಲ್ಲಿ ತೇಲುತ್ತ ಸಾಗರದ ಹರಿವು, ಸಾಗರಗರ್ಭದಲ್ಲಿ ದೊರಕುವ ಖನಿಜ ಸಂಪತ್ತು, ಸಾಗರ ಜೀವಿಗಳು ಇತ್ಯಾದಿ ಸಂಶೋಧನೆ ಮಾಡಲು ಯುಕ್ತವಾಗಿವೆ.

ಸಾಗರವಿಜ್ಞಾನಕ್ಕೆ ಮೀಸಲಾದ ಮುಖ್ಯ ಸಂಸ್ಥೆಯಾಗಿ ಇರುವ ಇದು ಶುದ್ಧ ವಿಜ್ಞಾನ ಮತ್ತು ಅನ್ವಯಿಕ ಸಂಶೋಧನೆಗೆ ಸಂಬಂಧಿಸಿದ ದೇಶದ ಅಗತ್ಯಗಳನ್ನು ಪೂರೈಸುವುದರೊಂದಿಗೆ, ನಮ್ಮನ್ನು ಸುತ್ತುವರಿದಿರುವ ಜಲರಾಶಿಗಳ ಕುರಿತ ನಮ್ಮ ಜ್ಞಾನವನ್ನು ಅಭಿವೃದ್ಧಿ ಪಡಿಸಿಕೊಳ್ಳುವುದರ ಜೊತೆಗೆ, ಈ ಜ್ಞಾನ ಸರ್ವರ ಉಪಯೋಗಕ್ಕೆ ಬಳಕೆಯಾಗುವಂತೆ ಮಾಡುವುದು ಅದರ ಮುಖ್ಯ ಗುರಿಗಳಲ್ಲೊಂದು.

ಸಾಗರ ತಳ, ಸಮುದ್ರಮಟ್ಟದ ದೀರ್ಘಕಾಲದ ಬದಲಾವಣೆಗಳು, ಸಮುದ್ರದ ನೀರು, ಪ್ರಕ್ಷುಬ್ಧ ಸಾಗರ, ಸಾಗರಗಳು ಮತ್ತು ಹವಾಮಾನ, ಬಂಗಾಳಕೊಲ್ಲಿಯಲ್ಲಿ ಚಂಡಮಾರುತಗಳು, ಗಾಳಿಯ ಅಲೆಗಳು, ಸಮುದ್ರದ ಅಲೆಗಳು, ಸುನಾಮಿಗಳು, ಸಮುದ್ರದಂಚುಗಳು, ಸಮುದ್ರದ ಮೇಲ್ಮೈನಲ್ಲಿರುವ ಜೀವಜಂತುಗಳು, ಆಳಸಾಗರದ ಜೀವಿಗಳು, ಸಾಗರಗಳ ಜೀವ ವೈವಿಧ್ಯತೆ, ಸಮುದ್ರ ತಳದಲ್ಲಿ ದೊರಕುವ ಖನಿಜಗಳು, ರಾಸಾಯನಿಕ ವಸ್ತುಗಳು, ಸಾಗರಗಳನ್ನು ಹೇಗೆ ಪರಿಶೋಧಿಸಬಹುದು – ಮುಂತಾದ ವಿಷಯಗಳಲ್ಲಿ ಈ ಸಂಸ್ಥೆ ಸಂಶೋಧನೆ ನಡೆಸುತ್ತದೆ.

ಈ ಸಂಸ್ಥೆ ಸಾಗರ ಸಂಬಂಧದ ವಿಷಯಗಳಲ್ಲಿ ಸಂಶೋಧನೆ ನಡೆಸಿ ಫಲಿತಾಂಶಗಳನ್ನು ಪ್ರಕಟಿಸುವಷ್ಟಕ್ಕೆ ತನ್ನ ಚಟುವಟಿಕೆಗಳನ್ನು ಸೀಮಿತಗೊಳಿಸಿಕೊಂಡಿಲ್ಲ. ನಮ್ಮ ರಾಜ್ಯಗಳಿಗೆ, ಮತ್ತು ಬೇರೆ ಬೇರೆ ಖಾಸಗಿ ಉದ್ಯಮಗಳಿಗೆ ಸಹ ವೈಜ್ಞಾನಿಕ ಸಲಹೆ ಸಹಕಾರದ ಅಗತ್ಯ ಉಂಟಾದಾಗ ಸಹಾಯ ಹಸ್ತ ನೀಡುತ್ತದೆ.

ಉದಾಹರಣೆಗೆ, ಸಾಗರದ ಉಷ್ಣಶಕ್ತಿಯನ್ನು ವಿದ್ಯುತ್ತಾಗಿ



ಮುಖ್ಯ ಕಚೇರಿ – ದೋನಾಪಾಲ

ಪರಿವರ್ತಿಸುವ ಸಾಧ್ಯತೆ ಕುರಿತು ತಮಿಳುನಾಡು ವಿದ್ಯುಚ್ಛಕ್ತಿ ಮಂಡಲಿ, ತಮ್ಮ ರಾಜ್ಯದ ಕರಾವಳಿ ಪ್ರದೇಶಗಳಲ್ಲಿ ಯೋಗ್ಯ ಸ್ಥಳಗಳನ್ನು ಆಯ್ಕೆಮಾಡಿಕೊಡುವಂತೆ ಸಾಗರವಿಜ್ಞಾನ ಸಂಸ್ಥೆಯನ್ನು ಕೋರಿತು. ಅದರಂತೆ ಎನ್‌ಐಓನ ವಿಜ್ಞಾನಿಗಳು ತಮಿಳುನಾಡು ಕರಾವಳಿಯಲ್ಲಿ ಹಲವಾರು ಪ್ರಶಸ್ತ ತಾಣಗಳನ್ನು ಗುರುತಿಸಿಕೊಟ್ಟರು.

ಅಂತೆಯೇ, ನಮ್ಮ ಪ್ರಮುಖ ಸಾರ್ವಜನಿಕ ಉದ್ಯಮಗಳಲ್ಲೊಂದಾದ ಭಾರತೀಯ ತೈಲ ಮತ್ತು ನೈಸರ್ಗಿಕ ಅನಿಲ ನಿಗಮಕ್ಕೆ (ಓಎನ್‌ಜಿಸಿ) ಸಾಗರ ಮಧ್ಯದಲ್ಲಿ ತೆಗೆಯುವ ತೈಲವನ್ನು ರಿಗ್‌ನಿಂದ ತೀರಕ್ಕೆ ಸಾಗಿಸುವ ಸಮಸ್ಯೆ ತಲೆದೋರಿದಾಗ ಎನ್‌ಐಓ ಅದರ ನೆರವಿಗೆ ನಿಂತಿತು. ಸಮುದ್ರದಲ್ಲಿ ಸರ್ವೇಕ್ಷಣೆ ನಡೆಸಿ, ಕೊಳವೆ ಮಾರ್ಗದ ಮೂಲಕ ತೈಲವನ್ನು ತೀರದ ಸಂಸ್ಕರಣಾಗಾರಕ್ಕೆ ಸಾಗಿಸಿ ತರುವುದರಲ್ಲಿ ಯಶಸ್ವಿ ಸಹಕಾರ ನೀಡಿತು. ಜೊತೆಗೆ, ವಿಶೇಷ ಆರ್ಥಿಕ ವಲಯ (ಎಸ್‌ಇಜಡ್)ದ ಸರ್ವೇಕ್ಷಣೆಯನ್ನು ಸಹ ಯಶಸ್ವಿಯಾಗಿ ನಡೆಸಿತು.

ಎನ್‌ಐಓನ ಸಲಹೆ ಸಹಕಾರ ಪಡೆಯುವ ಸಾರ್ವಜನಿಕ ಮತ್ತು ಖಾಸಗಿ ಉದ್ಯಮಗಳ ಸಾಲಿನಲ್ಲಿ ಇವು ಸೇರುತ್ತವೆ: ನವರತ್ನಗಳಲ್ಲೊಂದಾದ ಜಿಎಐಎಲ್, ಇಂಡಿಯನ್ ಆಯಿಲ್, ಹಿಂದುಸ್ತಾನ್ ಪೆಟ್ರೋಲಿಯಂ, ಎಸ್ಸಾರ್, ರಿಲಯನ್ಸ್, ಅದಾನಿ, ಕಾಂಡ್ಲಾ ಪೋರ್ಟ್ ಟ್ರಸ್ಟ್, ನ್ಯೂ ಮಂಗಳೂರು ಪೋರ್ಟ್ ಟ್ರಸ್ಟ್, ಸೇತು ಸಮುದ್ರಂ, ಗುಜರಾತ್ ಸ್ಟೇಟ್ ಪೆಟ್ರೋಲಿಯಂ ಕಾರ್ಪೊರೇಷನ್, ಕೊಚಿನ್ ಪೋರ್ಟ್ ಟ್ರಸ್ಟ್, ತೂತುಕುಡಿ ಪೋರ್ಟ್ ಟ್ರಸ್ಟ್, ಜೆಎನ್‌ಪಿಟಿ.

ಜೊತೆಗೆ, ಶ್ರೀಲಂಕಾ, ಸಿಷಲಸ್ ಮತ್ತು ಮಾರಿಷಸ್ ದ್ವೀಪಗಳ ಕೋರಿಕೆಯ ಮೇರೆಗೆ ಅವುಗಳ ಜಲಪ್ರದೇಶಗಳ ಸರ್ವೇಕ್ಷಣೆಯಲ್ಲಿ ಸಹಕಾರ ನೀಡುತ್ತದೆ.

ಸಮುದ್ರಗಳ ಜಲಸಾಗರದಲ್ಲಿ ಗಣಿಗಾರಿಕೆ ಮಾಡುವ ಸಾಗರ ವಿಜ್ಞಾನಿಗಳು ಸಂಶೋಧಕ ಹಡಗುಗಳಲ್ಲಿದ್ದುಕೊಂಡು ಸಾಗರದ ಜೀವನಾಡಿಯನ್ನು ಅಳತೆ ಮಾಡುತ್ತಾರೆ. ದೇಶದ ಬೇರೆ ಬೇರೆ ಭೂಭಾಗಗಳಿಂದ ಹರಿದು ಬರುವ ನದಿಗಳು ತಮ್ಮ ಮಾರ್ಗದಲ್ಲಿ ಬಗೆಬಗೆಯ ರಾಸಾಯನಿಕ ವಸ್ತುಗಳು ಮತ್ತು ಖನಿಜಗಳನ್ನು ತಂದು ಸಮುದ್ರದೊಳಕ್ಕೆ ಸುರಿಯುತ್ತವೆ. ಹೀಗೆ ಖನಿಜಗಳು ಲಕ್ಷಾಂತರ ವರ್ಷಗಳಿಂದ ಸಂಗ್ರಹಗೊಳ್ಳುತ್ತಿವೆ. ಆ ಖನಿಜಗಳು ಯಾವ ಭಾಗದಲ್ಲಿ ಎಷ್ಟು ಪ್ರಮಾಣದಲ್ಲಿವೆ, ಅವುಗಳಿಂದ ಯಾವ ಪ್ರಯೋಜನ ಪಡೆಯಬಹುದು ಎಂಬುದನ್ನು, ಅವುಗಳ ನಮೂನೆಗಳನ್ನು ತಂದು ಸಾಗರ ವಿಜ್ಞಾನಿಗಳು ತಮ್ಮ ಪ್ರಯೋಗಾಲಯಗಳಲ್ಲಿ ಪರೀಕ್ಷೆ ಮಾಡುತ್ತಾರೆ. ಇತ್ತೀಚೆಗೆ ಸಾಗರ ಸಸ್ಯಗಳಿಂದ ಉಪಯುಕ್ತ ಔಷಧಿಗಳನ್ನು ಪಡೆಯುವ ಸಂಶೋಧನೆಯೂ ನಡೆಯುತ್ತಿದೆ. ಸಾಗರದಲ್ಲಿ ಲಭಿಸುವ ಸಂಪತ್ತು ದೇಶದ ಪ್ರಯೋಜನಕ್ಕೆ ಒದಗುವಂತೆ ಮಾಡುವುದು ಸಾಗರ ವಿಜ್ಞಾನ ಸಂಸ್ಥೆಯ ಮುಖ್ಯ ಕಾರ್ಯಗಳಲ್ಲೊಂದು.

ಪ್ರಧಾನ ಮಂತ್ರಿ ನೆಹರೂ ಅವರ ಮುಂದಾಲೋಚನೆಯಿಂದ ಬಹಳ ಹಿಂದೆಯೇ ಅಂತರರಾಷ್ಟ್ರೀಯ ಸಾಗರಾನ್ವೇಷಣೆಯ ಒಡಂಬಡಿಕೆಗೆ ಸಹಿ ಹಾಕಿದ ಕಾರಣ, ಈ ಸಂಸ್ಥೆ ಭಾರತದ ಎಲ್ಲೆಯೊಳಗಣ ಜಲರಾಶಿಗಳಲ್ಲಿ ಮಾತ್ರವಲ್ಲದೆ ಅಂತರರಾಷ್ಟ್ರೀಯ ಪ್ರದೇಶಗಳಲ್ಲಿ ಅನ್ವೇಷಣೆ/ಸಂಶೋಧನೆ ನಡೆಸಲು ಅವಕಾಶವಿದೆ. ಹಾಗಾಗಿ ವಿಜ್ಞಾನಿಗಳು ಹಿಂದು ಮಹಾಸಾಗರದ ಪಶ್ಚಿಮ ಮತ್ತು ಮಧ್ಯಭಾಗಗಳಲ್ಲಿ ಅನ್ವೇಷಣೆ ನಡೆಸಿ ಅಲ್ಲಿ ಬಹುಲೋಹೀಯ ಗಂತಿಗಳ (ಪಾಲಿಮೆಟಾಲಿಕ್ಸ್ ನಾಡ್ಯೂಲ್ಸ್) ಹೇರಳ ಸಂಗ್ರಹವಿರುವುದನ್ನು ಮತ್ತು ಅನಿಲಭರಿತ ಮಡ್ಡಿ ಪ್ರದೇಶಗಳಿರುವುದನ್ನು ಗುರುತಿಸಿದ್ದಾರೆ. ಭಾರತ ಸರಕಾರದ ಸಾಗರಾಭಿವೃದ್ಧಿ ಇಲಾಖೆಯ ಧನಸಹಾಯದಿಂದ ಆಳ ಸಮುದ್ರಾನ್ವೇಷಣೆಯ ರಾಷ್ಟ್ರೀಯ ಕಾರ್ಯಕ್ರಮವನ್ನು ಮತ್ತಷ್ಟು ತೀವ್ರಗೊಳಿಸಲು ಇದರಿಂದ ಸಹಾಯಕವಾಯಿತು.



ಸಾಗರ ಶುಕ್ತಿ

ಮೇಲಿನ ಬಹುಲೋಹೀಯ ಗಂತಿಗಳಿಂದ ನಿಕಲ್, ಕೋಬಾಲ್ಟ್ ಮತ್ತು ತಾಮ್ರಗಳನ್ನು ಪಡೆಯಬಹುದಾಗಿದೆ.

ಈವರೆಗೆ, ಭಾರತದಲ್ಲಿ ಪ್ಲಾಟಿನಮ್ ಅಥವಾ ಕೋಬಾಲ್ಟ್ ನಿಕ್ಷೇಪಗಳಿರುವ ಬಗ್ಗೆ ಖಚಿತ ಮಾಹಿತಿ ಇರಲಿಲ್ಲ. ಕೆಲವು ವರ್ಷಗಳ ಹಿಂದೆ ಎನ್.ಐ.ಓದ ವಿಜ್ಞಾನಿ ಡಾ।। ವಿರುಪಾಕ್ಷ ಕೆ. ಬಣಕಾರ ಅವರ ನೇತೃತ್ವದ ವಿಜ್ಞಾನಿಗಳ ತಂಡ, ಹಿಂದು ಮಹಾಸಾಗರದ ವಿಷುವದ್ವೃತ್ತದ ಸಮೀಪದಲ್ಲಿ ಸುಮಾರು ಮೂರು ಕಿ.ಮೀ.ದಷ್ಟು ಎತ್ತರವಿರುವ ಅಫನಾಸಿ ನಿಕಿತಿನ್ ಸಮುದ್ರ ದಿಬ್ಬದಲ್ಲಿ ಪ್ಲಾಟಿನಮ್ ಮತ್ತು ಕೊಬಾಲ್ಟ್ ನಿಕ್ಷೇಪಗಳಿರುವುದನ್ನು ಕಂಡುಹಿಡಿದಿತ್ತು. ಮಿಶ್ರಲೋಹಗಳ ತಯಾರಿಕೆಯಲ್ಲಿ ಮತ್ತು ಎಲೆಕ್ಟ್ರಾನಿಕ್ಸ್ ಉದ್ಯಮಗಳಲ್ಲಿ ವ್ಯಾಪಕವಾಗಿ ಬಳಕೆಯಾಗುವ ಪ್ಲಾಟಿನಮ್ ಮತ್ತು ಕೊಬಾಲ್ಟ್ ಅಪೂರ್ವ ಲೋಹಗಳ ಸಾಲಿಗೆ ಸೇರುತ್ತವೆ.

ಸಾಗರದಾಳದ ಅಪೂರ್ವ ಲೋಹಗಳ ಅನ್ವೇಷಣೆಯಲ್ಲಿ ರಾಷ್ಟ್ರೀಯ ಸಾಗರ ವಿಜ್ಞಾನ ಸಂಸ್ಥೆ ತನ್ನ ಮತ್ತು ವಿದೇಶಿ ಹಡಗುಗಳಲ್ಲಿ ಅನ್ವೇಷಣೆ ನಡೆಸುತ್ತ ಸಮುದ್ರ ತಳದ ೪.೨ ಮಿಲಿಯ ಚದರ ಕಿ.ಮೀ.ಗಳಷ್ಟು ಸರ್ವೇಕ್ಷಣೆ ನಡೆಸಿದೆ. ಸಮುದ್ರ ತಳದ



ಸಿಂಧು ಸಂಕಲ್ಪ



ಪ್ರಯೋಗಾಲಯ

## ಡಾ॥ ವಿರುಪಾಕ್ಷ ಕೆ. ಬಣಕಾರ



ಕಳೆದ ಮೂವತ್ತು ವರ್ಷಗಳಿಂದ ಗೋವಾದ ರಾಷ್ಟ್ರೀಯ ಸಾಗರವಿಜ್ಞಾನ ಸಂಸ್ಥೆಯಲ್ಲಿ ಕಾರ್ಯನಿರತರಾಗಿರುವ ಡಾ॥ ವಿರುಪಾಕ್ಷ ಕೆ. ಬಣಕಾರ್ ಗದಗ ಜಿಲ್ಲೆಯ ಕೋಟುಮಚಗಿ ಗ್ರಾಮದಲ್ಲಿ ಜನಿಸಿದವರು. ಕರ್ನಾಟಕ ವಿಶ್ವವಿದ್ಯಾಲಯದಿಂದ ಆನ್ವಯಿಕ ಭೂ ವಿಜ್ಞಾನದಲ್ಲಿ ಪದವಿ ಪಡೆದವರು.

ಪ್ರಾರಂಭದಲ್ಲಿ ಸಮುದ್ರ ತಳದಲ್ಲಿರುವ ಪಾಲಿಮೆಟಾಲಿಕ್ ನ್ಯಾಡೂಲ್ಸ್ ಕುರಿತ ಕಾರ್ಯಕ್ರಮದಲ್ಲಿ ಭಾಗವಹಿಸಿದರು. ಫೆರೊಮ್ಯಾಂಗನೀಸ್ ನ್ಯಾಡೂಲ್ಸ್‌ಗಳ ಜಿಯೋಕೆಮಿಸ್ಟ್ರಿ ಮತ್ತು ರೇಡಿಯೋಕೆಮಿಸ್ಟ್ರಿ ಸಂಬಂಧದ ಪ್ರಬಂಧಕ್ಕಾಗಿ ಪಿಎಚ್.ಡಿ. ಪದವಿ ಪಡೆದರು. ಹಿಂದು ಮಹಾಸಾಗರದಲ್ಲಿ ನಡೆದ ಹಲವಾರು ಸಾಗರ ಸಂಶೋಧನ ಕಾರ್ಯಕ್ರಮಗಳಲ್ಲಿ ಭಾಗವಹಿಸಿದ್ದಾರೆ. ಹಲವು ವಿದೇಶಿ ವಿಶ್ವವಿದ್ಯಾನಿಲಯಗಳಲ್ಲಿ ಸಂದರ್ಶಕ ಪ್ರಾಧ್ಯಾಪಕರಾಗಿ ಕಾರ್ಯ ನಿರ್ವಹಿಸಿರುವರಲ್ಲದೆ ಸುಮಾರು ಹತ್ತಕ್ಕೂ ಹೆಚ್ಚು ಮಂದಿ ಸ್ನಾತಕೋತ್ತರ ಅಭ್ಯರ್ಥಿಗಳಿಗೆ ಮಾರ್ಗದರ್ಶಕರಾಗಿ ಸಹಕರಿಸುತ್ತಿದ್ದಾರೆ. ಸದ್ಯ ಇವರು ರಾಷ್ಟ್ರೀಯ ಸಾಗರವಿಜ್ಞಾನ ಸಂಸ್ಥೆಯ ಮಾನವ ಸಂಪನ್ಮೂಲ ವಿಭಾಗದ ಮುಖ್ಯರಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ. 'ಇಂಡಿಯನ್ ಜರ್ನಲ್ ಆಫ್ ಮರೀನ್ ಸೈನ್ಸ್' ಪತ್ರಿಕೆಯ ಸಂಪಾದಕ ಮಂಡಲಿಯಲ್ಲಿ ಕಾರ್ಯ ನಿರ್ವಹಿಸಿದ್ದಾರೆ.

ಗೋವಾದಲ್ಲಿ ನಡೆಯುವ ಕನ್ನಡ ಚಟುವಟಿಕೆಗಳಲ್ಲಿ ಸದಾ ಮುಂದಿರುತ್ತಾರೆ. ಸಾಗರ ಸಂಬಂಧದ ವೈಜ್ಞಾನಿಕ ಲೇಖನಗಳ ಜೊತೆಗೆ ಕನ್ನಡದಲ್ಲಿ ಇವರ ಲೇಖನಗಳು ಮತ್ತು ಕವಿತೆಗಳು 'ಹೊಸತು ಪತ್ರಿಕೆ'ಯಲ್ಲಿ ಪ್ರಕಟವಾಗಿವೆ. ಇವರ ಎರಡು ಕಾದಂಬರಿಗಳು ನವಕರ್ನಾಟಕದಿಂದ ಪ್ರಕಟವಾಗಿವೆ.

೫೦ ಸಾವಿರಕ್ಕೂ ಹೆಚ್ಚು ಛಾಯಾಚಿತ್ರಗಳನ್ನು ಪಡೆದಿದೆ. ಸಂಸ್ಕರಣೆಗಾಗಿ ೧೫೦ ಟನ್ನುಗಳಷ್ಟು ಲೋಹ ಗಂಟಿಗಳನ್ನು ಸಂಗ್ರಹಿಸಿದೆ. ಹೈಡ್ರೋಸ್ವೀಪ್‌ನ ಸಹಾಯದಿಂದ ೩ ಲಕ್ಷಕ್ಕೂ ಅಧಿಕ ಚದುರ ಕಿಲೋಮೀಟರಿನಷ್ಟು ಪ್ರದೇಶದ ನಕ್ಷೆ ತಯಾರಿಸಿದೆ. ಲೋಹ ಗಂಟಿಗಳು ಹೇರಳವಾಗಿರುವ ಪ್ರತಿಯೊಂದೂ ೧೫೦ ಸಾವಿರ ಚ.ಕಿ.ಮೀ. ವಿಸ್ತಾರದ ಎರಡು ಪ್ರದೇಶಗಳನ್ನು ಗುರುತಿಸಿದೆ.

ಅರಬ್ಬಿ ಸಮುದ್ರ, ಬಂಗಾಳ ಕೊಲ್ಲಿ ಮತ್ತು ಹಿಂದು ಮಹಾಸಾಗರಗಳಲ್ಲಿ ಭಾರತದ ಎಲ್ಲೆಗೆ ಸೇರಿದ ಜಲರಾಶಿಗಳಲ್ಲಿ, ಲಕ್ಷದ್ವೀಪಗಳು ಮತ್ತು ಅಂಡಮಾನ್ ನಿಕೊಬಾರ್ – ಹೀಗೆ ಹಲವು ದ್ವೀಪಗಳ ಸುತ್ತಲೂ ಸಾಗರ ಜೀವಿಗಳ ನೈಸರ್ಗಿಕ ನೆಲೆಗಳನ್ನು ರಕ್ಷಿಸುವ ನಿಟ್ಟಿನಲ್ಲಿ ಸಾಗರ ವಿಜ್ಞಾನ ಸಂಸ್ಥೆ ಸಂಶೋಧನ ಚಟುವಟಿಕೆ ನಡೆಸುತ್ತದೆ. ಹವಳದ ದಿಬ್ಬಗಳಿಗೆ ಹರಡುವ ರೋಗಗಳನ್ನು ಗುರುತಿಸಿ, ಅವುಗಳ ರಕ್ಷಣೆಯಲ್ಲಿ ಸ್ಥಳೀಯರೂ ತೊಡಗಿಕೊಳ್ಳುವಂತೆ ಮಾಡಲು ಪ್ರಯತ್ನಿಸಿದೆ. ಉದಾಹರಣೆಗೆ, ಲಕ್ಷದ್ವೀಪಗಳಲ್ಲಿ ಹದಿನೈದು ಮಂದಿ ಸ್ಕೂಬಾ ಮುಳುಗುಗಾರರಿಗೆ ತರಬೇತಿ ನೀಡಿ, ದಿಬ್ಬಗಳ ಸರ್ವೇಕ್ಷಣೆ ಮತ್ತು ರಕ್ಷಣೆ ಕಾರ್ಯಕ್ಕೆ ಅವರನ್ನು ಪ್ರೇರೇಪಿಸಿದೆ.

ಸಾಗರ ವಿಜ್ಞಾನದ ಯಾವುದೇ ಶಾಖೆಯಲ್ಲಿ ಅಧ್ಯಯನ ಮಾಡಲು, ಸಂಶೋಧನ ವಿಧಾನಗಳನ್ನು ತಿಳಿದುಕೊಳ್ಳಲು ಸಹಾಯಕವಾಗುವಂತೆ, ಪ್ರಾಜೆಕ್ಟ್ ವರ್ಕ್‌ಗಳನ್ನು ಮಾಡುವ ಅಭ್ಯರ್ಥಿಗಳಿಗೆಂದು ಬೇಸಿಗೆ ಶಿಬಿರಗಳನ್ನು, ಉಪನ್ಯಾಸ ಕಾರ್ಯಕ್ರಮಗಳನ್ನು ಸಾಗರ ವಿಜ್ಞಾನ ಸಂಸ್ಥೆ ಪ್ರತಿವರ್ಷ ಏರ್ಪಾಟು ಮಾಡುತ್ತದೆ. ತಮ್ಮ ಜ್ಞಾನವನ್ನು ಮತ್ತಷ್ಟು ಹೆಚ್ಚಿಸಿಕೊಳ್ಳಲು ಅಪೇಕ್ಷಿಸುವ ಸ್ನಾತಕೋತ್ತರ ಅಭ್ಯರ್ಥಿಗಳಿಗೆ ಅವಕಾಶ ಕಲ್ಪಿಸಿಕೊಡುತ್ತದೆ. ಸಾಗರ ವಿಜ್ಞಾನ ಮಾತ್ರವೇ ಅಲ್ಲದೆ, ವಿಜ್ಞಾನದ ಯಾವ ಶಾಖೆಯಲ್ಲಿ ಅಭ್ಯಾಸಮಾಡಿದವರಿಗೂ ಸಂಸ್ಥೆಯಲ್ಲಿ ಉದ್ಯೋಗಾವಕಾಶಗಳು ಇವೆ.

೧೯೭೩ರಿಂದ ಈವರೆಗೆ ವಿಜ್ಞಾನಿಗಳು ನಡೆಸಿದ ಸುಮಾರು ಒಂದು ಸಾವಿರ ಸಾಗರಾನ್ವೇಷಣೆಯ ಸಂದರ್ಭದಲ್ಲಿ ಸಂಗ್ರಹಿಸಿದ ವಿಷಯಗಳ ದತ್ತಾಂಶ ಕೇಂದ್ರವನ್ನೂ ಈ ಸಂಸ್ಥೆ ಹೊಂದಿದೆ.

ಬೌದ್ಧಿಕ ಆಸ್ತಿಗೆ ಸಂಬಂಧಿಸಿದಂತೆ ಎನ್‌ಐಓ ಸುಮಾರು ೫೦ರಷ್ಟು ಪೇಟೆಂಟ್‌ಗಳನ್ನು ಪಡೆದಿದೆ. ಈ ಪೈಕಿ ಶೇಕಡ ೬೦ರಷ್ಟು ಮರೀನ್ ಬಯೋಟೆಕ್ನಾಲಜಿ ಅಧ್ಯಯನಗಳಿಗೆ ಸಂಬಂಧಿಸಿದವು. ಈ ಸಂಸ್ಥೆ ಅಭಿವೃದ್ಧಿಪಡಿಸಿರುವ ಇತ್ತೀಚಿನ ತಂತ್ರಜ್ಞಾನಗಳ ಸಾಲಿನಲ್ಲಿ ಅಟಾನಮಸ್ ಅಂಡರ್‌ವಾಟರ್ ವೆಹಿಕಲ್ (ಎಯುವಿ) ಸಹ ಸೇರಿದೆ. ಜಲಪರಿಸರಗಳಲ್ಲಿರುವ ಜೀವಿಗಳು, ವಿವಿಧ ಬಗೆಯ ಅಣುಗಳು, ಆರೋಗ್ಯ ರಕ್ಷಣೆಗಾಗಿ ಹೊಸ ಔಷಧಿಗಳು ಮತ್ತು ಇತರ ವಸ್ತುಗಳ ತಯಾರಿಕೆಯಲ್ಲಿ ಉಪಯೋಗಕ್ಕೆ ಬರಬಹುದು. ಎನ್‌ಐಓ ವಿಜ್ಞಾನಿಗಳು ಈ ನಿಟ್ಟಿನಲ್ಲಿ ಸಂಶೋಧನೆ ನಡೆಸುತ್ತಿದ್ದು ಅವರ ಅಧ್ಯಯನಗಳು ಸಂಶೋಧನ ಪ್ರಬಂಧಗಳಲ್ಲದೆ ಸಂಸ್ಥೆಗಾಗಿ ಬೌದ್ಧಿಕ ಆಸ್ತಿಯನ್ನು ಗಳಿಸಿಕೊಟ್ಟಿವೆ.



ಬಹುಲೋಹೀಯ ಗಂಟಿ

ಎನ್‌ಐಓ ಸುಸಜ್ಜಿತವಾದ, ಸಾಗರ ವಿಜ್ಞಾನಕ್ಕೆ ಸಂಬಂಧಿಸಿದ ಮಹತ್ವದ ಗ್ರಂಥಗಳಿರುವ ಗ್ರಂಥಾಲಯವನ್ನು ಹೊಂದಿದೆ. ಅಲ್ಲಿರುವ ಗ್ರಂಥಗಳ ಸಂಖ್ಯೆ ३೦ ಸಾವಿರಕ್ಕೂ ಅಧಿಕ. ಇದು ದೇಶದಲ್ಲೇ ಅತ್ಯಂತ ದೊಡ್ಡ ಸಂಗ್ರಹವಾಗಿದೆ. ಮುದ್ರಿತ ಗ್ರಂಥಗಳ ಸಂಗ್ರಹವಲ್ಲವೆ, ನೇರ ಚಂದಾ ಮೂಲಕ ಅಥವಾ ಕನ್ಸೋರ್ಟಿಯಂನ ಒಂದು ಭಾಗವಾಗಿ ३೦೦೦ಕ್ಕೂ ಹೆಚ್ಚು ಜರ್ನಲ್‌ಗಳನ್ನು ಆನ್‌ಲೈನ್ ಸಹಾಯದಿಂದ ಬಳಸಿಕೊಳ್ಳಲು ಅವಕಾಶವಿದೆ.

ಇದು ರಾಷ್ಟ್ರೀಯ ಸಾಗರ ವಿಜ್ಞಾನಸಂಸ್ಥೆಯ ಒಂದು ಸ್ಥೂಲ ಪರಿಚಯವಷ್ಟೆ. ಅಲ್ಲಿ ಉದ್ಯೋಗ, ಅಧ್ಯಯನ ಇತ್ಯಾದಿ ವಿಷಯಗಳನ್ನು ತಿಳಿಯಲಪೇಕ್ಷಿಸುವವರು ಸಂಸ್ಥೆಯ ವೆಬ್‌ಸೈಟ್‌ನಿಂದ (http://www.nio.org) ವಿವರಗಳನ್ನು ಪಡೆದುಕೊಳ್ಳಬಹುದು.

*(ಈ ಲೇಖನಕ್ಕೆ ಅಗತ್ಯ ಮಾಹಿತಿ ಮತ್ತು ಚಿತ್ರಗಳನ್ನು ಒದಗಿಸಿದವರು ಡಾ॥ ವಿರುಪಾಕ್ಷ ಕೆ. ಬಣಕಾರ ಅವರು)*


**ಪರಂಜ್ಯೋತಿ**
ನಂ. ೧೬೭, ೧೧ನೇ ಮುಖ್ಯರಸ್ತೆ
३ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮

# ಕತ್ತುನೋವು ಮತ್ತು ಡಿಸ್ಕ್ ಬದಲಿ ಜೋಡಣೆ

## ವಿಕ್ರಂ ಆಸ್ಪತ್ರೆ

☎: +91-80-4500-4500

ಕತ್ತು ನೋವು ಸರ್ವೇಸಾಮಾನ್ಯವಾಗಿ ಕಾಡುವ ಸಮಸ್ಯೆ. ಇದನ್ನು ಸರ್ವೈಕಲ್ ಬೇನೆ ಎಂದು ವೈದ್ಯಕೀಯವಾಗಿ ಗುರುತಿಸುತ್ತದೆ. ಇದು ಕತ್ತಿನ ಭಾಗದಲ್ಲಿನ ಯಾವುದೇ ಊತಕದ ಸಮಸ್ಯೆಗಳಿಂದುಂಟಾದ ತೊಂದರೆಯಾಗಿರಬಹುದು.




**ಕತ್ತುನೋವಿಗೆ ಕಾರಣಗಳು ಹಲವಾರು. ಅವುಗಳೆಂದರೆ,**

- **ಒತ್ತಡ :** ಭೌತಿಕ/ ಶಾರೀರಿಕ ಹಾಗೂ ಮಾನಸಿಕ ಒತ್ತಡಗಳು.
- **ದೀರ್ಘಕಾಲ ಒಂದೇ ಭಂಗಿಯಲ್ಲಿರುವುದು :** ಅನೇಕರು ಸೋಫಾ, ಕುರ್ಚಿಯ ಮೇಲೆ ಕುಳಿತು ಕೆಲಸ ಮಾಡುವುದರಿಂದ ಕತ್ತು ನೋವಿನ ಬಾಧೆ ಅನುಭವಿಸಬಹುದು.
- **ಸಣ್ಣಪುಟ್ಟ ಗಾಯಗಳು ಮತ್ತು ಏಳು-ಬೀಳುವುದು :** ಆಟೋಟ, ವಾಹನ ಮತ್ತು ದಿನನಿತ್ಯದ ಚಟುವಟಿಕೆಗಳಲ್ಲಿ ಉಂಟಾಗುವ ಗಾಯಗಳು ಮತ್ತು ಅಪಘಾತಗಳು.
- **ಪರೋಕ್ಷ ನೋವು :** ಬೆನ್ನಿನ ಮೇಲ್ಭಾಗದಲ್ಲುಂಟಾಗುವ ನೋವು, ಕತ್ತು ನೋವಿಗೆ ಕಾರಣವಾಗಿರಬಹುದು.
- **ಅಂಗದ ಅತಿಯಾದ ಬಳಕೆ :** ಕತ್ತಿನ ಸ್ನಾಯುಗಳನ್ನು ಅತಿಯಾಗಿ ದಣಿಸುವುದು.
- **ಉಳುಕು :** ಕತ್ತನ್ನು ಸರಕ್ಕನೆ ಜಗ್ಗುವುದರಿಂದ ಉಂಟಾಗುವ ನೋವು.
- **ನರ ಹೊರಳುವಿಕೆ :** ಕತ್ತಿನ ಆವರಣದಲ್ಲಿ ಅಕಸ್ಮಾತ್ ಉಂಟಾಗುವ ಕತ್ತಿನ ನರಗಳ ಹೊರಳುವಿಕೆಯಿಂದ ನೋವು ಕಾಣಿಸಿಕೊಳ್ಳಬಹುದು.

ಗಂಟಲಿಗೆ ಉಂಟಾದ ವೈರಸ್ಸಿನ ಸೋಂಕಿನಿಂದ ಹಾಲ್ರಸ ಗ್ರಂಥಿ ಉಬ್ಬಿಕೊಂಡು ಕತ್ತು ನೋವು ಕಾಣಿಸಿಕೊಳ್ಳಬಹುದು. ಕ್ಷಯ, ಆಸ್ಟಿಯೋ ಮಯಲೈಟಿಸ್ ಮತ್ತು ಸೆಪ್ಟಿಕ್ ಡಿಸ್ಕೈಟಿಸ್ ಎಂದರೆ ಮೂಳೆ ಮತ್ತು ಬೆನ್ನುಹುರಿಗಳಲ್ಲಾಗುವ ಸೋಂಕು, ಮೆನಿಂಜೈಟಿಸ್‌ಗಳ ಕಾರಣಗಳಿಂದಲೂ ಕತ್ತು ನೋವುಂಟಾಗುವ ಸಾಧ್ಯತೆಗಳಿವೆ. ಇದಲ್ಲದೇ ಫೈಬ್ರೋಮಯಾಲ್ಜಿಯಾ ಮತ್ತು ಪಾಲಿಮಯಾಲ್ಜಿಯಾ ರುಮ್ಯಾಂಟಿಕಾದಂತಹ ಕತ್ತಿನ ಸ್ನಾಯುಗಳಿಗೆ ಸಂಬಂಧಿಸಿದ ನ್ಯೂನತೆಗಳಲ್ಲೂ ಕತ್ತು ನೋವು ಕಾಣಿಸಿಕೊಳ್ಳಬಹುದು.

ಆಟೋಟ, ವಾಹನ ಚಾಲನೆ, ಕುದುರೆ ಸವಾರಿ ಮುಂತಾದ ಸಂದರ್ಭಗಳಲ್ಲಿ ಆಕಸ್ಮಿಕ ಮತ್ತು ಅಪಘಾತಗಳಿಂದ ಕತ್ತು ನೋವುಂಟಾಗುವುದು ಸಾಮಾನ್ಯ. ಇಂತಹ ನೋವನ್ನು ವಿಶೇಷ ವ್ಯಾಯಾಮ ಅಥವಾ ಬಿಗಿಕಟ್ಟುಗಳನ್ನು ಬಳಸಿ ಸರಿಪಡಿಸಿಕೊಳ್ಳಬಹುದು.

ಜಾಹೀರಾತು

ಕತ್ತುನೋವು ಬಹುತೇಕ ಸಣ್ಣ ಪ್ರಮಾಣದ್ದಾಗಿರುತ್ತದೆ. ಕೆಲವೊಮ್ಮೆ ಅದು ವಿಪರೀತವಾಗಬಹುದು. ಕತ್ತಿನ ನೋವಿನ ಮುಖ್ಯ ಲಕ್ಷಣಗಳೆಂದರೆ - ಮರಗಟ್ಟುವಿಕೆ, ಜುಮ್ಮೆನಿಸುವಿಕೆ, ಆಯಾಸದ ಅನುಭವವಾಗುವಿಕೆ, ಭಳಕು ನೋವು, ಭಾರದ ಅನುಭವ, ನುಂಗಲು ಕಷ್ಟವೆನಿಸುವಿಕೆ, ಕಂಪಿಸುವಿಕೆ, ತಲೆ ಅಲುಗಾಡಿದಾಗ ಛಟ- ಛಟ ಶಬ್ದ ಉಂಟಾಗುವಿಕೆ, ತಲೆಸುತ್ತು, ಹಾಲ್ರಸ ಗ್ರಂಥಿಯ ಊತ, ಇತ್ಯಾದಿ. ತಲೆನೋವು, ಮುಖದ ಯಾವುದೇ ಭಾಗದಲ್ಲಿ ನೋವುಂಟಾದಾಗ, ಭುಜದ ನೋವು, ಕೈ ಮರಗಟ್ಟುವುದು ಅಥವಾ ಜುಮ್ಮೆನಿಸುವ ಸಂದರ್ಭಗಳಲ್ಲೂ ಕತ್ತುನೋವುಂಟಾಗಬಹುದು. ಇಂತಹ ಸಂದರ್ಭಗಳಲ್ಲಿ ಕತ್ತಿನ ನರ ಹೊರಳಿ ನೋವು ಕಾಣಿಸಿಕೊಳ್ಳುವ ಸಂಭವ ಉಂಟು. ಬೆನ್ನಿನ ನರ ಹೊರಳಿದಾಗ ಕೈಗಳಲ್ಲಿ ನೋವುಂಟಾದಾಗಲೂ ಕತ್ತು ನೋವು ಕಾಣಿಸಿಕೊಳ್ಳಬಹುದು.




ಮುಂಚಾಚಿದ ಸರ್ವೈಕಲ್ ಬಿಲ್ಲೆ ನರವನ್ನು ಒತ್ತುತ್ತಿರುವುದು.

ಕತ್ತು ಮತ್ತು ಕೈ ನೋವಿಗೆ ನಡೆಸುತ್ತಿದ್ದ ಸಾಂಪ್ರದಾಯಿಕ ಸ್ಪೈನಲ್ ಫ್ಯುಶನ್ ಚಿಕಿತ್ಸಾ ವಿಧಾನ ಇಂದು ಫಲಪ್ರದಾಯಕವಾಗಿಲ್ಲ. ಈ ವಿಧಾನದಲ್ಲಿ ತೊಂದರೆಗೀಡು ಮಾಡುವ ಮುಂಚಾಚಿದ ಸರ್ವೈಕಲ್ ಬಿಲ್ಲೆಯನ್ನು ಕತ್ತರಿಸಿ ಆ ಜಾಗದಲ್ಲಿ ಸೊಂಟದ ಮೂಳೆಯಿಂದ ತೆಗೆದ ಮೂಳೆಯಂಶವನ್ನು ಕಸಿ ಮಾಡುವುದು ವಾಡಿಕೆಯಾಗಿತ್ತು, ಬಹುಪಾಲು ಇದು ಯಶಸ್ವಿ ಚಿಕಿತ್ಸೆಯಾಗಿಯೇ ಪರಿಣಾಮಕಾರಿಯಾಗಿದೆ. ಕೆಲವೊಮ್ಮೆ ಅಡ್ಡ ಪರಿಣಾಮಗಳಿಗೂ ಎಡೆ ಕೊಡುವ ಸಂಭವ ಈ ವಿಧಾನದಲ್ಲಿ ಗಮನಿಸಲಾಗಿದೆ. ಕತ್ತರಿಸಿದ ಭಾಗ ಪುನಶ್ಚೇತನಗೊಳ್ಳುವ ಸಂಭವ, ಕಸಿ ಮಾಡಿದ ಮೂಳೆ/ ಅಸ್ಥಿಕೋಶಗಳು ಕೂಡಿಕೊಳ್ಳದಿರುವಿಕೆ, ಸ್ಪೈನಲ್ ಸಂಧಿಯಲ್ಲಿ ಉರಿಯೂತ ಮುಂತಾದ ಕಾರಣಗಳಿಂದ ಚಿಕಿತ್ಸೆ ಫಲಪ್ರದವಾಗದಿರಬಹುದು. ಕತ್ತು ನೋವಿನ ಸಮಸ್ಯೆ ಎದುರಿಸುತ್ತಿರುವ ಬಹುತೇಕ ಮಂದಿ ಇಂತಹ ಅಡ್ಡ ಪರಿಣಾಮಗಳ ಅರಿವಿಲ್ಲದೇ ಇಂತಹ ಚಿಕಿತ್ಸೆಗೊಳಪಡುತ್ತಿದ್ದಾರೆ. ಈ ಚಿಕಿತ್ಸೆಗಿಂತಲೂ ಉತ್ತಮವಾದದ್ದು ಇಂದು ಲಭ್ಯವಿದೆ ಎನ್ನುವ ಅರಿವು ಮೂಡಿಸುವ ಕಾರ್ಯ ಇಂದಿನ ಅಗತ್ಯ. ಅಂತಹದೊಂದು ಚಿಕಿತ್ಸಾ ವಿಧಾನವೇ **ಕೃತಕ ಸರ್ವೈಕಲ್ ಬಿಲ್ಲೆ ಜೋಡಣೆ.** ಸ್ಪೈನ್ ತಂತ್ರಜ್ಞಾನದಲ್ಲಾಗಿರುವ ಇತ್ತೀಚಿನ ಬೆಳವಣಿಗೆಯಲ್ಲಿ ಇದೊಂದು ಮಹತ್ವದ ಚಿಕಿತ್ಸಾ ವಿಧಾನ. ಈ ವಿಧಾನದಲ್ಲಿ ಕತ್ತಿನ ಚಲನ-ವಲನಗಳನ್ನು ಯಥಾವತ್ತಾಗಿ ಹಿಂಪಡೆಯಬಹುದು. ಹಾಗಾಗಿ ಇದೊಂದು ಜೈವಿಕ ಅನುಕರಣಾ ತಂತ್ರ (Bio-mechanics)ವೇ ಆಗಿದೆ. ಸಾಂಪ್ರದಾಯಿಕ ಶಸ್ತ್ರಚಿಕಿತ್ಸೆಯ ಕುಂದು

ಕೊರತೆಗಳನ್ನು ನಿವಾರಿಸಿ ಸಂಕೀರ್ಣ ವ್ಯವಸ್ಥೆಯನ್ನು ಉತ್ತಮವಾಗಿ ನಿರ್ವಹಿಸಬಲ್ಲ ತಂತ್ರಜ್ಞಾನದ ಅಳವಡಿಕೆಯೇ ಇದು ಎನ್ನಬಹುದು.



ಕೃತಕ ಸರ್ವೈಕಲ್ ಬಿಲ್ಲೆ

ಲೋಹ ಮತ್ತು ಮಾನವ ಶರೀರಕ್ಕೆ ಒಗ್ಗೂಡುವಂತಹ ಪಾಲಿಇಥಿಲೀನ್ ಎಂಬ ಸಂಯುಕ್ತ ವಸ್ತುವನ್ನು ಕೃತಕ ಬಿಲ್ಲೆಯ ತಯಾರಿಕೆಯಲ್ಲಿ ಬಳಸಲಾಗಿದೆ. ಈ ಸಂಯುಕ್ತವು ಕತ್ತಿನ ಎಲುಬುಗಳ ಸತತ ಚಲನೆಗೆ ಅನುವು ಮಾಡಿ ಕೊಡುವುದಲ್ಲದೇ, ಸುಲಭವಾಗಿ ಸವೆಯುವಂತೆ ಮಾಡುವುದಿಲ್ಲ. ಹಾಗಾಗಿ ಇದು ದೀರ್ಘಕಾಲಿಕ. ಚಿಕಿತ್ಸೆಗಾಗಿ ಕತ್ತಿನಬಳಿ ಕೇವಲ 4 ಸೆಂ.ಮೀ. ಉದ್ದದ ಛೇದನ ಮಾಡುವುದರಿಂದ ಹೆಚ್ಚಿನ ರಕ್ತಸ್ರಾವವಾಗುವುದಿಲ್ಲ. ಇಡೀ ಚಿಕಿತ್ಸೆ ಕೇವಲ 2 ಗಂಟೆಗಳ ಅವಧಿಯಲ್ಲಿ ಪೂರೈಸಬಹುದು.

ತೊಡೆ ಮತ್ತು ಮಂಡಿ ಬದಲಿ ಚಿಕಿತ್ಸೆಯಲ್ಲಿ ಕಂಡುಬಂದಿರುವ ಯಶಸ್ವೀ ಚಲನಾ ವಿಧಾನವೇ ಬಿಲ್ಲೆ ಜೋಡಣೆಯಲ್ಲಿಯೂ ಕಂಡುಬಂದಿದೆ, ಬೆನ್ನೂಳೆ ಒಂದು ಸಂಕೀರ್ಣ ರಚನೆಯಾಗಿದ್ದರೂ, ಈ ಕೃತಕ ಚಲನಾ ಸಾಮರ್ಥ್ಯದ ಅನುಕರಣೆಯ ಸವಾಲು ಯಥಾವತ್ತಾಗಿ ಪರಿಣಾಮಕಾರಿಯಾಗಿರುವುದು ಗಮನಾರ್ಹ. ಈ ಚಿಕಿತ್ಸೆಯಲ್ಲಿ ಪ್ರತಿಯೊಂದು ಹಂತದಲ್ಲೂ ಮೂರು ವಿಧದ ಸಂಧಿ-ಬಂಧಗಳನ್ನು ಗಮನಿಸಬೇಕು. ಅವೇ ಬೆನ್ನೂಳೆಯ ನಡುವಣ ಬಿಲ್ಲೆ ಮತ್ತು ಕತ್ತಿನ ಎಲುಬುಗಳ ಎರಡು ಸಂಧಿ ಮೇಲ್ಮೈಗಳು ಗಾಳಿ ಕಳೆದುಕೊಂಡ ಟೈರ್, ಕಾರನ್ನು ಮುಂದೋಡಿಸಲು ಹೇಗೆ ಅಡ್ಡಿಯುಂಟುಮಾಡುತ್ತದೋ, ಹಾಗೆಯೇ ಮುಂಚಾಚಿದ ಕತ್ತಿನ ಮೂಳೆಯ ಬಿಲ್ಲೆ ಕತ್ತಿನ ಚಲನ-ವಲನಕ್ಕೆ ಅಡ್ಡಿ ಮಾಡುವುದು. ಕೃತಕ ಬಿಲ್ಲೆ ಜೋಡಣೆ ಇದಕ್ಕೊಂದು ಪರಿಹಾರ ಮಾರ್ಗವಾಗಬಲ್ಲದು.

ಇಂತಹ ಚಿಕಿತ್ಸೆ ಪಡೆದಿರುವವರು ತಮ್ಮ ಕತ್ತಿನ ಹಿಂದಿನ ಚಲನ-ವಲನಗಳನ್ನು ಹಿಂಪಡೆದಿರುವುದಲ್ಲದೇ, ದೈನಂದಿನ ಚಟುವಟಿಕೆಗಳಿಗೂ ಶೀಘ್ರವಾಗಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಇಂತಹವರಿಗೆ ಯಾವುದೇ ಪುನರ್ ಚಿಕಿತ್ಸೆಯ ಅಗತ್ಯ ಕಂಡುಬಂದಿಲ್ಲ. ಸರ್ವೈಕಲ್ ಬಿಲ್ಲೆಯ ಸವೆತ (Degenerative Cervical Disc Disease - DDD) ದಿಂದ ಬಳಲುತ್ತಿರುವವರು ಕೈ ನೋವು ಮತ್ತು ಮರಗಟ್ಟುವಿಕೆ ಹಾಗೂ ಕೈ ಚಳಕದ ಆಯಾಸಕ್ಕೆ ಒಳಗಾಗುವ ಸಂಭವವಿದೆ. ಬೆನ್ನೂಳೆಯ ನಡುವಣವಿರುವ ಮೆಲ್ಲೆಲುಬು ಬಿಲ್ಲೆಗಳು ವಯಸ್ಸಾದಂತೆ, ಆನುವಂಶಿಕವಾಗಿ ಇಲ್ಲವೇ ದಿನನಿತ್ಯದ ಚಟುವಟಿಕೆಗಳಿಂದ ಸವಕಲಾಗುವುದು ಸಹಜ ಪ್ರಕ್ರಿಯೆ. ಈ ಆಧುನಿಕ ಚಿಕಿತ್ಸಾ ವಿಧಾನ ಇಂತಹವರಿಗೆ ವರದಾನವಾಗಿ ಪರಿಣಮಿಸಿದೆ.

ಪ್ರತಿಯೊಬ್ಬನ ಕತ್ತು ನೋವಿನ ಸಮಸ್ಯೆ ಅದರದರದೇ ಆದ ವಿಶಿಷ್ಟ ಕಾರಣ ಮತ್ತು ಲಕ್ಷಣ ಹೊಂದಿರುವುದರಿಂದ ವಿಶೇಷವಾದ ಚಿಕಿತ್ಸಾ ಕೈಚಳಕ ಅನಿವಾರ್ಯ. ಅವರವರ ಸಮಸ್ಯೆಗಳಿಗೆ ತಕ್ಕಂತೆ ಸೂಕ್ತ ಪರಿಹಾರ ಒದಗಿಸುವುದು ವೈದ್ಯನ ನೈಪುಣ್ಯತೆಗೆ ಹಚ್ಚಬಹುದಾದ ಒರೆಗಲ್ಲು.



**ಹೆಚ್ಚಿನ ಮಾಹಿತಿಗಾಗಿ ಸಂಪರ್ಕಿಸಿ:**

**ಡಾ|| ಅಮೃತ್‌ಲಾಲ್ ಎ. ಮಾಸ್ಕರ್ಹೇನ್ಸ್**
MS (Ortho), FNB - Spine Surgery, fellowship in Minimally Invasive Spine Surgery (Germany)
**Consultant - Spine Surgery & Orthopaedic Surgery**
**Vikram Hospital, Bengaluru**
Mobile : +91-99025-94236
E-mail : amrithlal.mascarenhas@vhpl.com

ಕೃಪೆ: ನವಕರ್ನಾಟಕ ಪ್ರಕಟಣೆಯ 'ಗುರುದೇವ ಮತ್ತು ಮಹಾತ್ಮ' ಎಂಬ ಪುಸ್ತಕದಿಂದ.

# ಮಹಾತ್ಮರಿಗೆ ರವೀಂದ್ರರಿಂದ ಪತ್ರ



## ದೈವೀ ದಂಡನೆ

ಜನವರಿ ೧೫, ೧೯೩೪ರಂದು ಬಿಹಾರದಲ್ಲಿ ಭೀಕರ ಭೂಕಂಪ ಸಂಭವಿಸಿ ಅಪಾರ ಪ್ರಾಣಹಾನಿಯೂ ಆಸ್ತಿಪಾಸ್ತಿಯ ನಷ್ಟವೂ ಉಂಟಾಯಿತು. ಈ ಸಮಯದಲ್ಲಿ ಗಾಂಧೀಜಿಯವರು ಮದರಾಸು ಪ್ರಾಂತದಲ್ಲಿ ಪ್ರವಾಸ ಮಾಡುತ್ತಿದ್ದರು. ಅವರು ತಿರುನೆಲ್ವೇಲಿ ನಗರದಲ್ಲಿ ಭಾಷಣ ಮಾಡುತ್ತಿದ್ದಾಗ ಈ ಭೂಕಂಪವನ್ನು ಭಾರತದಲ್ಲಿ ಅಸ್ಪೃಶ್ಯತೆಯ ಆಚರಣೆಯಿಂದ ನೊಂದು ಕೊಂಡು ಭಗವಂತನು ನೀಡಿದ ದೈವೀದಂಡನೆ ಎಂದು ಬಣ್ಣಿಸಿದರು. ಗಾಂಧೀಜಿಯವರಂಥ ಪ್ರಾಜ್ಞರು ಇಂಥ ಪ್ರಾಕೃತಿಕ ವಿಕೋಪಗಳನ್ನು ಅಸ್ಪೃಶ್ಯತೆಯಂಥ ಸಾಮಾಜಿಕ ಪಿಡುಗುಗಳಿಗೆ ಸಮೀಕರಿಸುವುದು ಸರಿಯಲ್ಲವೆಂದು ಭಾವಿಸಿದ ರವೀಂದ್ರನಾಥ ಠಾಕೂರರು ಗಾಂಧೀಜಿಯವರಿಗೆ ಪತ್ರವೊಂದನ್ನು ಬರೆದು ಒಂದು ಕುತೂಹಲಕಾರಿ ಪತ್ರವ್ಯವಹಾರಕ್ಕೆ ನಾಂದಿ ಹಾಡಿದರು.

ತಿರುನೆಲ್ವೇಲಿ ನಗರವು (ಬ್ರಿಟಿಷರು ಇದನ್ನು ತಿನ್ನವೆಲ್ಲಿ ಎಂದು ಕರೆದಿದ್ದರು) ತಮಿಳುನಾಡಿನ ದಕ್ಷಿಣ ಭಾಗದಲ್ಲಿ ಇರುವ ಜಿಲ್ಲಾ ಕೇಂದ್ರ. ಇಲ್ಲಿನ ಈಡಿಗ ಜನಾಂಗದವರು ಮೇಲ್ಜಾತಿಯವರ ವಿರುದ್ಧ ಪ್ರತಿಭಟಿಸಿ ಸಾಮೂಹಿಕವಾಗಿ ಕ್ರಿಶ್ಚಿಯನ್ ಧರ್ಮಕ್ಕೆ ಮತಾಂತರ ಹೊಂದಿದರು. ಆದುದರಿಂದ ಈ ನಗರವು ಭಾರತದಲ್ಲಿ ಅತ್ಯಂತ ಹೆಚ್ಚು ಶೇಕಡಾವಾರು ಕ್ರಿಶ್ಚಿಯನ್ನರಿರುವ ನಗರವಾಗಿತ್ತು.

### (೧) ರವೀಂದ್ರರ ಪತ್ರ

*[The Mahatma And The Poet, p. ೧೫೬].*

ಶಾಂತಿನಿಕೇತನ

ಜನವರಿ ೨೮, ೧೯೩೪

ಪ್ರಿಯ ಮಹಾತ್ಮಾಜೀ,

ನೀವು ಇತ್ತೀಚಿನ ಒಂದು ಭಾಷಣದಲ್ಲಿ ಬಿಹಾರ್ ಪ್ರಾಂತದಲ್ಲಿ ಕೆಲವು ದಿನಗಳ ಹಿಂದೆ ಸಂಭವಿಸಿದ ಭೂಕಂಪದ ಬಗ್ಗೆ ಮಾತನಾಡುತ್ತ ಹೀಗೆ ನುಡಿದಿದ್ದೀರೆಂದು ಪತ್ರಿಕೆಗಳು ವರದಿ ಮಾಡಿವೆ. ಈ ಭೂಕಂಪವು ನಾವು ಹರಿಜನರೆಂದು ಗುರುತಿಸುವ ಜನರ ಮೇಲೆ ಎಸಗಿದ ಅಸ್ಪೃಶ್ಯತೆಯ ಮಹಾಪಾಪಕ್ಕೆ ಪ್ರತಿಯಾಗಿ ನಮ್ಮ ಮೇಲೆ ಎರಗಿದ ದೈವೀದಂಡನೆಯಾಗಿದೆಯೆಂದು ನಂಬಲು ನೀವೆಲ್ಲ ನನ್ನೊಡನೆ ನನ್ನಷ್ಟೇ ಮೂಢನಂಬಿಕೆಯುಳ್ಳವರಾಗಬೇಕೆಂದು ನಾನು ಅಪೇಕ್ಷಿಸುತ್ತೇನೆ. ಇದನ್ನು ನಂಬಲು ನನಗೆ ಕಷ್ಟವಾಗುತ್ತದೆ. ಆದರೆ ಇದು ನಿಜವಾಗಿಯೂ ನಿಮ್ಮ ಅಭಿಪ್ರಾಯವಾಗಿದ್ದರೆ ಅದನ್ನು ವಿರೋಧಿಸದೆ ಇರಲಾಗದು. ನಿಮ್ಮ ಅಭಿಪ್ರಾಯಕ್ಕೆ ನನ್ನ ಪ್ರತಿವಾದವನ್ನು ಈ ಮೂಲಕ ಕಳುಹಿಸುತ್ತಿದ್ದೇನೆ. ಪತ್ರಿಕೆಗಳಲ್ಲಿ ನಿಮ್ಮ ಮಾತು ಸರಿಯಾಗಿಯೇ ವರದಿಯಾಗಿದ್ದರೆ ನನ್ನ ಈ ಪ್ರತಿವಾದವನ್ನು ನೀವು ಪತ್ರಿಕೆಗಳಲ್ಲಿ ಪ್ರಕಟಪಡಿಸಲು ಕಳುಹಿಸುವಿರಾ? ನಾನು ಸತ್ಯವಲ್ಲದ ವಿಷಯಗಳನ್ನು ತೆಗೆದುಕೊಂಡು ನಿಮ್ಮನ್ನು ಟೀಕಿಸುವ ವ್ಯಕ್ತಿಯಲ್ಲವಾದುದರಿಂದ ಇದನ್ನು ನಾನು ಪತ್ರಿಕೆಗಳಿಗೆ ಕಳುಹಿಸದೆ ನಿಮಗೆ ಕಳುಹಿಸಿದ್ದೇನೆ.

ನಾನು ಇಲ್ಲಿ ನಿಮ್ಮ ಮುಂದಿನ ಭೇಟಿಗಾಗಿ ಕಾಯುತ್ತಿದ್ದೇನೆ.

ಗಾಢವಾದ ಪ್ರೀತಿಯೊಂದಿಗೆ,

ಸದಾ ನಿಮ್ಮವ,

ರವೀಂದ್ರನಾಥ ಠಾಕೂರ್

### (೨) ರವೀಂದ್ರನಾಥ ಠಾಕೂರರ ಪತ್ರಿಕಾ ಪ್ರಕಟಣೆ

ಈ ನಡುವೆ ಕೋಮುವಾದಿ ಪ್ರಾತಿನಿಧ್ಯಕ್ಕೆ ಸಂಬಂಧಿಸಿದ ಪೂನಾ ಒಪ್ಪಂದದಿಂದ ಬಂಗಾಲಕ್ಕೆ ಉಂಟಾದ ಅನ್ಯಾಯ, ಅಸ್ಪೃಶ್ಯತೆಯ ಪಾಪದ ಹೊರೆಯಿಂದ ಬಿಹಾರದಲ್ಲಿ ಭೂಕಂಪ ಸಂಭವಿಸಿತೆಂಬ ಗಾಂಧೀಜಿಯವರ ಧೋರಣೆ – ಇತ್ಯಾದಿ ಕೆಲವು ಕಾರಣಗಳಿಂದ ಗಾಂಧೀಜಿಯವರ ಬಗ್ಗೆ ಬಂಗಾಲದಲ್ಲಿ ವ್ಯಾಪಕವಾದ ಅವಹೇಳನಕಾರೀ ಟೀಕೆಗಳು ಬರಲಾರಂಭಿಸಿದುವು. ಇದರಿಂದ ಬಲು ನೊಂದುಕೊಂಡ ರವೀಂದ್ರನಾಥ ಠಾಕೂರರು ಗಾಂಧೀಜಿಯವರನ್ನು ಸಮರ್ಥಿಸಿ ಒಂದು ಪತ್ರಿಕಾ ಪ್ರಕಟಣೆಯನ್ನು ನೀಡಿದರು.

*The Mahatma And The Poet, p. 157]೧೫೭*

ಶಾಂತಿನಿಕೇತನ

ಫೆಬ್ರವರಿ ೬, ೧೯೩೪

ಕಳೆದ ಕೆಲವು ಕಾಲದಿಂದಲೂ ಮಹಾತ್ಮಾ ಗಾಂಧೀಜಿಯವರ ಇತ್ತೀಚಿನ ಕಾರ್ಯ ಚಟುವಟಿಕೆಗಳ ಬಗ್ಗೆ ನಮ್ಮ ದೇಶಬಾಂಧವರ ಒಂದು ವರ್ಗದಲ್ಲಿ ದ್ವೇಷಭಾವನೆ ಬೆಳೆಯುತ್ತಿರುವುದನ್ನು ನಾನು ಗಮನಿಸುತ್ತಿದ್ದೇನೆ. ಯಾವುದಾದರೂ ಭಿನ್ನಾಭಿಪ್ರಾಯವಿದ್ದರೆ ನೈಜವಾದ ವಿಮರ್ಶಾತ್ಮಕ ಟೀಕೆಗೆ ನನ್ನ ಆಕ್ಷೇಪವೇನಿಲ್ಲ. ಆದರೆ ಯಾವಾಗಲೂ ಟೀಕೆಗೂ ದೂಷಣೆಗೂ ವ್ಯತ್ಯಾಸವಿರುತ್ತದೆ. ನಿಜವಾಗಿಯೂ ಶ್ರೇಷ್ಠನಾದವನಿಗೆ ಜನಸಮೂಹದ ಸುಲಭ ಸ್ತುತಿಯಾಗಲಿ, ಅಗ್ಗದ ಅಪಹಾಸ್ಯವಾಗಲಿ ಯಾವುದೇ ಪರಿಣಾಮವನ್ನು ಬೀರುವುದಿಲ್ಲ. ಮಹಾತ್ಮಾ ಗಾಂಧೀಜಿಯವರಲ್ಲಿ ಇಂಥ ಶ್ರೇಷ್ಠತೆ ಇದೆಯೆಂದು ನನಗೆ ತಿಳಿದಿದೆ. ಆದರೂ ಕೂಡ ಅವರ ವಿರುದ್ಧ ಮಿಥ್ಯಾಪವಾದದ ಪ್ರಚಾರ ಮಾಡುವುದನ್ನು ಪ್ರತಿಭಟಿಸಲು ದನಿಯೆತ್ತದಿದ್ದರೆ ನಾನು ಕರ್ತವ್ಯಲೋಪ ಮಾಡಿದಂತಾದೀತು. ಏಕೆಂದರೆ ಮಹಾತ್ಮಾಜೀಯವರು ಶತಮಾನಗಳ ದಾಸ್ಯದಿಂದಾಗಿ ಕೀಳರಿಮೆಯಿಂದ ನಿರಾಸೆಯ ಹೂಳಿನಲ್ಲಿ ಮುಳುಗಿದ್ದ ನಮ್ಮ ಜನರನ್ನು ಮೇಲೆತ್ತಲು ಮಹತ್ತರವಾದ ಪ್ರಯತ್ನವನ್ನು ಮಾಡಿದ ಏಕೈಕ ವ್ಯಕ್ತಿಯಾಗಿದ್ದಾರೆ. ಅವರ ಸಂದೇಶದಿಂದಾಗಿ ಮೂಡಿದ ಆಶಾಕಿರಣ ಹಾಗೂ ಶ್ರದ್ಧೆ ರಾತ್ರಿ ಬೆಳಗಾಗುವುದರೊಳಗೆ ಎಂಬಂತೆ ಜನರ ದೃಷ್ಟಿಕೋನವನ್ನೇ ಬದಲಾಯಿಸಿವೆ. ಶತಮಾನಗಳಿಂದಲೂ ಅತ್ಯಂತ ಸಹನೆಯಿಂದ ಅಪಮಾನದ ಹೊರೆಯನ್ನೇ ತಲೆಯ ಮೇಲೆ ಹೊತ್ತುಕೊಂಡು ಇದು ಶಾಶ್ವತವಾದುದೆಂದೇ ನಂಬತೊಡಗಿರುವ ಈ ಜನರ ಹೃದಯಗಳಲ್ಲಿ ಮಹಾತ್ಮಾಜೀಯವರು ಧೈರ್ಯ ಹಾಗೂ ಆತ್ಮಗೌರವದ ಸ್ಫೂರ್ತಿಯನ್ನು ತುಂಬಿದ್ದಾರೆ. ಇಂಥ ಅದ್ಭುತ ಪವಾಡವನ್ನು ಮಾಡಿದ ಈ ವ್ಯಕ್ತಿಗೆ ನಾವು ಶ್ಲಾಘನೆಯ ಗೌರವಾರ್ಪಣೆ ಮಾಡದಿರಲು ಸಾಧ್ಯವಿಲ್ಲ.

ಆಗೊಮ್ಮೆ ಈಗೊಮ್ಮೆ ಉಂಟಾಗಬಹುದಾದ ಭಿನ್ನಾಭಿಪ್ರಾಯದಿಂದಾಗಿ ಇಷ್ಟೊಂದು ಶುದ್ಧ ಅರ್ಪಣಾ ಮನೋಭಾವದ ಒಂದು ಬಾಳನ್ನು ಹಳಿಯುವುದು ಸಾರ್ವಜನಿಕ ಕೃತಘ್ನತೆಯ ಅಲ್ಪತನವನ್ನು ತೋರಿಸುತ್ತದೆ. ನಾನೂ ಕೂಡ ಆಗಾಗ ಅವರೊಡನೆ ಸಾರ್ವಜನಿಕವಾಗಿಯೇ ಭಿನ್ನಾಭಿಪ್ರಾಯವನ್ನು ತಾಳಿದ್ದುಂಟು. ಇತ್ತೀಚೆಗೆ ಬಿಹಾರದಲ್ಲಿ ನಡೆದ ಭೂಕಂಪದಿಂದಾದ ವಿನಾಶವು ಅಸ್ಪೃಶ್ಯತೆಯ ಪಾಪದಿಂದಾಗಿ ಒದಗಿದ ಒಂದು ದೈವೀದಂಡನೆಯೆಂಬ ಅವರ ನಂಬಿಕೆಯನ್ನು ನಾನೂ ಟೀಕಿಸಿದ್ದೇನೆ. ಆದರೆ ಅವರ ಧಾರ್ಮಿಕ ನಂಬಿಕೆಗಳ ಪ್ರಾಮಾಣಿಕತೆಯ ಬಗ್ಗೆ ಹಾಗೂ ದೀನ ದಲಿತರ ಬಗ್ಗೆ ಅವರಿಗಿರುವ ಅಪಾರವಾದ ಪ್ರೀತಿಯ ಬಗ್ಗೆ ನನಗೆ ಅತ್ಯಂತ ಅಭಿಮಾನವಿರುವುದರಿಂದ ನನ್ನೊಡನೆ ಅವರಿಗಿರುವ ಭಿನ್ನಾಭಿಪ್ರಾಯದ ಹೊರತಾಗಿಯೂ ನಾನು ಅವರನ್ನು ಗೌರವಿಸುತ್ತೇನೆ.

ನಾನು ಮಹಾತ್ಮಾಜೀಯವರನ್ನು ಬಂಗಾಲ ಪ್ರಾಂತಕ್ಕೆ ಸ್ವಾಗತಿಸುತ್ತ ನನ್ನ ಪ್ರಾಂತದ ಜನರೂ ನಮ್ಮ ತಾಯ್ನಾಡಿನ ಸೇವೆಯಲ್ಲಿ ಮಹಾತ್ಮಾಜೀಯವರ ಬಾಳಿನ ಉಪಯುಕ್ತತೆಯ ಮಹತ್ವವನ್ನರಿತು ಅವರನ್ನು ಸ್ವಾಗತಿಸಲು ನನ್ನೊಡನೆ ಸೇರಬೇಕೆಂದು ವಿನಂತಿಸುತ್ತೇನೆ.

- ರವೀಂದ್ರನಾಥ ಠಾಕೂರ್

# ಪುಟಕ್ಕನ ಹೈವೇ ಒಂದು ನೋಟ

ವಿಷ್ಣು ನಾಯ್ಕ

ಇತ್ತೀಚಿನ ವರ್ಷಗಳಲ್ಲಿ ಕಮರ್ಷಿಯಲ್ ಚಿತ್ರಗಳು ತುಳಿದ ಹಾದಿಯಿಂದ ಸಾಕಷ್ಟು ಆತಂಕಕ್ಕೆ ಒಳಗಾದವರಲ್ಲಿ ನಾನೂ ಒಬ್ಬ. ರಂಜನೆಯ ಹೆಸರಿನಲ್ಲಿ, ಹಾಸ್ಯದ ಹೆಸರಿನಲ್ಲಿ, ರೋಮಾಂಚಕತೆಯ ಹೆಸರಿನಲ್ಲಿ, ರೋಚಕತೆಯ ಹೆಸರಿನಲ್ಲಿ, ನಮ್ಮ ಎಳೆಯ ತಲೆಮಾರನ್ನು ಭ್ರಮಾಧೀನ ಜಗತ್ತಿನತ್ತ ತಿರುಗಿ ಬರಲಾರದಷ್ಟು ದೂರಕ್ಕೆ ಕೆಲವು ಚಲನಚಿತ್ರ ತಯಾರಕರು - ನಿರ್ದೇಶಕರು ತಳ್ಳುತ್ತಿರುವುದನ್ನು ನೆನೆದಾಗೆಲ್ಲ, ಕಲೆಯೆಂದರೆ ಇಷ್ಟೇನೇ ?... ಇವುಗಳಾಚೆಯ ಸಾಧ್ಯತೆಗಳೆಲ್ಲ ಸತ್ತುಹೋದವೆ ?... ಅಥವಾ ಉಸಿರುಕಟ್ಟಿ ನಿಂತಿವೆಯೇ ?... ಎಂದೆಲ್ಲ ಕೇಳಿಕೊಂಡದ್ದುಂಟು. ಸಿನೆಮಾ ನೋಡುವುದನ್ನು ಬಿಟ್ಟುಬಿಡುವುದೊಂದೇ ಸದ್ಯದ ಮನಃಸ್ಥಿತಿಗೆ ಸರಿಯಾದ ದಾರಿ ಅಂದುಕೊಂಡದ್ದೂ ಇದೆ.

ಈ ನಡುವೆ, ಮರುಭೂಮಿಯೊಳಗೆ ಓಯಸಿಸ್ ಕಂಡಂತೆ ಆಗೊಮ್ಮೆ ಈಗೊಮ್ಮೆ ನಮ್ಮ ಒಳಗಿನ ಆಲೋಚನಾ ಕ್ರಮವನ್ನು ಇನ್ನಷ್ಟು ನೇರಗೊಳಿಸುವಂಥ, ಸಮರ್ಥ ಒಳನೋಟದಿಂದ ಖುಷಿ ಕೊಡುವಂಥ, ಕಡಿಮೆ ಮಾತಿನಲ್ಲಿ ಹೆಚ್ಚು ಅರ್ಥ ಹಿಡಿದಿಡುವಂಥ, ಸಂಕೇತಗಳ ಮೂಲಕವೇ ಅತ್ಯದ್ಭುತ ಸಾಧ್ಯತೆಗಳನ್ನು ತೆರೆದಿಡುವಂಥ ಚಿತ್ರಗಳು ಬಂದಿರುವುದೂ ಇದೆ. ಗಿರೀಶ ಕಾಸರವಳ್ಳಿ, ಬರಗೂರು ರಾಮಚಂದ್ರಪ್ಪ, ಬಿ. ಸುರೇಶ ಮುಂತಾದ ಗೆಳೆಯರು ಅಂಥ ಪ್ರಯತ್ನದಲ್ಲೇ ಹೆಚ್ಚು ಸಂತೋಷವನ್ನು ಅನುಭವಿಸುತ್ತಿದ್ದಾರೆ; ಮಾತ್ರವಲ್ಲ, ಆ ಮೂಲಕ ರಾಷ್ಟ್ರ ಮತ್ತು ಅಂತರರಾಷ್ಟ್ರೀಯ ಕಲಾತ್ಮಕ ಕಣ್ಣುಗಳಲ್ಲಿ ಕರ್ನಾಟಕದ ಪ್ರತಿಭೆಗಳ ಬಗ್ಗೆ, ಕನ್ನಡ ಭಾಷೆಯ ಸತ್ವದ ಬಗ್ಗೆ ಗೌರವದ ಸ್ಥಾನವನ್ನು ಹಿಡಿದಿಟ್ಟಿದ್ದಾರೆ.

*          *          *

'ಪುಟಕ್ಕನ ಹೈವೇ' ನಾನು ನೋಡಿದ ಇತ್ತೀಚಿನ ಗುಣಾತ್ಮಕ ಚಿತ್ರಗಳಲ್ಲಿ ಒಂದು. ಗೆಳೆಯ ಬಿ. ಸುರೇಶ ಅವರು ಈ ಚಿತ್ರದ ಯಶಸ್ಸಿಗಾಗಿ ತಮ್ಮ ಸೃಜನಶೀಲ ಶಕ್ತಿಯನ್ನೇ ಒರೆಗೆ ಹಚ್ಚಿದಂತಿದೆ. ಇದಕ್ಕೆ 'ಅತ್ಯುತ್ತಮ ಪ್ರಾದೇಶಿಕ ಚಿತ್ರ' ಎಂಬ ರಾಷ್ಟ್ರೀಯ ಮನ್ನಣೆ ದೊರೆತ ಕಾರಣಕ್ಕಾಗಿ ನಾನು ಒಂದಕ್ಷರವನ್ನೂ ಹೆಚ್ಚುವರಿಯಾಗಿ ಬಳಸುತ್ತಿಲ್ಲ. ಪ್ರತಿಭೆ ಮತ್ತು ಪ್ರಶಸ್ತಿಗಳು ಬಹಳಷ್ಟು ಸಂದರ್ಭಗಳಲ್ಲಿ ನಿರೀಕ್ಷೆಯ ಆಚೆ ಕೆಲಸ ಮಾಡುತ್ತವೆ. ಅಪರೂಪಕ್ಕೊಮ್ಮೆ ಅವು ಮುಖಾಮುಖಿಯಾಗಿ ಪರಸ್ಪರ ಕೈ ಕುಲುಕುವುದೂ ಉಂಟು. ಈ ಚಿತ್ರದ ವಿಚಾರದಲ್ಲಿ ಅಂಥ ನೆಮ್ಮದಿಯ ಬೆಳವಣಿಗೆ ಆಗಿರುವುದಕ್ಕೆ ಸಂತೋಷಪಡುತ್ತೇನೆ, ಅಷ್ಟೇ.

ಈ ಚಿತ್ರದ ಅನನ್ಯತೆ ಇರುವುದು ನನ್ನ ದೃಷ್ಟಿಯಲ್ಲಿ, ಅಭಿವೃದ್ಧಿಯ ಕಾರಣ ಮುಂದಿಟ್ಟುಕೊಂಡು, ರಾಜಕೀಯ ವೇದಿಕೆಗಳು ಪರಸ್ಪರ ದೋಷಾರೋಪಣೆಗೆ ತೊಡಗುವ ಮೂಲಕ ಪ್ರಜ್ಞಾವಂತ ಪ್ರಜೆಗಳಿಗೆ ಅಭಿವೃದ್ಧಿ ಎಂಬ ಪದವೇ ಕ್ಲೀಷೆಯಾಗಿ ತೋರುವಂತಾದ ಪ್ರಸ್ತುತ ಸಂದರ್ಭದಲ್ಲೇ, ಅಂಥದೇ ಒಂದು ವಸ್ತುವನ್ನು ತನ್ನ ಸಿನೆಮಾ ಕತೆಗೆ ಆಯ್ಕೆ ಮಾಡಿಕೊಂಡು ವಿಭಿನ್ನವಾದ ನಡಿಗೆಯ ಮೂಲಕ ಹೊಸತನ ಉಳಿಸಿಕೊಂಡ ಕ್ರಮದಲ್ಲಿ! 'ಪುಟಕ್ಕನ ಹೈವೇ' ಚಿತ್ರದಲ್ಲಿ ನಾಯಕ-ನಾಯಕಿಯರೇ ಕಾಣುತ್ತಿಲ್ಲ ಎಂಬುದೇ ನಾನು ಪ್ರಸ್ತಾಪಿಸಿದ ಅನನ್ಯತೆಯ ಭಾಗಗಳಲ್ಲಿ ಒಂದು ! ಪುಟಕ್ಕ, ಅವಳು ನೆಚ್ಚಿದ ನೆಲ, ಅಭಿವೃದ್ಧಿಯ ಹೆಸರಿನಲ್ಲಿ ಅದು ಕೈತಪ್ಪಿಹೋಗುವ ಬೆಳವಣಿಗೆಗಳು, ಹಾಗೆ ಕೈತಪ್ಪಿ ಹೋಗಲಿದ್ದ ನೆಲದಲ್ಲಿ ತಾನು ಅಪಾರವಾಗಿ ಪ್ರೀತಿಸುವ ಗಂಡನ ಆತ್ಮ ಬೆರೆತುಕೊಂಡಿದೆ ಎಂಬ ಅವಳ ಒಳಪ್ರಪಂಚದ ತಳಮಳ, ಹೇಗಾದರೂ ಮಾಡಿ ಆ ನೆಲವನ್ನು ಉಳಿಸಿಕೊಳ್ಳಲೇಬೇಕೆಂದು ಗ್ರಾಮಚಾವಡಿಯಿಂದ ರಾಜಧಾನಿಯ ವರೆಗಿನ ಎಲ್ಲ ಹಂತದ ದೊರೆಗಳ ಕೈಕಾಲು ಹಿಡಿದುಕೊಳ್ಳಲು ಅವಳು ನಡೆಸುವ ವ್ಯರ್ಥ ಪ್ರಯತ್ನ, ಹೋರಾಟಗಳು – ಇವು ಎಲ್ಲೂ ಬ್ಯಾಲನ್ಸ್ (ತೋಲ) ಕಳೆದುಕೊಂಡಂತೆ ನನಗೆ ಅನಿಸಿಲ್ಲ. ಮುಖ್ಯಮಂತ್ರಿಗಳು ಮಾತ್ರವೇ ಅವಳ ಸಮಸ್ಯೆಗೆ ಏನಾದರೂ ಪರಿಹಾರ ಸೂಚಿಸಬಹುದಾದ ಏಕೈಕ ವ್ಯಕ್ತಿ ಎಂಬ ಅಭಿಪ್ರಾಯ ಡಿ.ಸಿ. ಸಾಹೇಬರಿಂದಲೇ ಬಂದಾಗ ರಾಜಧಾನಿಗೆ ಹೊರಟುನಿಂತ ನಿರಕ್ಷರಿ ಹಳ್ಳಿ ಹೆಣ್ಣು ಪುಟಕ್ಕನ ತೀರ್ಮಾನದ ಒಳಗೇ, ಒಬ್ಬ ನೆಲನಿಷ್ಠೆಯ ರೈತನ ಮಣ್ಣಿನ ಪ್ರೀತಿ, ಸೆಳೆತ, ನಂಬಿಕೆಗಳೆಲ್ಲವೂ ಧ್ವನಿತರಂಗಗಳ ರೂಪದಲ್ಲಿ ಅನಾವರಣಗೊಳ್ಳುತ್ತವೆ.

ಕೈ ಬಿಟ್ಟುಹೋದ ಗಂಡ, ಈಗಾಗಲೇ ತನ್ನದೆನ್ನುವ ಮಣ್ಣಿನ ಭಾಗವಾಗಿದ್ದಾನೆ. ಮುದ್ದಿನ ಏಕೈಕ ಮಗಳನ್ನು ಇನ್ನೊಬ್ಬರ ಮನೆಯಲ್ಲಿ ಇಟ್ಟು, ಮುಖ್ಯಮಂತ್ರಿಗಳನ್ನು ಕಾಣಲು ನಗರಕ್ಕೆ ಹೊರಟ ಪುಟಕ್ಕನಿಗೆ ನಗರ ಜೀವನದ ಕಾಣದ ಕೈಗಳ ಅನುಭವ ಆಗುತ್ತದೆ.





ಅಕ್ಷರಶಃ ಅನಾಥೆಯಾಗಿ ನಿಂತ ಹಂತದಲ್ಲೂ ನೆಲದ ಸೆಳೆತ ಕಡಿಮೆಯಾಗುವುದಿಲ್ಲ. ಆದರೆ ಸರಕಾರವೇ ಬಿದ್ದು ಹೋಗಿದೆ ಎಂಬ ಸುದ್ದಿಯಿಂದ ತೀರಾ ಆಘಾತಕ್ಕೆ ಒಳಗಾದ ಪುಟ್ಟಕ್ಕ (ಏನೇನೋ ಮಾಡಿ) ಗೂಡಿಗೆ ಮರಳಿದಾಗ ಚಿತ್ರವೇ ಬದಲು! ಒಂದು ಅದ್ಭುತ ಸಂಕೇತವನ್ನು ಇಲ್ಲಿ ನಿರ್ದೇಶಕರು ಇಟ್ಟಿದ್ದಾರೆಂಬುದನ್ನು ಗ್ರಹಿಸುವುದಕ್ಕೂ ಕೂಡ ಪ್ರೇಕ್ಷಕರಿಗೆ ಮಾನಸಿಕ ಸಿದ್ಧತೆ ಬೇಕೇನೊ! ಅಪ್ಪಟ ಗ್ರಾಮೀಣ ಸೊಗಡಿನ ಅವಳ ಪರಿಸರ, ಆಧುನಿಕ ಬುಲ್ಡೋಜರಿನ ಹತಿಗೆ ಸಿಕ್ಕು ಅತ್ಯಾಧುನಿಕ ಆಕಾರ ಪಡೆಯುತ್ತದೆ. ಪುಟ್ಟಕ್ಕನ ಕಣ್ಣುಗಳು ಅದನ್ನೆಲ್ಲ ನೋಡಲಾಗದೇ ನೋಡುತ್ತ ಮನೆ ಹೊಸ್ತಿಲು ತುಳಿದ ಹೊತ್ತಿಗೇ, ತನ್ನ ಮುಗ್ಧ ಮಗಳು ತುಟಿಗೆ ಲಿಪ್‌ಸ್ಟಿಕ್ ಹಚ್ಚಿ, ಕೌಮಾರ್ಯವನ್ನು ಕಳಕೊಂಡ ಘೋರ ಸತ್ಯಕ್ಕೆ ಮುಖಾಮುಖಿಯಾಗಬೇಕಾಗುತ್ತದೆ! ಇವೆರಡೂ ಬೇರೆ ಬೇರೆಯಲ್ಲ, ದುಡ್ಡು ಮಗಳ ಕೌಮಾರ್ಯವನ್ನೇ ಕೊಂಡುಕೊಂಡಿದೆ. ಇತ್ತ ಆ ಹೆಣ್ಣಿನ ಗತಿಯೇ ಅವಳ ಸೂರಿರುವ ಈ ಮಣ್ಣಿಗೂ ಒದಗಿದೆ. ಹೀಗೆ ಹೆಣ್ಣು-ಮಣ್ಣುಗಳೆರಡೂ ಏಕಕಾಲಕ್ಕೆ ಆಧುನಿಕ ರೋಡ್‌ರೋಲರುಗಳ ಹಲ್ಲಿಗೆ ಈಡಾಗುವ ಕ್ರಿಯೆ ಇದೆಯಲ್ಲ, ಇದು ಅಭಿವೃದ್ಧಿ ಮತ್ತು ಪ್ರಗತಿಗಳ ಹೆಸರಿನಲ್ಲಿ ಗ್ರಾಮೀಣ ಬದುಕನ್ನು ಛಿದ್ರಗೊಳಿಸುವ ಯಂತ್ರರಾಕ್ಷಸನ ಅಪಾಯದ ಸಂಕೇತವಾಗಿ ನಮ್ಮನ್ನು ತಟ್ಟದೇ ಹೋದರೆ ಈ ಚಿತ್ರಕ್ಕಾಗಿ ದುಡಿದ ಮನಸುಗಳಿಗೆ ಅನ್ಯಾಯ ಮಾಡಿದಂತೆ.

ಪುಟ್ಟಕ್ಕನ ಮನೆಯಿರುವ ಜಾಗದಲ್ಲೇ ಹೈವೇ ಹಾದುಹೋಗುತ್ತದೆ. ಪ್ರತಿದಿನ ಸಾವಿರಾರು ವಾಹನಗಳು ಅಲ್ಲಿಂದ ಹರಿಯುತ್ತಿರುತ್ತವೆ ಎಂಬ ಪ್ರಥಮ ಮಾಹಿತಿ ಪುಟ್ಟಕ್ಕನಂಥವಳಿಗೆ ಆಘಾತದ ಸುದ್ದಿಯಾದರೆ, ಅವಳ ಅಕ್ಕ-ಪಕ್ಕದಲ್ಲೇ ಇರುವ ಕೆಲವು ಕ್ಷುದ್ರ-ಕ್ಷಣಸುಖದ ಹಪಹಪಿಗಳಿಗೆ ಲಾಭಗಿಟ್ಟಿಸುವ ದಾರಿ ಕಂಡುಕೊಳ್ಳುವುದಕ್ಕೆ ಪ್ರೇರಣೆಯಾಗುತ್ತದೆ. ಸದಾ ಅವಳ ಬೆತ್ತಲಾದ ಹಣೆಯ ದುರುಪಯೋಗಕ್ಕೆ ನಾಜೂಕಾದ ಪ್ರಯತ್ನ ನಡೆಸುವ ಶನಿಕೃಷ್ಣ ಇವರಲ್ಲಿ ಮುಖ್ಯ. ಇನ್ನೂ ಸಾಕಷ್ಟು ಪ್ರಾಯ ತುಂಬಿರುವ, ಆದರೆ ವೈಧವ್ಯದ ವಾಸ್ತವವನ್ನು ಜೀರ್ಣಿಸಿಕೊಳ್ಳಲೇ ಬೇಕಾದ ಅನಿವಾರ್ಯತೆಯಲ್ಲಿರುವ ಪುಟ್ಟಕ್ಕ ತನ್ನ ನೆಲ ಉಳಿಸಿಕೊಳ್ಳುವ ಹೋರಾಟದ ಉದ್ದಕ್ಕೂ ಅವಳ ಹಿತೈಷಿಯಂತೆ ನಟಿಸುವ ಈ ಹರಿದಾಸ ಕೃಷ್ಣ, ಪುಟ್ಟಕ್ಕನನ್ನು ಎಲ್ಲೆಲ್ಲಿ ದಿಕ್ಕು ತಪ್ಪಿಸಬಹುದೋ ಅಲ್ಲೆಲ್ಲ ತನ್ನ ಕೈಯಾಡಿಸುತ್ತಲೇ ಇರುತ್ತಾನೆ. ಏಕಕಾಲಕ್ಕೆ ದುಡ್ಡು ಮತ್ತು ದೇಹ ಇವೆರಡನ್ನೂ ಒಳಗೆ ಹಾಕಿಕೊಳ್ಳಬೇಕೆಂದಿದ್ದ ಅವನ ಎರಡನೆಯ ಪ್ರಯತ್ನ ಯಶಸ್ವಿಯಾಗುವುದಿಲ್ಲವಾದರೂ ಅವಳ ಸೋಲಿನಲ್ಲಿ ಎಲ್ಲೋ ಒಂದುಕಡೆ ಇಂಥವರ ಪಾತ್ರವೂ ಬೆಸೆದುಕೊಂಡಿದೆ ಅನಿಸುತ್ತದೆ. ಒಂದು ನೆಮ್ಮದಿಯ ಸಮಾಜದ ಅಂಗವಿಕಲತೆಗೆ ಈ ಕೃಷ್ಣ ಅತ್ಯುತ್ತಮ ರೂಪಕ ಎಂಬುದನ್ನು ನಿರ್ದೇಶಕ ಬಿ. ಸುರೇಶ ಅವರು ಅವನನ್ನು ಒಕ್ಕಾಲಿನ ಪಾತ್ರವಾಗಿಸುವ ಮೂಲಕವೇ ಬಿಂಬಿಸಿದ್ದಾರೆ.

ಶನಿಕೃಷ್ಣನಾಗಿ ಪ್ರಕಾಶ ರೈ ಅವರು ನಟಿಸಿರುವ ರೀತಿ ಕತೆ ಮತ್ತು ಪಾತ್ರ ಪೋಷಣೆಯ ದೃಷ್ಟಿಯಿಂದ ಅತ್ಯುತ್ತಮ ಮಾದರಿಯದು. ಪುಟ್ಟಕ್ಕನಾಗಿ ಶ್ರುತಿಯ ಅಭಿನಯ ಕೂಡ ಅತ್ಯಂತ ಸಹಜವಾಗಿದೆ. ಒಂದು ಹೆಣ್ಣುಜೀವ ಹೆಂಡತಿಯಾಗಿ, ತಾಯಿಯಾಗಿ, ನೆಲದ ಮಗಳಾಗಿ ಮಾಡಬಹುದಾದ ಕರ್ತವ್ಯಗಳನ್ನೂ - ಹೋರಾಟಗಳ ಸಾಧ್ಯತೆಯನ್ನೂ ಶ್ರುತಿಯ ಮೂಲಕ - ಚಿತ್ರದ ನಿರ್ಮಾಪಕರೂ ಆಗಿರುವ ನಿರ್ದೇಶಕರು – ಮನಂಬುಗುವಂತೆ ಬಿಡಿಸಿಟ್ಟಿದ್ದಾರೆ.

ಈ ಚಿತ್ರ ನೋಡುವಾಗ ನನ್ನ ಸಮೀಪವೇ ಕುಳಿತಿದ್ದ, ನಮ್ಮ ಮಧ್ಯದ ಅನುಭವೀ ಕಾದಂಬರಿಕಾರ ಎಸ್. ಎಲ್. ಭೈರಪ್ಪ ಅವರು, ''ಚಿತ್ರದ ದೊಡ್ಡ ಮಿತಿಯೆಂದರೆ ಪಾತ್ರಗಳ ಮೂಲಕ ಹೆಚ್ಚು ಮಾತನಾಡಿಸಿದ್ದು'', ಎಂದರು. ಆಗ ನನಗೆ ತತ್‌ಕ್ಷಣ ಮೂಡಿದ್ದು – ಒಂದು ನೂರು ಪುಟಗಳಲ್ಲಿ ಹೇಳಬಹುದಾದ ಇವರ ಕಾದಂಬರಿಯ ಕಥಾವಸ್ತುವನ್ನು ನಾಲ್ಕೈದು ನೂರು ಪುಟಗಳವರೆಗೆ ಬೆಳೆಸುವುದಾದರೂ ಯಾಕೆ ?... ಎಂಬ ಪ್ರಶ್ನೆ, ಅದಿರಲಿ.

ವಾಸ್ತವವಾಗಿ ಈ ಚಿತ್ರದಲ್ಲಿ ಯಾರ ಮಾತೂ ಅನಗತ್ಯ ಎಂಬಂತೆ ಬಂದೇ ಇಲ್ಲ. ಇರುವವರಲ್ಲಿ ಶನಿಕೃಷ್ಣನೇ ಹೆಚ್ಚು ಮಾತನಾಡುವವನು. ಅದಕ್ಕೆ ಕಾರಣವಿದೆ. ಆತ ಪ್ರವೃತ್ತಿಯಲ್ಲಿ ಹರಿಕತೆ ಹೇಳುವವನು. ಕಡ್ಡಿಯನ್ನು ಗುಡ್ಡಮಾಡಿ ವರ್ಣಿಸುವುದು ಇಂಥವರ ಜಾಯಮಾನ. ಉಳಿದಂತೆ ಪ್ರಧಾನ ಪಾತ್ರವಾದ ಪುಟ್ಟಕ್ಕನೂ ಕೂಡ ಹೆಚ್ಚು ಮಾತನಾಡುವುದಿಲ್ಲ.

ಈ ಚಿತ್ರದ ಬಹುದೊಡ್ಡ ಶಕ್ತಿ ಕ್ಯಾಮರಾ ಕಣ್ಣಿನದು. ಆರಂಭದಿಂದ ಕೊನೆಯವರೆಗೂ ಪ್ರೇಕ್ಷಕರನ್ನು ಹಿಡಿದಿಟ್ಟುಕೊಳ್ಳುವ ಪ್ರಮುಖ ಕೆಲಸವನ್ನು ಇಲ್ಲಿ ಧ್ವನಿ - ಬೆಳಕುಗಳೇ ಮಾಡಿವೆಯೇನೊ ಅನಿಸುತ್ತಿದೆ. ಚಿತ್ರದ ಕೊನೆ ತುಸು ಅನಿರೀಕ್ಷಿತ ಎಂದೆನಿಸಿದರೂ ಅದು ಮುಖ್ಯ ಕತೆಗೆ ಸಂಬಂಧಿಸಿದ್ದಲ್ಲ. ಪುಟ್ಟಕ್ಕ ತನ್ನ ಮಗಳನ್ನು ಇನ್ನೊಬ್ಬರ ಮನೆಯಲ್ಲಿ ಬಿಟ್ಟು ಶಹರಕ್ಕೆ ಹೋದದ್ದು, ಮಗಳು ಕಿಂಚಿತ್ತೂ ಪೂರ್ವ ಸೂಚನೆ ಕೊಡದೇ ಮೈ ಮಾರಿಕೊಂಡದ್ದು, ಅವಳ ಬದುಕಿಗೆ ಎದುರಾದ ಅನಿವಾರ್ಯತೆಯ ಭಾಗವೊ ಅಥವಾ ''ಆಧುನಿಕ ಹಲ್ಲುಗಳಿಗೆ ಸಿಕ್ಕ ಹಳ್ಳಿಯ ಮಣ್ಣು ದುಷ್ಟರ ಕೈಗೆ ಸಿಕ್ಕ ಮುಗ್ಧ ಹೆಣ್ಣಿನ ಕೌಮಾರ್ಯಹರಣದ ಗತಿಯಂತೇ'' ಎಂದು ತೋರಿಸುವುದಕ್ಕೊ ಎಂಬ ಪ್ರಶ್ನೆ ಕೆಲಕಾಲ ಕಾಡಿದ್ದಿದೆ.



ಒಂದೆರಡು ಸಣ್ಣಪುಟ್ಟ ಮಿತಿಗಳ ನಡುವೆಯೂ 'ಪುಟ್ಟಕ್ಕನ ಹೈವೇ' ನೂರ್ಕಾಲ ನೆನಪಿನಲ್ಲಿರುವ ಚಿತ್ರವಾಗಿದೆ. ಆರಂಭದಲ್ಲೇ ಹೇಳಿದಂತೆ ಸಾಮಾನ್ಯರ ಕೈಯಲ್ಲಿ ಸಿಕ್ಕಿದರೆ ಪುಷ್ಕಳ ಫೈಟಿಂಗ್, ಅಗ್ಗದ ರಂಜನೆಗೆ ಬಳಕೆಯಾಗಬಹುದಾದ ಬಹಳಷ್ಟು ಸಾಧ್ಯತೆ ಇರುವಾಗಲೂ ಬಿ. ಸುರೇಶ ಅನುಸರಿಸಿದ ಸಂಯಮದ ದಾರಿ ಅವರ ಮುಂದಿನ ಇನ್ನಷ್ಟು ಬೆಳವಣಿಗೆಗಳಿಗೆ ಸೂಚನೆಯಂತಿದೆ. ಬಹಳಷ್ಟು ಕಡೆ ಅವರು ದುಡಿಸಿಕೊಂಡ ಸಂಕೇತಗಳು ಕೆಲವರ ಗ್ರಹಿಕೆಗೆ ತಕ್ಷಣ ಬರದೇ ಇರಬಹುದು, ಆದರೆ ಅವು ಸಂದರ್ಭೋಚಿತವಾಗಿವೆ, ಕತೆಯ ಮೈಗೆಡದಂತೆ ಕಾಪಾಡಿವೆ.



ವಿಷ್ಣು ನಾಯ್ಕ
'ಪರಿಮಳ', ಅಂಬಾರಕೊಡ್ಲ, ಅಂಕೋಲ (ಉ.ಕ.) - ೫೮೧ ೩೧೪

ಗೀ ದ ಮೋಪಸಾ

# ತೋಳ



ಬ್ಯಾರೆನ್ ಡೆಸ್ ರೆವೆಲ್ಸ್ ಅವರ ಮನೆಯಲ್ಲಿ ಸೇಂಟ್ ಹೂಬರ್ಟ್‌ರವರ ಗೌರವಾರ್ಥವಾಗಿ ಏರ್ಪಡಿಸಿದ್ದ ಭೋಜನಕೂಟದಲ್ಲಿ ವೃದ್ಧ ಮಾರ್ಕ್ವಿಸ್ ಡಿ. ಆರ್. ವಿಲೆಯವರು ಹೇಳಿದ ಕಥೆ ಇದು. ಅಂದು ಒಂದು ಜಿಂಕೆಯನ್ನು ಬೇಟೆ ಮಾಡಿದ್ದರು. ನೆರೆದಿದ್ದ ಅಭ್ಯಾಗತರಲ್ಲಿ ಬೇಟೆಯಲ್ಲಿ ಭಾಗವಹಿಸದೇ ಇದ್ದವರು ಮಾರ್‌ಕ್ವಿಸ್ ಮಾತ್ರ. ಅವರು ಯಾವಾಗಲೂ ಬೇಟೆಯಾಡಿದವರಲ್ಲ.

ಭೋಜನಕೂಟದ ದೀರ್ಘಾವಧಿಯಲ್ಲಿ ಪ್ರಾಣಿಗಳ ಹಿಂಸೆ, ವಧೆ, ನಾಶಗಳ ವಿಷಯ ಬಿಟ್ಟು ಇನ್ನೇನನ್ನೂ ಚರ್ಚೆ ಮಾಡಲಿಲ್ಲ, ಮಹಿಳೆಯರೂ ಅಸಂಭವನೀಯ ಕತೆಗಳಲ್ಲೇ ನಿರತರಾಗಿದ್ದರು. ಭಾಷಣಕಲಾಚತುರರು ಪ್ರಾಣಿ ಮತ್ತು ಮಾನವರ ನಡುವಿನ ಹೋರಾಟ, ಆಕ್ರಮಣಗಳನ್ನು ಹಾವಭಾವಗಳಿಂದ ಗುಡುಗಿನ ಗರ್ಜನೆಯ ಧ್ವನಿಯಲ್ಲಿ ಅನುಕರಣೆಯೊಂದಿಗೆ ವಿವರಿಸಿದರು. ಮೇಸ್ಯರ್ ಡರ್‌ಬಿಯೆಯವರು ಕಾವ್ಯಮಯವಾಗಿ, ಪರಿಣಾಮಕಾರಿಯಾಗಿ, ಎಲ್ಲರಿಗಿಂತ ಹೆಚ್ಚು ಕಾಲ ಮಾತಿನ ಮಳೆ ಸುರಿಸಿದರು. ಪುನರಾವರ್ತನೆ ಇದ್ದರೂ ಕತೆಯನ್ನು ಸುಲಲಿತವಾಗಿ, ರೋಚಕವಾಗಿ ಹೇಳುತ್ತಿದ್ದರು.

''ಮಹಾಜನರೇ, ನಾನು ಬೇಟೆಯಾಡುವುದಿಲ್ಲ. ನನ್ನ ತಂದೆ, ಅಜ್ಜ, ಮುತ್ತಜ್ಜ, ಮೂಲಜ್ಜ ಯಾರೂ ಬೇಟೆಯಾಡಿದವರಲ್ಲ. ಕೊನೆಯ ಹೆಸರಿನವನು, ನೀವೆಲ್ಲರೂ ಬೇಟೆಯಾಡಿದ್ದಕ್ಕಿಂತ ಅಧಿಕವಾಗಿ ಬೇಟೆಯಾಡಿದವನ ಮಗ. ಅವನು ೧೭೬೪ರಲ್ಲಿ ದೈವಾಧೀನನಾದ. ಹೇಗೆ ಎಂಬುದನ್ನು ವಿವರಿಸುತ್ತೇನೆ. ಅವನ ಹೆಸರು ಜಾನ್. ಅವನಿಗೆ ಮದುವೆಯಾಗಿತ್ತು. ಅವನೇ ನನ್ನ ಮೂಲಜ್ಜನ ತಂದೆ. ಅವನು ತನ್ನ ತಮ್ಮ ಫ್ರಾನ್ಸಿಸ್ ಜೊತೆ ಲೊರೈನಿನ ದಟ್ಟ ಕಾಡಿನಲ್ಲಿದ್ದ ನಮ್ಮ ಕೋಟೆಯಲ್ಲಿ ವಾಸವಾಗಿದ್ದ. ಅವನಿಗೆ ಬೇಟೆ ಎಂದರೆ ಪ್ರೀತಿ. ಯಾವಾಗಲೂ ಇಬ್ಬರೂ ತಪ್ಪದೆ ನಿರಾಯಾಸವಾಗಿ ವರ್ಷದಾದಿಯಿಂದ ಅಂತ್ಯದವರೆಗೆ ಬೇಟೆಯಾಡುತ್ತಿದ್ದರು. ಇನ್ನಾವುದನ್ನೂ ಪ್ರೀತಿಸಲಿಲ್ಲ. ಯಾವಾಗಲೂ ಬೇಟೆಯ ವಿಷಯವೇ ಅವರ ಮಾತು, ಬೇಟೆಯೇ ಅವರ ಜೀವಾಳ, ಸರ್ವಸ್ವ. ಅದೊಂದು ಬಿಡಲಾಗದ ಚಟ. ಅವರ ಜೀವನದಲ್ಲಿ ಅದನ್ನು ಬಿಟ್ಟು ಬೇರೆ ಯಾವುದಕ್ಕೂ ಅವಕಾಶವೇ ಇರಲಿಲ್ಲ. ಯಾವ ಕಾರಣಕ್ಕೂ ಬೇಟೆಯನ್ನು ಮುಂದೆ ಹಾಕದಿರುವ ಒಡಂಬಡಿಕೆ ಮಾಡಿಕೊಂಡಿದ್ದರು. ನನ್ನ ಮೂಲಜ್ಜ, ಅವನ ತಂದೆ, ಒಂದು ನರಿಯ ಬೇಟೆಯಲ್ಲಿ ತೊಡಗಿದಾಗ ಜನಿಸಿದ. ಆದರೆ ಜಾನ್ ಅರ್‌ವಿಲ್ಲೆ ತನ್ನ ಬೇಟೆಯನ್ನು ನಿಲ್ಲಿಸಲಿಲ್ಲ. ''ಹೊಸ ಆಗಂತುಕನಿಗೆ ಎಷ್ಟೊಂದು ಆತುರ! ನರಿಯ ಅಂತಿಮ ರೋದನವನ್ನು ಕೇಳುವವರೆಗೆ ತಡೆಯಬಹುದಿತ್ತು'' ಎಂದು ಗೊಣಗಿದ. ಅವನ ತಮ್ಮ ಫ್ರಾನ್ಸಿಸ್‌ಗೋಗೆ ಬೇಟೆಯ ವಿಷಯದಲ್ಲಿ ಇನ್ನೂ ತಲೆಬಿಸಿ. ಬೆಳಿಗ್ಗೆ ಎದ್ದ ಕೂಡಲೇ ಬೇಟೆನಾಯಿ, ಕುದುರೆಗಳನ್ನು ಪರಿಶೀಲಿಸುತ್ತಿದ್ದ. ಬೇಟೆಗೆ ಹೊರಡುವ ಮೊದಲೇ ಕೆಲವು ಪಕ್ಷಿಗಳನ್ನು ಗುಂಡುಹಾರಿಸಿ ಕೆಡವುತ್ತಿದ್ದ. ಆ ಪ್ರದೇಶದಲ್ಲಿ ಅವರನ್ನು 'ಮೇಸ್ಯರ್ ಮಾರ್ಕ್ವಿಸ್' ಮತ್ತು 'ಮೇಸ್ಯರ್ ಕ್ಯಾಸೆಟ್' ಎಂದು ಕರೆಯುತ್ತಿದ್ದರು. ಈಗ ಬಿರುದುಗಳು ಅನುವಂಶಿಕಗಳಲ್ಲ. ಆಗ ಹುಟ್ಟೇ ಲಾಭದಾಯಕವಾಗಿತ್ತು. ಈಗ ಪರಿಸ್ಥಿತಿ ಹಾಗಿಲ್ಲ. ಮಾರ್ಕ್ವಿಸ್ ಮಗ ಕೌಂಟ್ ಅಲ್ಲ, ವೈಕೌಂಟ್ ಮಗ ಬ್ಯಾರನ್ ಅಲ್ಲ, ಜನರಲ್ ಮಗ ಕರ್ನಲ್ ಅಲ್ಲ.

ಪೂರ್ವಜರ ಬಗ್ಗೆ ಹೇಳಬೇಕೆಂದರೆ, ''ಅವರು ವಿಶಾಲ ಮೈಕಟ್ಟಿನವರು, ಬೊಜ್ಜಿಲ್ಲ. ದೇಹ ಮೂಳೆ ಮೂಳೆ, ಮೈತುಂಬಾ ಕೂದಲು, ಕ್ರೂರಿಗಳು ಹಾಗೂ ಶಕ್ತಿಶಾಲಿಗಳು. ಚಿಕ್ಕವನು ಅಣ್ಣನಿಗಿಂತ ಎತ್ತರ. ಅವನ ಧ್ವನಿ ಒಂದು 'ಲೆಜೆಂಡ್'. ಅದರ ಬಗ್ಗೆ ಅವನಿಗೇ ತುಂಬ ಹೆಮ್ಮೆ. ಅವನು ಕೂಗಿದಾಗ ಕಾಡಿನ ಸಮಸ್ತ ಮರಗಳೂ ಚಲಿಸುತ್ತಿದ್ದವು ಎಂಬ ಪ್ರತೀತಿ ಇದೆ. ತಮ್ಮನು ಬೃಹತ್ ಕುದುರೆ ಏರಿ, ಬೇಟೆಗೆ ಹೊರಟಾಗ ನೋಡಬೇಕು, ಅದೆಂತಹ ದೃಶ್ಯ!

೧೭೬೪ನೇ ನಡು ಛಳಿಗಾಲ. ಗರಿಷ್ಠ ಛಳಿ ದಿನಗಳು. ತೋಳಗಳು ಅತ್ಯಂತ ಭಯಾನಕ ಕ್ರೌರ್ಯ ಸ್ಥಿತಿಯಲ್ಲಿದ್ದವು. (ಕೊಲ್ಲುವ ಸಹಜ ಆಶಯ). ಸಂಜೆ ವಿಳಂಬವಾಗಿ ಒಬ್ಬಂಟಿಗನಾಗಿ ಓಡಾಡುತ್ತಿದ್ದ ರೈತರ ಮೇಲೆ ಆಕ್ರಮಣ ನಡೆಸುತ್ತಿದ್ದವು. ಮನೆಗಳ ಸುತ್ತಲೂ ಅಲೆದಾಡುತ್ತಿದ್ದವು. ಭಯಂಕರ ಧ್ವನಿಯಲ್ಲಿ ರೋದಿಸುತ್ತಿದ್ದವು. ಕುದುರೆಯ ಲಾಯ, ದನದ ಕೊಟ್ಟಿಗೆಗಳನ್ನು ಧ್ವಂಸಗೊಳಿಸುತ್ತಿದ್ದವು.

ಒಂದು ಭೀಕರ ಸುದ್ದಿ ಪರಿಚಲಿಸಿತು, ''ಅದೊಂದು ಭಯಾನಕ ಬಿಳಿ ಬಣ್ಣದ ತೋಳ. ಆಗಲೇ ಎರಡು ಮಕ್ಕಳನ್ನು ತಿಂದು ಮುಗಿಸಿದೆ. ಒಬ್ಬ ಹೆಂಗಸಿನ ಕೈತೋಳನ್ನು ಬಗೆದು ಭಕ್ಷಿಸಿದೆ. ಮನೆಗಳ ಮುಂದಿನ ನಾಯಿಗಳನ್ನು ಬೆದರಿಸಿದೆ'' ಎಂದು.

ಈಚೆಗಂತೂ ನಿರ್ಭೀತಿಯಿಂದ ಪದೇಪದೇ ಮನೆಯೊಳಕ್ಕೆ ಪ್ರವೇಶಿಸಿ ಗಾಬರಿಗೊಳಿಸುತ್ತಿತ್ತು. ಅನೇಕ ನಿವಾಸಿಗಳು, ಅದರ ಉಸಿರು, ದೀಪದ ಹಿಗ್ಗುಕುಗ್ಗು ಕಂಪನಗಳಿಗೆ ಕಾರಣವಾಗಿತ್ತೆಂದು ದೃಢಪಡಿಸಿದರು. ಇಡೀ ಪ್ರಾಂತ್ಯದಲ್ಲೇ ಭೀಕರ ಭೀತಿ ಹುಟ್ಟಿಕೊಂಡಿತು. ರಾತ್ರಿಯ ಕಪ್ಪು ಕವಿಯುತ್ತಲೇ ಯಾರೊಬ್ಬರೂ ಮನೆಯಿಂದ ಹೊರಗೆ ಕಾಲಿಡಲು ಧೈರ್ಯ ಮಾಡಲಿಲ್ಲ. ಪ್ರಾಣಿಯ ಭೀತಿ ನೆರಳುಗಳನ್ನೂ ಕಾಡಿತು.

ದೋರವಿಯ್ಯೆ ಸಹೋದರರು ಆ ಪ್ರಾಣಿಯನ್ನು ಪತ್ತೆಹಚ್ಚಿ ಕೊಲ್ಲಲು ಪಣತೊಟ್ಟರು. ಎಲ್ಲಾ ಸಾಹಸಿಗಳಿಗೂ ಕರೆಕೊಟ್ಟರು. ಅವರ ಕರೆ ವ್ಯರ್ಥವಾಯಿತು. ಪಟ್ಟುಬಿಡದೆ ಇಬ್ಬರು ಸಾಹಸಿಗಳೂ ಇಡೀ ಕಾಡಿನಲ್ಲಿ ಅಲೆದಾಡಿದರು. ಪೊದೆಗಳಲ್ಲೆಲ್ಲಾ ಹುಡುಕಿದರು. ಎಲ್ಲಿಯೂ ಕಣ್ಣಿಗೆ

---

ಫ್ರಾನ್ಸಿಸ್ಸಿನ ಸಂತೋಷದ ಹಾಗೂ ಸೇಡಿನ ಆವೇಶದ ಕೂಗು ಇಡೀ ಕಣಿವೆಯಲ್ಲಿ ಪ್ರತಿಧ್ವನಿಸಿತು. ಕೈಯಲ್ಲಿ ಕತ್ತಿ ಧರಿಸಿ ಕುದುರೆಯಿಂದ ಕುಪ್ಪಳಿಸಿದ. ಕೂದಲು ನಿಮಿರಿದ್ದ ಕೊಲೆಪಾತಕ ಪ್ರಾಣಿ ಅವನನ್ನೇ ನಿರೀಕ್ಷಿಸುತ್ತಿತ್ತು. ಅದರ ಎರಡು ಕಣ್ಣುಗಳು ನಕ್ಷತ್ರಗಳಂತೆ ಮಿನುಗುತ್ತಿದ್ದವು. ಅದರೊಂದಿಗೆ ಕಾದಾಡುವ ಮೊದಲು ಸಶಕ್ತ ಬೇಟೆಗಾರ ಅಣ್ಣನನ್ನು ಎತ್ತಿ ಬಂಡೆಯ ಮೇಲೆ ಕೂಡಿಸಿದ. ಮುಖ ಕಲ್ಲಿನ ಹೊಡೆತದಿಂದ ರಕ್ತಸಿಕ್ತ ಮುದ್ದೆಯಾಗಿತ್ತು. ಅಣ್ಣನು ಕಿವುಡನೋ ಎಂಬಂತೆ, ''ಇಲ್ಲಿ ನೋಡು ಜಾನ್, ಇಲ್ಲಿ ನೋಡು,'' ಎಂದು ಗಟ್ಟಿಯಾಗಿ ಗರ್ಜಿಸಿದ.

ಬೀಳಲಿಲ್ಲ. ಕೆಲವು ತೋಳಗಳನ್ನೇನೋ ಕೊಂದರು. ಆದರೆ ಆ ತೋಳ ಮಾತ್ರ ಅವರ ಜಾಲಕ್ಕೆ ಬೀಳಲೇಇಲ್ಲ. ಅವರ ಬೇಟೆಯನಂತರ, ಸೇಡು ತೀರಿಸಲೆಂದೇನೋ ಏನೋ ಪ್ರತಿರಾತ್ರಿ ಪ್ರಯಾಣಿಕರನ್ನು ಕಾಡುತ್ತಿತ್ತು. ಕೆಲವು ದನಕರುಗಳನ್ನು ಅವರು ಬೇಟೆಯಾಡುತ್ತಿದ್ದ ಸ್ಥಳದಿಂದ ಆಚೆಗೆ ಕೊಂದು ತಿಂದಿತ್ತು. ಕಡೆಗೆ ಒಂದು ದಿನ ಅದು ಓರ್‌ವಿಯೆ ಮನೆಯ ಹಂದಿಗೂಡನ್ನೂ ಪ್ರವೇಶಿಸಿತು. ಉತ್ತಮ ಜಾತಿಯ ಎರಡು ಸುಂದರ ಹಂದಿಗಳನ್ನು ತಿಂದಿತು. ಓರ್‌ವಿಯೆ ಸಹೋದರರ ಸಿಟ್ಟು ಮುಗಿಲು ಮುಟ್ಟಿತು. ಈ ಭೂತ ಪ್ರಾಣಿಯ ಸಾಹಸ ಅವರಿಗೆ ಒಡ್ಡಿದ ನೇರ ಸವಾಲು, ಕೆಚ್ಚಿನ ಪ್ರತಿಭಟನೆಗಳಂತೆ ಕಂಡಿತು. ಸಿಟ್ಟಿನಿಂದ, ಉದ್ರೇಕಿತರಾಗಿ ತಮ್ಮ ಎಲ್ಲಾ ಬೇಟೆನಾಯಿಗಳೊಂದಿಗೆ, ಆ ತೋಳವನ್ನು ಬೇಟೆಯಾಡಲು ಹೊರಟರು.

ಮುಂಜಾನೆಯಿಂದ, ಸೂರ್ಯನು ಬೃಹತ್ ಮರಗಳ ಹಿಂದೆ ಮರೆಯಾಗುವ ಇಳಿ ಸಂಜೆಯವರೆಗೂ ಭಗೀರಥ ಪ್ರಯತ್ನ ನಡೆಸಿದರು. ಫಲ ಸಿಗಲಿಲ್ಲ. ಕೊನೆಗೆ ಕೋಪ, ನಿರಾಸೆಗಳಿಂದ ಜೌಗು ದಾರಿಯಲ್ಲಿ ಸಾಗುತ್ತಿದ್ದರು. ಈ ಅದ್ಭುತ ಸಾಹಸಿ ತೋಳದ ಬಗ್ಗೆ ಅವರಿಗೇ ಆಶ್ಚರ್ಯ ! ಅವರಲ್ಲೇ ಒಂದು ವಿಚಿತ್ರ ಬಗೆಯ ಭಯ ಆವರಿಸಿತು.

ಅಣ್ಣ ಹೇಳಿದ, ''ಇದೇನು ಸಾಮಾನ್ಯ ಪ್ರಾಣಿಯಲ್ಲ. ಇದು ಮನುಷ್ಯನಂತೆ ಯೋಚಿಸಬಲ್ಲದು ಎಂದು ತೋರುತ್ತದೆ.''

ತಮ್ಮ ಉತ್ತರಿಸಿದ : ''ಬಹುಶಃ ಗುಂಡಿಗೆ ಧರ್ಮಗುರುಗಳ ಆಶೀರ್ವಾದದ ಅವಶ್ಯಕತೆ ಬೇಕೊ ಏನೊ ? ನಮಗೆ ಅವರ ವರ ಬೇಕು.''

...ಸ್ವಲ್ಪ ಹೊತ್ತು ಸ್ಮಶಾನ ಮೌನ.

ಜಾನ್ ತನ್ನ ಮಾತನ್ನು ಮುಂದುವರಿಸಿದ, ''ಸೂರ್ಯನನ್ನು ನೋಡು. ಎಷ್ಟು ಕೆಂಪು ರಂಗು ! ಈ ರಾತ್ರಿ ಮಹಾತೋಳ ಅನಾಹುತವೆಸಗುವುದು ಖಚಿತ.'' ಈ ಮಾತನ್ನು ಆಡುವಷ್ಟರಲ್ಲೇ ಕುದುರೆ ಕೆನೆಯಿತು. ಫ್ರಾನ್ಸಿಸ್ಸನ ಕುದುರೆ ಹಠಾತ್ ಓಡಲು ಪ್ರಾರಂಭಿಸಿತು. ಸತ್ತ ಎಲೆಗಳ ಪೊದೆಯೇ ಅವರ ಎದುರು ಮೇಲಕ್ಕೇರಿತು. ಬೂದು ಬಣ್ಣದ ತೋಳ ಮೇಲಕ್ಕೆ ನೆಗೆದು ಕಾಡಿನೊಳಗೆ ಮಿಂಚಿನಂತೆ ಧಾವಿಸಿತು.

ಇಬ್ಬರೂ ಸಮಾಧಾನದ ಉಸಿರೆಳೆದು ತಮ್ಮ ಬಲವಾದ ಕುದುರೆಗಳ ಕುತ್ತಿಗೆಗಳ ಕಡೆ ಬಾಗಿ, ತಮ್ಮ ದೇಹದ ಭಾರದಿಂದ ಕುದುರೆಗಳನ್ನು ಉತ್ತೇಜಿಸಿದರು. ಹಿಮ್ಮಡಿಗೆ ಜೋಡಿಸಿದ ಚೂಪು ಮುಳ್ಳನ್ನು ಅದುಮಿ, ಕುದುರೆಗಳ ವೇಗವನ್ನು ಹೆಚ್ಚಿಸಿದರು. ತಮ್ಮ ಪ್ರಾಣಿಗಳ ಭಾರವನ್ನೇ ಮೊಳಕಾಲು ಮಂಡಿಗಳ ನಡುವೆ ವರ್ಗಾಯಿಸಿರುವಂತೆ, ಬಲದಿಂದ ಕುದುರೆಗಳು ಹಾರುತ್ತಿವೆಯೋ ಎನ್ನುವಷ್ಟು ಪ್ರೋತ್ಸಾಹಿಸಿ ನಾಗಾಲೋಟದಿಂದ ಓಡಿಸಿದರು. ದಾರಿಯ ಗಿಡಬಳ್ಳಿಗಳನ್ನು ಸವರುತ್ತಾ, ದರಿಗಿರಿಗಳನ್ನು ಹಿಂದಕ್ಕೆ ಹಾಕುತ್ತಾ, ಆಗಾಗ್ಗೆ 'ಹಾರನ್' (ಧ್ವನಿವರ್ಧಕ) ಬಾರಿಸುತ್ತಾ, ಪಕ್ಕದ ಜನಗಳನ್ನು ಹಾಗೂ ನಾಯಿಗಳನ್ನು ಎಚ್ಚರಿಸುತ್ತಾ ಮೈಮರೆತು ಸವಾರಿ ಸಾಗಿಸಿದರು.

ಆದರೆ ಹಠಾತ್ ಈ ಹುಚ್ಚು ಮಿಂಚಿನ ವೇಗದ ಸವಾರಿಯಲ್ಲಿ ನನ್ನ ಪೂರ್ವಜನ ಮುಂತಲೆ ಒಂದು ಮರದ ಕೊಂಬೆಗೆ ಬಡಿಯಿತು. ತಲೆಯ ಚಿಪ್ಪು ಒಡೆಯಿತು. ನೆಲಕ್ಕೆ ಬಿದ್ದ. ಇನ್ನೂ ಸತ್ತಿರಲಿಲ್ಲ, ಅಷ್ಟೆ. ಬೆದರಿದ ಅವನ ಕುದುರೆ ಪಕ್ಕದ ಪೊದೆಯಲ್ಲಿ ಅದೃಶ್ಯವಾಯಿತು. ಕಿರಿಯ ಓರ್‌ವಿಯೆ ಕೂಡಲೇ ಕೆಳಕ್ಕೆ ಧುಮುಕಿದ. ಅಣ್ಣನ ದೇಹವನ್ನು ಕೈಗಳಲ್ಲಿ ಅವಚಿಕೊಂಡ. ಅಣ್ಣನಿಗೆ ಎಚ್ಚರ ತಪ್ಪಿತ್ತು. ರೂಪ ಕಳೆದುಕೊಂಡ ಅವನ ತಲೆಯನ್ನು ತೊಡೆಯಮೇಲೆ ಒರಗಿಸಿಕೊಂಡ. ನಿರ್ಜೀವ ಮುಖವನ್ನು ಆತಂಕದಿಂದ ನೋಡಿದ. ಕ್ಷಣದಿಂದ ಕ್ಷಣಕ್ಕೆ ಭೀತಿ ಬೆಳೆಯುತ್ತಲೇ ಇತ್ತು. ಹಿಂದೆಂದೂ ಅನುಭವಿಸದ ವಿಚಿತ್ರ ಭಯ ! ನೆರಳಿನ ಭಯ ! ನೀರವತೆಯ ಭಯ ! ನಿರ್ಜನ ಕಾಡಿನ ಭಯ ! ಎಲ್ಲಕ್ಕಿಂತ ಮಿಗಿಲಾಗಿ ಮಾಯಾವಿ ತೋಳದ ಭಯ ! ತನ್ನ ಅಣ್ಣನ ಮೃತ್ಯುದೇವತೆ !

ನೆರಳುಗಳು ದಟ್ಟವಾದುವು. ಛಳಿ ಗಾಳಿಯ ಆರ್ಭಟದಲ್ಲಿ ಮರದ ಕೊಂಬೆಗಳೂ ಕರಕರ ಗುಟ್ಟಿದವು. ಫ್ರಾನ್ಸಿಸ್ ನಡುಗುತ್ತಾ ಎದ್ದ. ಇನ್ನು ಅಲ್ಲಿರಲು ಸಾಧ್ಯವೇ ಇರಲಿಲ್ಲ. ತನ್ನ ಸಾಮರ್ಥ್ಯ ಕುಗ್ಗುತ್ತಿರುವುದು ಗೊತ್ತಾಯಿತು. ಎಲ್ಲೆಲ್ಲೂ ನಿಶ್ಶಬ್ದ. ಧ್ವನಿವರ್ಧಕ, ನಾಯಿ ಹಾಗೂ ಎಲ್ಲವೂ ಮೌನ. ಭಯಂಕರ ದಿಗಂತದ ಒಳಗೆ ಎಲ್ಲವೂ ಶೂನ್ಯಮಯ. ಈ ನಿರಾಶಾ ಸ್ತಬ್ಧತೆ ಹಾಗೂ ಕೊರೆಯುವ ಛಳಿಯ ಗರ್ಭದಲ್ಲಿ ವಿಚಿತ್ರ ಭೀತಿ ಹೊರಹೊಮ್ಮುತ್ತಿತ್ತು. ತನ್ನಲ್ಲಿರುವ ಎಲ್ಲ ಶಕ್ತಿಯಿಂದ ಅಣ್ಣನ ದೇಹವನ್ನು ಎತ್ತಿ ಕುದುರೆಯ ಜಿನುಗಿನ ಮೇಲೆ ಮಲಗಿಸಿದ. ದೇಹವನ್ನು ಮನೆಗೆ ತಲುಪಿಸುವುದೇ ಅವನ ಪ್ರಥಮ ಗುರಿ. ನಯವಾಗಿ ಅದರ ಮುಂದೆ ಏರಿ ಕುಳಿತ. ಮನಸ್ಸನ್ನು ಯಾವುದೋ ಭೀಕರ ಅಮಾನುಷ ಪ್ರತಿಮೆಗಳು ಆವರಿಸಿದ್ದವು. ಮೈಮೇಲೆ ಏನೋ ಆವೇಶ ಕಾಡುತ್ತಿತ್ತು. ಇದ್ದಕ್ಕಿದ್ದಂತೆ ಈ ಅಸ್ಪಷ್ಟ ಭೀತಿಗಳ ನಡುವೆ ಒಂದು ಭೂತಾಕೃತಿ ಹಾದು ಹೋಯಿತು. ಅದೇ ಆ ತೋಳ ! ಅದೇ ಆ ತೋಳ ! ಬೇಟೆಗಾರನ ಎದೆ ಅಗೋಚರ ಭೀತಿಯಿಂದ ಕಂಪಿಸಿತು, ಧಮನಿಗಳಲ್ಲಿ ಮಂಜುಮಿಶ್ರ ನೀರು ಪರಿಚಲಿಸಿದಂತಾಯಿತು. ದೆವ್ವ ಪೀಡಿಸುತ್ತಿದ್ದ ಸನ್ಯಾಸಿಯಂತೆ ಶಿಲುಬೆಯ ಆಕಾರ ರಚಿಸಿದ. ಕೊಲೆಪಾತಕ ತೋಳದ ಪುನರಾಗಮನ ಅವನಿಗೆ ಸಖೇದಾಶ್ಚರ್ಯ ಹಾಗೂ ಛಲದ ಸಂಕೇತವಾಯಿತು. ಪಕ್ಕದ ಅಣ್ಣನ ಜಡತ್ವ ಹೃದಯ ಅವನಲ್ಲಿದ್ದ ಕಿಚ್ಚನ್ನು ಕೆದರಿತು. ಭೀತಿ ಕೋಪವಾಗಿ ಪ್ರಜ್ವಲಿಸಿತು, ಸಹಿಸಲಸಾಧ್ಯವಾದ ಸಿಟ್ಟಿನಿಂದ ಸೆಟೆದು ನಡುಗಿದ.

ಕುದುರೆಯನ್ನು ಕುಕ್ಕಿ ಅನಿಷ್ಟ ತೋಳವನ್ನು ಬಾಣದಂತೆ ಬೆನ್ನು ಹತ್ತಿದ. ಪೊದೆಗಳು, ಕಣಿವೆ, ಬೃಹತ್ ಮರಗಳು ಹಿಂದೆ ಓಡುತ್ತಿದ್ದವು. ಇವೆಲ್ಲವೂ ಅವನಿಗೆ ಅಗೋಚರ. ಅವನ ಒಂದೇ ಒಂದು ಗುರಿ, ದೃಷ್ಟಿ, ಆ ನೀಚ ಕೊಲೆಪಾತಕ ಮೃಗ. ಅವನ ಮುಂದೆ ಒಂದು ಬಿಳಿ ಛಾಯೆ ಓಡುತ್ತಿತ್ತು. ಅದನ್ನು ಹಿಂಬಾಲಿಸುವುದೊಂದೇ ಅವನ ಅಚಲ ಗುರಿ. ಅವನ ಕುದುರೆಗೂ ಅಗೋಚರ ಆವೇಶ ತುಂಬಿತ್ತು. ಜಿನುಗಿನ ಮೇಲಿನ ಸತ್ತವನ ದೇಹ ಹೊತ್ತು, ಕತ್ತನ್ನು ಚಾಚಿ, ಚಿಕ್ಕ ಮರಗಳು, ಕಲ್ಲುಗಳನ್ನು ಛಿದ್ರಗೊಳಿಸಿ ನಾಗಾಲೋಟದಿಂದ ಮುಂದೆ ಮುಂದೆ ಸಾಗಿತು. ಕತ್ತಿನ ಕೂದಲಲ್ಲಿ ಮುಳ್ಳಿನ ಗಿಡಗಳು ಸಿಕ್ಕಿಕೊಂಡಿದ್ದವು. ಮರದ ಕೊಂಬೆಗಳಿಗೆ ಬಡಿದ ತಲೆಯ ಭಾಗದಲ್ಲಿ ರಕ್ತ ಸೋರುತ್ತಿತ್ತು. ಹಠಾತ್ತನೆ ಕುದುರೆ ಹಾಗೂ ಅದರ ಯಜಮಾನ ಕಾಡಿನಿಂದ ಹೊರಕ್ಕೆ ಧುಮುಕಿ ರಭಸದಿಂದ ಮುಂದೆ ಸಾಗಿದರು. ಚಂದಿರನು ಗುಡ್ಡಗಳ ಮೇಲೆ ಪ್ರಕಾಶಿಸಿದನು. ಈ ಕಣಿವೆ ಕಲ್ಲಿನಿಂದ ಆವೃತವಾಗಿತ್ತು. ಎಲ್ಲೆಲ್ಲೂ ಅಭೇದ್ಯ ಬಂಡೆಗಳ ಶ್ರೇಣಿ. ಅವುಗಳನ್ನು ದಾಟಿಹೋಗಲು ಸಾಧ್ಯವೇ ಇಲ್ಲ. ತೋಳಕ್ಕೆ ಮುಂದೆ ಸಾಗಲು ಅವಕಾಶವೇಯಿಲ್ಲದಂತಾಗಿ ಹಿಂದಿರುಗಲೇಬೇಕಾಯಿತು.

ಫ್ರಾನ್ಸಿಸ್ಸಿನ ಸಂತೋಷದ ಹಾಗೂ ಸೇಡಿನ ಆವೇಶದ ಕೂಗು ಇಡೀ ಕಣಿವೆಯಲ್ಲಿ ಪ್ರತಿಧ್ವನಿಸಿತು. ಕೈಯಲ್ಲಿ ಕತ್ತಿ ಧರಿಸಿ ಕುದುರೆಯಿಂದ ಕುಪ್ಪಳಿಸಿದ. ಕೂದಲು ನಿಮಿರಿದ್ದ ಕೊಲೆ ಪಾತಕ ಪ್ರಾಣಿ ಅವನನ್ನೇ ನಿರೀಕ್ಷಿಸುತ್ತಿತ್ತು. ಅದರ ಎರಡು ಕಣ್ಣುಗಳು ನಕ್ಷತ್ರಗಳಂತೆ ಮಿನುಗು ತ್ತಿದ್ದವು. ಅದರೊಂದಿಗೆ ಕಾದಾಡುವ ಮೊದಲು ಸಶಕ್ತ ಬೇಟೆಗಾರ ಅಣ್ಣನನ್ನು ಎತ್ತಿ ಬಂಡೆಯ ಮೇಲೆ ಕೂಡಿಸಿದ. ಮುಖ ಕಲ್ಲಿನ ಹೊಡೆತದಿಂದ ರಕ್ತಸಿಕ್ತ ಮುದ್ದೆಯಾಗಿತ್ತು. ಅಣ್ಣನು ಕಿವುಡನೋ ಎಂಬಂತೆ, ''ಇಲ್ಲಿ ನೋಡು ಜಾನ್, ಇಲ್ಲಿ ನೋಡು,'' ಎಂದು ಗಟ್ಟಿಯಾಗಿ ಗರ್ಜಿಸಿದ.

ನಂತರ ಆ ಭೂತದ ಮೇಲೆ ನೇರ ಆಕ್ರಮಣ ಎಸಗಿದ. ಎರಗಿದ ಪರ್ವತವನ್ನೇ ಎತ್ತಿ ಆಚೆ ಎಸೆಯುವ, ಕಲ್ಲನ್ನು ಚೂರು ಚೂರು ಮಾಡುವಷ್ಟು ಆಕ್ರೋಶ ಅವನನ್ನು ಉದ್ರೇಕಿಸಿತು. ದುಷ್ಟತೋಳ ಅವನ ಎದೆಯನ್ನೇ ತನ್ನ ಉಗುರುಗಳಿಂದ ಕೊಲ್ಲಲು ಹೊಂಚುಹಾಕುತ್ತಿತ್ತು. ಆದರೆ ಫ್ರಾನ್ಸಿಸ್ ಅದರ ಕತ್ತನ್ನು ಬಿಗಿಯಾಗಿ ಹಿಡಿದು ಅವಚಿಕೊಂಡು, ಆಯುಧವಿಲ್ಲದೇ ಮೃದುವಾಗಿ ಒಂದೇ ಸಮನೆ ಅದು ಕೊನೇ ಉಸಿರು ಎಳೆಯುವವರೆಗೂ ಹಿಸುಕಿದ. ಅದರ ಅಂತಿಮ 'ಗೊರ-ಗೊರ' ಆರ್ತನಾದ ಕೇಳುವವರೆಗೂ ಬಿಡಲೇಇಲ್ಲ. ಸೇಡಿನ ನಗೆ ಬೀರಿದ. ಆ ಪ್ರಾಣಿಯನ್ನು ಮತ್ತೆ ಮತ್ತೆ ಬಿಗಿಯಾಗಿ ಹಿಡಿದು, ''ನೋಡು ಜಾನ್, ನೋಡು ಜಾನ್'', ಎಂದು ಹುಚ್ಚನಂತೆ ಕೂಗಿದ.

ಅದರ ಎಲ್ಲಾ ಪ್ರತಿಭಟನೆ ಸ್ಥಗಿತಗೊಂಡಿತು. ತೋಳದ ದೇಹ ತಣ್ಣಗಾಯಿತು. ನಂತರ ಫ್ರಾನ್ಸಿಸ್ ಅದನ್ನು ಕೈಯಲ್ಲಿ ಎತ್ತಿಕೊಂಡು, ಅಣ್ಣನ ಪಾದದಡಿ ಎಸೆದ. ಗಟ್ಟಿಯಾಗಿ ಅಳುತ್ತಾ, ''ಜಾನ್ ಇಲ್ಲಿ, ಮುದ್ದುಜಾನ್ ಇಲ್ಲಿ'' ಎಂದು ಕಿರುಚುತ್ತಾ, ಎರಡು ದೇಹಗಳನ್ನೂ ಜೀನಿನ ಮೇಲೆ ಒಂದರ ಮೇಲೊಂದನ್ನು ಸ್ಥಾಪಿಸಿದ, ಏರಿಸಿಕೊಂಡು ತನ್ನ ದಾರಿಯಲ್ಲಿ ಹೊರಟ.

ಅಳುತ್ತಾ, ನಗುತ್ತಾ ಕೋಟೆಗೆ ಹಿಂತಿರುಗಿದ. ಆಕ್ರೋಶದಿಂದ ಅಳುತ್ತಾ ತನ್ನ ಗಡ್ಡವನ್ನು ಕಿತ್ತುಕೊಳ್ಳುತ್ತಾ ಕೊಲೆಗಡುಕ ತೋಳದ ಸಾವಿನ ಕಥೆಯನ್ನು ಹೇಳುತ್ತಾ, ''ಜಾನ್, ಜಾನ್'' ಎಂದು ಪುನರಾವರ್ತಿಸುತ್ತಿದ್ದ.

ನಂತರ ಪದೇ ಪದೇ ಈ ದಿನವನ್ನು ಅಶ್ರುಬಾಷ್ಪ ಹರಿಸುತ್ತಾ ಸ್ಮರಿಸುತ್ತಿದ್ದ. ''ನಾನು ಕೊಲೆಗಡುಕ ಪ್ರಾಣಿಯ ಕತ್ತನ್ನು ಹಿಚುಕುವುದನ್ನು ಜಾನ್ ಕಣ್ಣಾರೆ ನೋಡಿದ್ದರೆ ತೃಪ್ತಿಯಿಂದ ಸಾಯುತ್ತಿದ್ದ,'' ಎಂದು ಕಣ್ಣೀರಿನ ಕೋಡಿ ಒಡೆದ.

''ನನ್ನ ಪೂರ್ವಜನ ವಿಧವೆ ತನ್ನ ಮಗನ ಮನಸ್ಸಿನಲ್ಲಿ ಭೀತಿಯ ಬೀಜ ಬಿತ್ತಿದಳು. ಅದು ತಲೆಯಿಂದ ತಲೆಗೆ ನನ್ನವರೆಗೂ ಪ್ರವಹಿಸಿದೆ'' ಎಂದುಕೊಂಡ. ಮಾರ್‌ಕ್ವಿಸ್ ಓರ್‌ವಿಯೆ ಮೌನವಾಗಿದ್ದ. ಯಾರೋ ಪ್ರಶ್ನಿಸಿದರು, ''ಇದು ಬರಿ ಸಾಹಸದ ಸೃಷ್ಟಿ ಕಥೆಯೋ ಅಥವಾ ಸತ್ಯವೋ ?'' – ಎಂದು.

ವಿಷಯ ಬಿತ್ತರಿಸುವವ ಉತ್ತರಿಸಿದ, ಇದು '' 'ಎ'ಯಿಂದ 'ಜಡ್'ವರೆಗೆ ಸತ್ಯ.'' ಆಗ ಅಲ್ಲಿದ್ದ, ಸಿಹಿ ಕಂಠದ ಮಹಿಳೆಯೊಬ್ಬಳು ಘೋಷಿಸಿದಳು : ''ಇಂತಹ ತೀವ್ರ ಛಲ ಹೊಂದಿರುವುದು, ಎಷ್ಟು ಸುಂದರ !''

---

ಇಂಗ್ಲಿಷ್ ಮೂಲ : 'ದಿ ವುಲ್ಫ್' : ಗೀ ದ ಮೋಪಸಾ

**ಕನ್ನಡ ಅನುವಾದ : ಬಿ. ಆರ್. ಭೀಮಾಚಾರ್/ಆಶ್ರಯ/ಬಿ. ಆರ್. ಆನಂದ್**
'ಅನುಗ್ರಹ', ೨ನೇ ಮೈನ್, ೨ನೇ ಕ್ರಾಸ್, ವಿದ್ಯಾನಗರ, ಚಿತ್ರದುರ್ಗ

# ಶನಿ - ಶುಕ್ರ ಸಮಾಗಮ




ಸಂಜೆಯ ಆಕಾಶದಲ್ಲಿ ಕಳೆದ ಕೆಲವು ತಿಂಗಳುಗಳಿಂದ ಬೆಳಗುತ್ತಿದ್ದ ಶನಿ ಕ್ರಮೇಣ ದಿಗಂತದ ಅಂಚಿಗೆ ಸರಿದಿದೆ. ತಿಂಗಳ ಕೊನೆಗೆ ಅದನ್ನು ಸಂಧ್ಯಾಪ್ರಕಾಶದಲ್ಲಿ ಹುಡುಕುವುದು ಕಷ್ಟವಾಗಬಹುದು. ಸಂಜೆಗೆ ಯಾವುದೇ ಗ್ರಹ ಇಲ್ಲವಾಗುವುದು ಎಂಬ ಕೊರತೆಯನ್ನು ನೀಗಿಸಲು ಶುಕ್ರ ಪಶ್ಚಿಮದ ಅಂಚಿನಲ್ಲಿ ಕಾಣಿಸಿಕೊಳ್ಳುವುದು. ತಿಂಗಳ ಕೊನೆಗೆ ಇವೆರಡರ ಪರಸ್ಪರ ಹಸ್ತಲಾಘವವನ್ನು ನೋಡಬಹುದು. ನಿರ್ಗಮಿಸುತ್ತಿರುವ ಶನಿ ಮತ್ತು ಆಗಮಿಸುತ್ತಿರುವ ಶುಕ್ರ ಇವೆರಡೂ ಸಂಜೆ ಕಾಣುವುವು. ಮುಂದಿನ ತಿಂಗಳಿನಿಂದ ಶುಕ್ರ ಗ್ರಹದ್ದೇ ವೈಭವ; ಶನಿ ಕಾಣದಂತಾಗುವುದು.

ಉಳಿದ ಮೂರು ಗ್ರಹಗಳು ಬೆಳಗಿನಜಾವ ಕಾಣುವುವು. ಒಂದನೆಯ ತಾರೀಖು ಬುಧ ಗ್ರಹವನ್ನು ನೋಡಲು ವಿಶೇಷ ಅವಕಾಶ. ಅದು ಗರಿಷ್ಠ ಕೋನದಲ್ಲಿ ಅಂದರೆ ಸುಮಾರು ೧೮ ಡಿಗ್ರಿಗಳಷ್ಟು ಎತ್ತರದಲ್ಲಿ ಕಾಣುವುದು. ಮುಂದಿನ ದಿನಗಳಲ್ಲಿ ಕ್ರಮೇಣ ಈ ಕೋನ ಕಡಿಮೆಯಾಗುವುದು. ತಿಂಗಳ ಕೊನೆಗೆ ಬುಧ ಪುನಃ ಸೂರ್ಯನ ಜೊತೆಗೂಡುವುದು. ೨೮ರಂದು ಇದು ಸೂರ್ಯನ ಹಿಂದೆ ಹಾದುಹೋಗುವುದನ್ನು ಸೋಹೋ ಎಂಬ ಬಾಹ್ಯಾಕಾಶ ವೀಕ್ಷಣಾಲಯ ಒದಗಿಸುತ್ತಿರುವ ಚಿತ್ರಗಳಲ್ಲಿ ಕಾಣಬಹುದು. (http://sohowww.nascom.nasa.gov/data/realtime-images.html) ಮಂಗಳ ಗ್ರಹವೂ ಬೆಳಗಿನ ಜಾವ ಕಾಣುತ್ತದೆ. ಮಿಥುನರಾಶಿಯ ಚೌಕಟ್ಟಿನಿಂದ ಹೊರಬಿದ್ದು ಕಟಕದತ್ತ ಸಾಗುತ್ತದೆ. ೧೦ರಂದು ಚಂದ್ರನ ಜೊತೆಗೂಡುತ್ತದೆ. ಮಧ್ಯರಾತ್ರಿಗೆ ಮೊದಲೇ ಉದಯಿಸುವ ಗುರು ಗ್ರಹ ೧೬ರಂದು ಚಂದ್ರನ ಜೊತೆಗೂಡುತ್ತದೆ. ಇದರ ಪ್ರಕಾಶ ದಿನೇ ದಿನೇ ಹೆಚ್ಚುತ್ತಿರುವುದನ್ನು ಗಮನಿಸಬಹುದು. ಇನ್ನೆರಡು ತಿಂಗಳಲ್ಲಿ ಇದು ಸಂಜೆಯ ಆಕಾಶಕ್ಕೆ ಬರಲಿದೆ.

ಉ
ಸಪ್ತರ್ಷಿ ಮಂಡಲ
ನಕುಲ
ರಾಜಹಂಸ
ವೀಣಾ
ಭೀಮ
ಶರ
ಪೂ
ಶ್ರವಣ
ಗರುಡ
ಶುಕ್ರ
ಪ
ಕನ್ಯಾ
ಶನಿ
ಕುಂಭ
ಉರಗಧರ
ತುಲಾ
ಮಕರ
ಧನು
ವೃಶ್ಚಿಕ
ದ

ಈ ತಿಂಗಳ ಹುಣ್ಣಿಮೆಯಾದ ಎರಡು ದಿನಗಳಿಗೆ ಚಂದ್ರ - ಭೂಮಿ ದೂರ ಗರಿಷ್ಠವಾಗುತ್ತದೆ. ಹಾಗೆಯೇ ಅಮಾವಾಸ್ಯೆಯ ಒಂದು ದಿನದಲ್ಲಿ ಈ ಅಂತರ ಕನಿಷ್ಠವಾಗುತ್ತದೆ. ಮುಂದಿನ ತಿಂಗಳಲ್ಲಿ ವಿಶೇಷವಿದೆ ಎಂಬುದರ ಮುನ್ಸೂಚನೆ ಇದು. ಆದ್ದರಿಂದ ಹುಣ್ಣಿಮೆ ಚಂದ್ರನ ಚಿತ್ರ ತೆಗೆದು ಇಟ್ಟುಕೊಂಡಿರಿ.

೨೩ರಂದು ಶರದ್ ವಿಷುವ ಅಂದರೆ ಹಗಲು-ರಾತ್ರಿಗಳ ಅವಧಿ ಸಮ. ಮುಂದೆ ಹಗಲಿನ ಅವಧಿ ಕಡಿಮೆಯಾಗುತ್ತಾ ಹೋಗುತ್ತದೆ. ಆ ಸಂಜೆ ಸೂರ್ಯಾಸ್ತವಾಗುವಾಗ ಪೂರ್ವದಲ್ಲಿ ಚೌಕಾಕಾರದ ಪೆಗಸಸ್ (ನಕುಲ) ಪುಂಜ ಉದಯಿಸುತ್ತಿರುತ್ತದೆ. ಚೌಕದ ಎರಡು ನಕ್ಷತ್ರಗಳು - ಉತ್ತರಾಭಾದ್ರ ಮತ್ತು ಪೂರ್ವಾಭಾದ್ರ. ಇದರ ಪಕ್ಕದ್ದು ಮೀನರಾಶಿ. ಆರು ತಿಂಗಳ ಹಿಂದೆ (ಮತ್ತು ಮುಂದೆ) ಈ ನಕ್ಷತ್ರ ಪುಂಜ ಸೂರ್ಯನ ಹಿನ್ನೆಲೆಯಲ್ಲಿತ್ತು. ಅದು ಮಾರ್ಚ್ ೨೧ ಎಂದು ನೆನಪಿದೆಯೇ? ಈಗ ಸೂರ್ಯನ ಹಿನ್ನೆಲೆಯಲ್ಲಿರುವುದು ಕನ್ಯಾರಾಶಿ. ಹೀಗೆ ಈ ಎರಡು ಪುಂಜಗಳು ಒಂದಕ್ಕೊಂದು ಎದುರುಬದುರಾಗಿವೆ (ವ್ಯಾಸೀಯವಾಗಿ) ಎಂದು ತಿಳಿಯಬಹುದು.


೩೦ರ ಸಂಜೆ ಶುಕ್ರ ಮತ್ತು ಶನಿ

ಜೆರಾಡ್ ಎಂಬುದೊಂದು ಧೂಮಕೇತು ಪ್ರಕಾಶ ಪಡೆಯುತ್ತಿದೆ. ಬಹುಶಃ ದುರ್ಬೀನುಗಳಿಗೆ ಸಿಗಬಹುದು. ಮುಂದೆ ನವೆಂಬರ್ ಹೊತ್ತಿಗೆ ಅದು ಬರಿಗಣ್ಣಿಗೂ ಕಾಣುವಂತಾಗಬಹುದು ಎಂಬುದು ನಿರೀಕ್ಷೆ. ಈಗದು ಗರುಡ (ಅಕ್ವಿಲಾ) ಪುಂಜದ ಶ್ರವಣ ನಕ್ಷತ್ರದ ದಕ್ಷಿಣದಿಂದ ಹಾದು ಸೆಪ್ಟೆಂಬರ್‌ನಲ್ಲಿ ಸಜಿಟಾ (ಶರ) ಎಂಬ ಪುಟ್ಟ ಪುಂಜದ ಮೂಲಕ ಹಾಯುವುದು. ತಿಂಗಳ ಕೊನೆಗೆ ಹರ್‌ಕ್ಯುಲಿಸ್ (ಭೀಮ) ಪುಂಜವನ್ನು ತಲುಪುವುದು. ಇದರ ಸ್ಥಾನ ದಿನದಿನಕ್ಕೂ ಬದಲಾಗುವುದರಿಂದ ವಿಶೇಷ ನಕ್ಷೆಗಳನ್ನು ಬಳಸಬೇಕಾಗುವುದು. ಉದಾಹರಣೆಗೆ, ನ್ಯೂಝಿಲೆಂಡ್‌ನ http://www.rasnz.org.nz/Comets/2011Garradd.htm ಈ ವೆಬ್‌ಸೈಟ್‌ನಲ್ಲಿ ನಕ್ಷೆ ದೊರಕುತ್ತದೆ.

ಸೆಪ್ಟೆಂಬರ್ ಮೊದಲೆರಡು ದಿನಗಳಲ್ಲಿ ಆಲ್ಫಾ ಆರಿಗಿಡ್ಸ್ ಎಂಬ ಕ್ಷೀಣ ಉಲ್ಕಾವೃಷ್ಟಿ ಇದೆ. ಆರಿಗಾ ಅಂದರೆ ವಿಜಯಸಾರಥಿ ಎಂಬ ಪುಂಜದ ಮೂಲಕ ಹೊರಟಂತೆ ಕಾಣುವ ಈ ಉಲ್ಕೆಗಳ ಬಗ್ಗೆ ಹೆಚ್ಚು ಅಧ್ಯಯನ ನಡೆದಿಲ್ಲ. ತಿಂಗಳ ಕೊನೆಯ ದಿನಗಳಲ್ಲಿಯೂ ಇದೇ ಹೆಸರಿನ ವೃಷ್ಟಿ ಇದೆ. ಇದು ಡೆಲ್ಟಾ ಅಂದರೆ ಆರಿಗಾ ಪುಂಜದಲ್ಲಿ ಪ್ರಕಾಶದಲ್ಲಿ ನಾಲ್ಕನೆಯ ಸ್ಥಾನ ಪಡೆದ ನಕ್ಷತ್ರದಿಂದ ಹೊರಟಂತೆ ಕಾಣುವ ಉಲ್ಕಾವೃಷ್ಟಿ. ೧, ೨ ಮತ್ತು ೩ನೆಯ ತಾರೀಖುಗಳಂದು ಆಲ್ಫಾ ಅಂದರೆ ಕಪೆಲ್ಲ ಅಥವಾ ಬ್ರಹ್ಮ ಹೃದಯ ಎಂಬ ನಕ್ಷತ್ರದಿಂದ ಹೊರಟಂತೆ ಕಾಣುತ್ತವೆ.

### ಖಗೋಳ ದಿನಚರಿ

| | |
|---|---|
| ಸೆಪ್ಟೆಂಬರ್ ೧ | ೧ ರಿಂದ ೩ ಆಲ್ಫಾ ಆರಿಗಿಡ್ಸ್ ಉಲ್ಕಾವೃಷ್ಟಿ |
| ೩ | ಮುಂಜಾವು ಬುಧ ಗ್ರಹದ ಗರಿಷ್ಠ ಕೋನೋನ್ನತಿ |
| ೪ | ಚಾಂದ್ರಮಾಸದ ಪ್ರಥಮ ಪಾದ |
| ೯ | ಮುಂಜಾವು ಬುಧ - ಮಘ ಜೋಡಿ* |
| ೧೨ | ಹುಣ್ಣಿಮೆ ೧೪:೫೭ಕ್ಕೆ |
| ೧೫ | ಚಂದ್ರ - ಭೂಮಿ ನಡುವೆ ಗರಿಷ್ಠ ದೂರ |
| ೧೬ | ನಡು ರಾತ್ರಿ ಚಂದ್ರ - ಗುರು ಜೋಡಿ* |
| ೨೦ | ಚಂದ್ರ - ಭೂಮಿ ನಡುವೆ ಕನಿಷ್ಠ ದೂರ |
| ೨೩ | ಮುಂಜಾವು ಮಂಗಳ ಮತ್ತು ಚಂದ್ರ ಜೋಡಿ* |
| | ಶರದ್ ವಿಷುವ |
| ೨೭ | ಅಮಾವಾಸ್ಯೆ ೧೬:೩೯ಕ್ಕೆ. |
| | ೨೭ರಿಂದ ೩೦ ಡೆಲ್ಟಾ ಆರಿಗಿಡ್ಸ್ ಉಲ್ಕಾವೃಷ್ಟಿ |
| ೨೮ | ಚಂದ್ರ - ಶುಕ್ರ - ಶನಿ ಪುಟ್ಟ ಗುಂಪು* |
| ೨೯ | ಬುಧ ಗ್ರಹದ ಯುತಿ |
| ೩೦ | ಸಂಜೆ ಶುಕ್ರ ಮತ್ತು ಶನಿ ಜೋಡಿ* |

(* ಛಾಯಾಗ್ರಹಣಕ್ಕೆ ಉತ್ತಮ ಅವಕಾಶ)

ಡಾ|| ಬಿ. ಎಸ್. ಶೈಲಜಾ
ಜವಾಹರಲಾಲ್ ನೆಹರು ತಾರಾಲಯ, ಹೈಗ್ರೌಂಡ್ಸ್, ಬೆಂಗಳೂರು - ೫೬೦ ೦೦೧



## ಅ. ನ. ಕೃ. : ಬದುಕು - ಬರಹ

*ಡಾ|| ಎಸ್. ವಿದ್ಯಾಶಂಕರ*

**ಪುಟ : x + ೪೭೨**

**ಬೆಲೆ : ರೂ. ೩೦೦**

**ಪ್ರಿಯದರ್ಶಿನಿ ಪ್ರಕಾಶನ**

ನಂ. ೧೩೮, ೭ನೇ 'ಸಿ' ಮುಖ್ಯರಸ್ತೆ, ಹಂಪಿನಗರ

ಬೆಂಗಳೂರು - ೫೬೦ ೧೦೪

*ಇದು ಕನ್ನಡ ಸಾಹಿತಿ ಅ. ನ. ಕೃಷ್ಣರಾಯರನ್ನು ಪರಿಚಯಿಸುವ ಕೃತಿ. ಸಾಹಿತ್ಯದಿಂದ ಪ್ರತ್ಯೇಕಿಸಿ ಅವರ ಬದುಕನ್ನು ನೋಡುವುದು ಸಾಧ್ಯವೇ ಇಲ್ಲ. ಕನ್ನಡಕ್ಕಾಗಿ ದುಡಿದ ಧೀಮಂತ ವ್ಯಕ್ತಿ ಅವರು. ತಾರುಣ್ಯದಲ್ಲಿ ಶಾಲಾ-ಕಾಲೇಜುಗಳ ಬಗ್ಗೆ ತಲೆಕೆಡಿಸಿಕೊಳ್ಳದ ಅನಕೃ ರವೀಂದ್ರನಾಥ ಠಾಕೂರ್ ಕಲ್ಕತ್ತಾದಲ್ಲಿ ನಡೆಸುತ್ತಿದ್ದ ವಿಶ್ವಭಾರತಿ ಅಥವಾ ಶಾಂತಿನಿಕೇತನದಂಥ ಶಿಕ್ಷಣಸಂಸ್ಥೆಗಳಿಗೆ ಮಾರುಹೋಗಿ, ರವೀಂದ್ರರ ವ್ಯಕ್ತಿತ್ವದಿಂದ ಪ್ರಭಾವಿತರಾಗಿ ಕೆಲಸಮಯ ಅಲ್ಲಿ ಕಳೆದಿದ್ದರು. ಅಲ್ಲಿನ ಗ್ರಂಥಾಲಯದಿಂದ ಹೆಚ್ಚಿನ ಪ್ರಯೋಜನ ಪಡೆದು ಮುಂದೆ ಬರಹಗಾರರಾಗಿ ರೂಪುಗೊಂಡರು. ಸಾಹಿತ್ಯವು ನಿಂತ ನೀರಾಗದೆ ಹೊಸ ವಿಚಾರ – ಚಿಂತನೆಯಿಂದ ಕೂಡಿರಬೇಕೆಂಬ ಹಂಬಲ ಮತ್ತು ಸಮಾಜದಲ್ಲಿ ಪರಿವರ್ತನೆಯಾಗಿ ಹಳೆಯ ಮೌಢ್ಯಗಳು ತೊಲಗಬೇಕೆಂಬ ಆಶಯ ಇರಿಸಿಕೊಂಡು ಪ್ರಗತಿಶೀಲ ಸಾಹಿತ್ಯ ಚಳುವಳಿ ಪ್ರಾರಂಭವಾದುದೇ ಅನಕೃ, ನಿರಂಜನ, ತರಾಸು ಮೊದಲಾದವರ ಸಾಂಗತ್ಯದಲ್ಲಿ. ಅಲ್ಲಿ ವರ್ಗರಹಿತ ಸಮಾಜದ ಕನಸಿತ್ತು. ಸಮಾಜದ ಹುಳುಕುಗಳಿಗೆ ಕನ್ನಡಿ ಹಿಡಿಯುವಂಥ ಸಂಜೆಗತ್ತಲು, ಶನಿಸಂತಾನ, ನಗ್ನಸತ್ಯಗಳಂಥ ಕಾದಂಬರಿಗಳು ಪ್ರಕಟವಾದಾಗ ಮಡಿವಂತ ಸಮಾಜದಿಂದ ಭಾರೀ ಪ್ರತಿರೋಧ ವ್ಯಕ್ತವಾಗಿತ್ತು. ಇವರ ಕಾದಂಬರಿಗಳೇ ನೂರರಷ್ಟಿವೆ. ಇನ್ನು ಕಥಾಸಂಕಲನ, ಪ್ರಬಂಧ, ವಿಮರ್ಶೆ ಮುಂತಾಗಿ ಪಟ್ಟಿಮಾಡಿದರೆ ಅದೊಂದು ಪುಟ್ಟ ಪುಸ್ತಕವೇ ಆದೀತು. ಈ ಕೃತಿಯಲ್ಲಿ ಬದುಕಿಗಿಂತ ಬರಹಗಳ ಬಗ್ಗೆಯೇ ಹೆಚ್ಚು ಪ್ರಸ್ತಾಪವಿದೆ, ವಿಶ್ಲೇಷಣೆಯಿದೆ.*

## ಶಬ್ದದೊಳಗಣ ನಿಶ್ಶಬ್ದ

*ಡಾ|| ಚಂದ್ರಮತಿ ಸೋಂದಾ*

**ಪುಟ : ೨೦೦** **ಬೆಲೆ : ರೂ. ೧೨೦**

**ಜ್ಯೋತಿ ಪ್ರಕಾಶನ,** ಎಮ್-೪೫, ಕರ್ನಾಟಕ ಬ್ಯಾಂಕ್ ರಸ್ತೆ, ವಿವೇಕಾನಂದ ವೃತ್ತದ ಬಳಿ

ಮೈಸೂರು - ೫೭೦ ೦೨೩

*ಇಲ್ಲಿನ ಪ್ರಧಾನ ಧಾರೆ ಸ್ತ್ರೀ ಸಂವೇದನೆ. ಬಾಯಿ ಮುಚ್ಚಿಕೊಂಡಿರಬೇಕಾದ ಪ್ರಸಂಗಗಳು ಆಕೆಗೆ ಜೀವನದಲ್ಲಿ ಅಪರೂಪದ ಸಂಗತಿಗಳೇನಲ್ಲ. ಮಹಿಳೆಯ ಬದುಕು ಸಾಕಷ್ಟು ಸುಧಾರಿಸಿದೆ ಎಂಬ ಮಾತು ಸ್ವಲ್ಪ ಮಟ್ಟಿಗೆ ನಿಜವಾದರೂ ಸೂಕ್ಷ್ಮವಾಗಿ ಅವಲೋಕಿಸಿದರೆ ಅವಳ ಬಗೆಗಿನ ಸಮಾಜದ ದೃಷ್ಟಿಕೋನ ಇನ್ನೂ ಬದಲಾಗಿಲ್ಲ. ಮೊದಲು ರಾಜಾರೋಷವಾಗಿದ್ದ ದಬ್ಬಾಳಿಕೆ-ಶೋಷಣೆಗಳು ಸ್ವಲ್ಪ ಹಿಂಜರಿದಂತೆ ಕಂಡರೂ ಅವು ಒಳಹರಿವಾಗಿ ಪ್ರವಹಿಸುತ್ತಲೇ ಇವೆ. ಮುಂಚಿನಿಂದಲೂ ಚರಿತ್ರೆಯಲ್ಲಿನ ಕಥನಗಳನ್ನು ಗಮನಿಸಿದಾಗ ಸಂಪ್ರದಾಯ - ಕಟ್ಟುಕಟ್ಟಳೆಗಳಿಂದಾಗಿ, ಹೆಚ್ಚಿನ ನೋವು, ಅಪಮಾನ, ನಿರಾಸೆಗಳನ್ನು ಅನುಭವಿಸಿದ್ದು ಪುರುಷರಿಗಿಂತ ಮಹಿಳೆಯರೇ ಹೆಚ್ಚು. ಈ ಎಲ್ಲ ವಿಚಾರಗಳನ್ನು ಉಲ್ಲೇಖಿಸುತ್ತ ಡಾ|| ಚಂದ್ರಮತಿ ಸೋಂದಾ ಅವರು ಇಲ್ಲಿನ ಲೇಖನಗಳಲ್ಲಿ ಮಹಿಳಾ ಜಾಗೃತಿಯ ಬಗ್ಗೆ ನಮ್ಮನ್ನು ಇನ್ನಷ್ಟು ಎಚ್ಚರಿಸಿದ್ದಾರೆ. ಸ್ತ್ರೀಯರ ಹೋರಾಟವು ಪುರುಷರ ದಬ್ಬಾಳಿಕೆ ಇರುವವರೆಗೂ ನಿರಂತರವಾಗಿ ನಡೆಯುತ್ತಲೇ ಇರುವ ಒಂದು ಪ್ರಕ್ರಿಯೆ. ಪುರುಷರೊಂದಿಗೆ ಸರಿಸಮನಾಗಿ ಹೆಜ್ಜೆಹಾಕುತ್ತಿರುವ ಇಂದಿನ ಸ್ತ್ರೀಗೆ ಆತನನ್ನು ಹಿಂದಿಕ್ಕಿ ಮುಂದೆ ದಾಪುಗಾಲು ಹಾಕಲು ಪ್ರೇರೇಪಿಸುವಂಥ ಲೇಖನಗಳು. ಶಶಾಂಕ್ ಅವರ ಮುಖಪುಟದ ಚಿತ್ರವಂತೂ ಅತ್ಯಾಕರ್ಷಕವಾಗಿದ್ದು ಹೆಣ್ಣಿಗಳ ಮುಖದ ಮೇಲೊಂದು 'ನಗೀ ನವಿಲು' ಆಡುತ್ತಾ ಆಡುತ್ತಾ ನತ್ತೊಂದನ್ನು ಆಕೆಯ ಮೂಗಿಗೆ ತೊಡಿಸಿದೆ. ಕಲಾವಿದನ ಕಲ್ಪನೆ ಅದ್ಭುತ.*



## ತರಾವಳಿ (ಲೇಖನಗಳ ಸಂಕಲನ)

*ಜಿ. ಎಸ್. ಉಬರಡ್ಕ*

**ಪುಟ : iv + ೧೫೮** **ಬೆಲೆ : ರೂ. ೮೦**

**ಕೌಸ್ತುಭ ಪ್ರಕಾಶನ,** ನಂ. ೧೮೯, ೩ನೇ ಮಹಡಿ, ಈ.ಎ.ಟಿ. ಸ್ಟ್ರೀಟ್, ಬಸವನಗುಡಿ

ಬೆಂಗಳೂರು - ೫೬೦ ೦೦೪

*ಇಲ್ಲಿ ವರ್ಣಿಸಲ್ಪಟ್ಟ ವ್ಯಕ್ತಿಚಿತ್ರಗಳು – ಹಳ್ಳಿಯ ಬದುಕಿನ ಚಿತ್ರಗಳು ಸೊಗಸಾಗಿವೆ. ಗದ್ದೆ, ತೋಟ, ಬೆಟ್ಟ, ಗುಡ್ಡ, ಕಾಡು ಇವೆಲ್ಲದರ ಮಧ್ಯೆ ಕೃಷಿಕರಾಗಿ ಬಾಳಿದ ಒಂದೆರಡು ತಲೆಮಾರು ಹಿಂದಿನ ಕುಟುಂಬಗಳನ್ನು ಪರಿಚಯಿಸಿದವರು ಶ್ರೀ ಜಿ. ಎಸ್. ಉಬರಡ್ಕ. ಇದು ಸುಳ್ಯ ತಾಲೂಕು, ಅದರ ಆಸುಪಾಸಿನ ಗ್ರಾಮಗಳಿಗಷ್ಟೇ ಸೀಮಿತ. ಅಂದಿನ ಕಾಲದ ಪದ್ಧತಿ, ಕೌಟುಂಬಿಕ ವ್ಯವಹಾರಗಳು, ನಡವಳಿಕೆಗಳನ್ನೆಲ್ಲ ಈ ಲೇಖನಗಳು ಪರಿಚಯಿಸುತ್ತವೆ. ಸುಮಾರು ನೂರೈವತ್ತು ವರ್ಷಗಳಷ್ಟು ಹಳೆಯ ಸಂಪೂರ್ಣ ನೋಟವಿದು. ಅಡಕೆ, ತೆಂಗು, ಬಾಳೆ, ಭತ್ತ ಮುಂತಾಗಿ ಕೃಷಿಯನ್ನವಲಂಬಿಸಿದ ಈ ಮಹನೀಯರು ಸಮಾಜದಲ್ಲೂ ಗಣ್ಯವ್ಯಕ್ತಿಗಳಾಗಿದ್ದು ಯಕ್ಷಗಾನ,ಸಮಾಜಸೇವೆ, ಮಾತ್ರವಲ್ಲದೆ ಕವಿ - ಸಾಹಿತಿಗಳಾಗಿಯೂ ಹೆಸರು ಗಳಿಸಿದ್ದಾರೆ. ಅವರ ಸಜ್ಜನಿಕೆ - ಅತಿಥಿ ಸತ್ಕಾರ ಮರೆಯಲಾಗದಂಥದು. ವಿಶೇಷವಾಗಿ ಇಲ್ಲಿ ಪೈಲೂರು ಮನೆತನ, ಗಣಪಯ್ಯ ಭಾಗವತ, ಸುಬ್ರಾಯ ಚೊಕ್ಕಾಡಿ, ಕೆ. ವಿ. ಸುಬ್ಬಣ್ಣ ಮೊದಲಾದವರ ಪರಿಚಯವಿದೆ. ಜೊತೆಯಲ್ಲೇ ಒಂದು ಮರವು ಮನುಷ್ಯನಿಗಿಂತ ಅರ್ಥಪೂರ್ಣವಾಗಿ ಬಾಳಿ ಉರುಳಿಬಿದ್ದ ಘಟನೆಯಿದೆ. ಪಶ್ಚಿಮಘಟ್ಟಗಳಿಂದ ಕವಲೊಡೆದು ಕರಾವಳಿ ಕಡೆಗೆ ಚಾಚಿದ 'ಬಂಟಮಲೆ' ಎಂಬ ಗಂಭೀರ ಗುಡ್ಡವೊಂದರ ವರ್ಣನೆ ಇದೆ. ನಾವಿಂದು ಕಳೆದುಕೊಂಡಿರುವ ಗ್ರಾಮೀಣ ಸಂಸ್ಕೃತಿಯೊಂದರ ಅಪರೂಪದ ಚಿತ್ರಣ.*

## ಚಮ್ಮಾವುಗೆ (ಕಥಾ ಸಂಕಲನ)

*ಡಾ|| ಎಚ್. ಟಿ. ಪೋತೆ*

**ಪುಟ : xiv + ೯೨ = ೧೦೬** **ಬೆಲೆ : ರೂ. ೭೫**

**ಕುಟುಂಬ ಪ್ರಕಾಶನ,** ವರ್ಷಾ ನಿಲಯ, ಪ್ಲಾಟ್ ನಂ. ೮೧/೮೨, ಪ್ರಬುದ್ಧನಗರ, ವಿಶ್ವವಿದ್ಯಾಲಯ ಅಂಚೆ, ಕುಸನೂರ ರಸ್ತೆ

ಗುಲಬರ್ಗಾ - ೫೮೫ ೧೦೬



*ದಲಿತ ವರ್ಗವೆಂದರೆ ನಮ್ಮ ನಡುವೆಯೇ ನಿಕೃಷ್ಟವಾದ ಬದುಕನ್ನು ಸಾಗಿಸುತ್ತ ಯಾಜಮಾನ್ಯ ಸಂಸ್ಕೃತಿಯಲ್ಲಿ ಉಸಿರುಕಟ್ಟಿ ಬೆಂದವರು - ನೊಂದವರು. ಅಂಥವರ ಬದುಕಿನ ನೋವು-ಅಪಮಾನಗಳನ್ನು ಚಿತ್ರಿಸುತ್ತಲೇ ಒಂದು ಬಲಶಾಲಿ ವ್ಯವಸ್ಥೆಯಲ್ಲಿ ದುರ್ಬಲರ ಪಾಡೇನು ಎಂಬುದನ್ನು ಕಥೆಗಳ ಮೂಲಕ ತಿಳಿಸಿಕೊಡುವ, ತನ್ಮೂಲಕ ಅಸಮಾನತೆಯ ಘೋರ ಸತ್ಯವನ್ನು ಅನಾವರಣಗೊಳಿಸುವ ಕೃತಿಯಿದು. ಭಾರತದ ಜಾತಿಪದ್ಧತಿಯೆಂಬ ವಿಷವೃಕ್ಷವು ದಿನೇ ದಿನೇ ಬಲಶಾಲಿಯಾಗುತ್ತಿದ್ದು ಕಳೆದ ಶತಮಾನದಲ್ಲಿದ್ದುದಕ್ಕಿಂತಲೂ ಸ್ವಲ್ಪ ಹೆಚ್ಚೇ ಎನ್ನಿಸುವಷ್ಟು ಬೇರೂರಿದೆ. ಎಲ್ಲವನ್ನೂ, ಎಲ್ಲರನ್ನೂ ಜಾತಿ ಆಧಾರದ ಮೇಲೇ ಗುರುತಿಸಲಾಗುತ್ತಿದ್ದು ಸಾಲದ್ದಕ್ಕೆ ಜಾತಿ ಜನಗಣತಿ ಎಂಬ ಅನಿಷ್ಟವೊಂದನ್ನು ಸರಕಾರವೇ ಹುಟ್ಟುಹಾಕುತ್ತಿದೆ. ದಲಿತರನ್ನಂತೂ ಬೇರೆಯೇ ಎಂಬಂತೆ ಇಟ್ಟಿದ್ದಾರೆ. ಹುಟ್ಟಿನಿಂದ ಜಾತಿಯನ್ನು ನಿರ್ಧರಿಸುವ ಮೂರ್ಖತನ ನಮ್ಮ ಹಿಂದೂಧರ್ಮದ್ದು. ವಿದ್ಯೆಗೆ-ಪ್ರತಿಭೆಗೆ ಅಲ್ಲಿ ಪುರಸ್ಕಾರವಿಲ್ಲ. ಜಾತಿಪದ್ಧತಿ ನಿರ್ಮೂಲವಾಗುವ ಬದಲು ಹೊಸ ಹೊಸ ಜಾತಿಗಳ ಉಗಮವಾಗುತ್ತಿರುವುದು ಅಪಾಯದ ಘಂಟಾನಾದ. ಇಂಥ ಕರಾಳ ವ್ಯವಸ್ಥೆಯಲ್ಲಿ ನೊಂದು ಸೃಷ್ಟಿಸಲಾದ ಈ ಕಥೆಗಳಲ್ಲಿ ಅವಮಾನದ ಬಿಸಿಯುಸಿರಿದೆ; ಬಡತನದ ಬೇಗೆಯಿಂದ ಉರಿದ ಒಡಲುರಿಯಿದೆ; ಜೀತದಾಳೆಂಬ ಹೀನ ಸಂಸ್ಕೃತಿಯೊಂದರ ಪರಿಚಯವಿದೆ. ಇಲ್ಲಿನ ಅಪ್ಪ ಮತ್ತು ಚಮ್ಮಾವುಗೆ ಕಥೆಗಳು ಗುಲ್ಬರ್ಗಾ ವಿಶ್ವವಿದ್ಯಾಲಯದ ಸ್ನಾತಕೋತ್ತರ ತರಗತಿಗಳಿಗೆ ಪಠ್ಯವಾಗಿದೆ.*

**ಭಾಷಾ ವಿಶ್ಲೇಷಣೆ** (ಡಾ|| ಎಚ್. ಎಸ್. ಅನಂತನಾರಾಯಣ ಅವರ ಭಾಷಾವಿಜ್ಞಾನ ಲೇಖನಗಳ ಕಟ್ಟು)

ಕಟ್ಟುಗ : ಬಸವರಾಜ ಕೋಡಗುಂಟಿ

**ಪುಟ : xvi + ೨೮೫ = ೩೦೪** **ಬೆಲೆ : ರೂ. ೨೨೦**

**ಬಂಡಾರ ಪ್ರಕಾಶನ,** ಮಸ್ಕಿ, ರಾಯಚೂರು ಜಿಲ್ಲೆ

ಸವಿಸ್ತಾರವಾದ ಭಾಷಾವಿಜ್ಞಾನದ ವಿಶ್ಲೇಷಣೆಯನ್ನು ಈ ಕೃತಿಯಲ್ಲಿ ಮಾಡಲಾಗಿದೆ. ಕಾಲಕಾಲಕ್ಕೆ ಭಾಷೆಗಳು ವಿವಿಧ ಒತ್ತಡಗಳಿಗೊಳಗಾಗಿಯೋ, ಗ್ರಾಮ್ಯಪದಗಳ ಬಳಕೆ ಶಿಷ್ಟಭಾಷೆಯಲ್ಲಿ ಸೇರ್ಪಡೆಯಾಗಿಯೋ, ಆಡುಮಾತಿನ ಪ್ರಭಾವದಿಂದಲೋ ಬದಲಾಗುತ್ತಾ ಇರುತ್ತವೆ. ಗ್ರಾಂಥಿಕಭಾಷೆ, ಕಾವ್ಯಭಾಷೆಗಳೆಲ್ಲವೂ ಉಳಿದು ಬೆಳೆಯುವ ಜೊತೆಗೆ ನಿರಂತರ ಬದಲಾವಣೆ ಹೊಂದುತ್ತಿರುತ್ತವೆ. ಯಾವುದೂ ನಿಂತ ನೀರಲ್ಲವಾದರೂ ಅಸಂಬದ್ಧ ಪದಪ್ರಯೋಗಗಳು ಮುಜುಗರ ಉಂಟುಮಾಡುತ್ತವೆ. ಕನ್ನಡದಲ್ಲಷ್ಟೇ ಅಲ್ಲ, ಭಾರತದ ಹೆಚ್ಚಿನ ಪ್ರಾದೇಶಿಕ ಭಾಷೆಗಳಲ್ಲಿ – ವ್ಯಾಕರಣದಲ್ಲಿ ಸಂಸ್ಕೃತದ ಪ್ರಭಾವವಿರುವುದನ್ನು ಅಲ್ಲಗಳೆಯಲಾಗದು.



ಭಾಷೆಯೊಂದು ಶುದ್ಧವಾಗಿ ಉಳಿಯುವ ಸಾಧ್ಯತೆ ಇಂದಿನ ದಿನಗಳಲ್ಲಿ ಕಡಿಮೆ. ಭಾರತದ ಬಹುತೇಕ ಭಾಷೆಗಳಲ್ಲಿ ಇಂದು ಇಂಗ್ಲಿಷ್ ಪದಗಳು ಸೇರ್ಪಡೆಯಾಗಿದ್ದರಿಂದ ಇದನ್ನು ದೃಢಪಡಿಸಬಹುದು. ಪ್ರಪಂಚದಾದ್ಯಂತ ಇರುವ ಭಾಷೆಗಳು ಅಪರಿಮಿತ. ಅವೆಲ್ಲವುಗಳ ವಿಶ್ಲೇಷಣೆಗೆ ಬೃಹತ್ ಗ್ರಂಥಗಳನ್ನೇ ಬರೆಯಬೇಕಾದೀತು. ಆದರೂ ಈ ಪುಸ್ತಕದಲ್ಲಿ ಭಾಷಾ ಬೆಳವಣಿಗೆ ಮತ್ತು ವಿವಿಧ ಭಾಷೆಗಳ ನಡುವೆ ಒಂದು ಸಾಮ್ಯತೆಯಿರುವುದನ್ನು ಉದಾಹರಣೆಗಳ ಸಹಿತ ಗುರುತಿಸಲಾಗಿದೆ. ಇಂಡೋ-ಆರ್ಯನ್, ಇಂಡೋ-ಯೂರೋಪಿಯನ್ ತೌಲನಿಕ ಭಾಷಾವಿಜ್ಞಾನ ಕ್ಷೇತ್ರಕ್ಕೆ ಗಮನಾರ್ಹ ಸೇವೆ ಸಲ್ಲಿಸಿದ ಭಾಷಾವಿದ್ವಾಂಸ ಡಾ|| ಎಚ್. ಎಸ್. ಅನಂತನಾರಾಯಣ ಅವರ ಲೇಖನಗಳ ಸಂಗ್ರಹವಿದು.

**ಮನುಷ್ಯರನ್ನು ಹುಡುಕುತ್ತ** (ಮರಾಠಿ ದಲಿತ ಕತೆಗಳು)

ಮೂಲ : ಡಾ|| ಬಾಬುರಾವ್ ಗಾಯಕವಾಡ;

ಕನ್ನಡಕ್ಕೆ : ಡಾ|| ವಿಜಯ ಕಾಂಬಳೆ

**ಪುಟ : xii + ೮೮ = ೧೦೦** **ಬೆಲೆ : ರೂ. ೫೦**

**ಲಡಾಯಿ ಪ್ರಕಾಶನ,** ನಂ. ೨೧, ಪ್ರಸಾದ್ ಹೋಸ್ಟೆಲ್ ಗದಗ - ೫೮೨ ೧೦೧



ಮನ ಕಲಕುವ ಇಲ್ಲಿನ ಕಥೆಗಳು ಮರಾಠಿಯಿಂದ ಅನುವಾದಗೊಂಡಿವೆ. ಡಾ|| ಬಿ. ಆರ್. ಅಂಬೇಡ್ಕರ್ ಅವರ ಕಠಿಣ ಪರಿಶ್ರಮದಿಂದಾಗಿ ದಲಿತರಿಗೆ ಒಂದು ಗೌರವದ ಬದುಕು ಲಭ್ಯವಾಗಿದ್ದು ಶೋಷಣೆಯ ವಿರುದ್ಧ ಪ್ರತಿಭಟಿಸಲು ಧೈರ್ಯ ತಂದುಕೊಟ್ಟಿತು. ಅದುವರೆಗೂ ಹಿಂದೂ ಧಾರ್ಮಿಕ ವ್ಯವಸ್ಥೆಯಡಿಯಲ್ಲಿ ಹೀನ ಬದುಕನ್ನು ಒಪ್ಪಿ ಬಾಳುತ್ತಿದ್ದ ಜನ ಸೆಟೆದು ನಿಂತು ಸಮಾನತೆಗಾಗಿ ಹೋರಾಟಕ್ಕೆ ಅಣಿಯಾದರು. ಸಮಾಜಸುಧಾರಣೆಯಾಗಿ ಹಲವರು ವಿದ್ಯಾವಂತರಾಗಿ ಸಾಹಿತ್ಯದ ಮೂಲಕ ತಮ್ಮ ಬವಣೆಗಳಿಗೆ ಅಕ್ಷರ ರೂಪ ನೀಡಿದರು. ಶತಮಾನಗಳಿಂದ ಒತ್ತಿಹಿಡಿದ ಗಂಟಲುಗಳಿಗೆ ದನಿಯ ಸೌಭಾಗ್ಯ ಬಂದಿತು. ಅವರೀಗ ಎಲ್ಲೆಡೆ ಹೆಜ್ಜೆ ಊರುತ್ತಿದ್ದಾರೆ, ಸಾಹಿತಿಗಳೂ ಆಗಿ ತಮ್ಮ ಛಾಪು ಮೂಡಿಸಿದ್ದಾರೆ. ಹೀಗೆ ಅನಾವರಣಗೊಂಡ ದಲಿತರ ಬದುಕಿನ ವಿವರ ಕಥೆಗಳಾಗಿ, ಆತ್ಮಕಥೆಗಳಾಗಿ ಜನರೆಡೆಗೆ ಹರಿದುಬಂತು. ಕೆಲಮಟ್ಟಿಗೆ ದಲಿತರ ಸಮಸ್ಯೆಗಳು ಪರಿಹಾರವಾದಂತೆ ಕಂಡರೂ ಅವರೊಂದಿಗೆ ಮುಕ್ತವಾಗಿ ಮೇಲ್ವರ್ಗದವರು ನಡೆದುಕೊಳ್ಳುತ್ತಿಲ್ಲವೆಂಬ ಸತ್ಯ ಈ ಕಥೆಗಳಲ್ಲಿ ಹರಿದುಬಂದಿದೆ. ದಲಿತ ಸಾಹಿತ್ಯವನ್ನು ಕೇವಲ ಟೈಂ-ಪಾಸ್‌ಗಾಗಿಯೋ, ಅಧ್ಯಯನಕ್ಕೋ ಅಥವಾ ನಮ್ಮ ಪಿಎಚ್. ಡಿ. ಪದವಿಯೆಂಬ ಸ್ವಾರ್ಥಕ್ಕೋ ಓದದೆ ಶೋಷಣೆಯನ್ನು ಮುಕ್ತಗೊಳಿಸುವ ಕಡೆಗೂ ಹೆಜ್ಜೆ ಹಾಕುತ್ತ ಶ್ರಮಿಸಬೇಕಾಗಿದೆ. ಇಲ್ಲವಾದಲ್ಲಿ ಮನುಷ್ಯರಂತೆ ಕಾಣುವ ನಮ್ಮ ಮಧ್ಯೆ ಮನುಷ್ಯರಂತೆ ನಡೆದುಕೊಳ್ಳುವವರನ್ನು ಇಂಥ ಕಥೆಗಳು ಹುಡುಕುತ್ತಲೇ ಇರುತ್ತವೆ...

**– ಇಂದಿರಾಕುಮಾರಿ**

*೩೪/೧೧, ೨ನೇ ಕ್ರಾಸ್, ಬಾಂಬೆ ಡೈಯಿಂಗ್ ಸಮೀಪ, ಯಶವಂತಪುರ, ಬೆಂಗಳೂರು - ೨೨*

## ಸಾದರ ಸ್ವೀಕಾರ

**ಏನಿದು ಲೋಕಪಾಲ್ ?** ವೈ. ಜಿ. ಮುರಳೀಧರ
ಪುಟ : ೪೦ ಬೆಲೆ : ರೂ. ೨೦
**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೫೬೦ ೦೦೧

**ಅಸಮಾನ ಭಾರತ** (ಜಾತಿ ಜನಗಣತಿ ಮೀಸಲಾತಿ ವಿಶ್ಲೇಷಣೆ)
ಸಂ. : ಡಾ|| ಎಚ್. ಎಸ್. ಅನುಪಮ
ಡಾ|| ಕೃಷ್ಣ ಜಿ., ಕೆ. ಎಲ್. ಚಂದ್ರಶೇಖರ ಐಜೂರ್
ಪುಟ : ೨೫೬ ಬೆಲೆ : ರೂ. ೧೫೦

**ಅಮೆರಿಕಾ ಆ ಮುಖ** (ಪ್ರವಾಸ ಕಥನ)
ಡಾ|| ಸಿ. ಎಸ್. ದ್ವಾರಕಾನಾಥ್
ಪುಟ : ೧೫೨ ಬೆಲೆ : ರೂ. ೮೦
ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
**ಲಡಾಯಿ ಪ್ರಕಾಶನ,** ನಂ. ೨೧, ಪ್ರಸಾದ್ ಹಾಸ್ಟೆಲ್, ಗದಗ - ೫೮೨ ೧೦೧

**ಇವರು ನಮ್ಮವರು** ನಾಡೋಜ ಡಾ|| ಪಾಟೀಲ ಪುಟ್ಟಪ್ಪ
ಪುಟ : ೧೨೪ ಬೆಲೆ : ರೂ. ೬೦

**ಸೌಹಾರ್ದ ಸೌರಭ** (ಲೇಖನ ಸಂಗ್ರಹ) ರಂಜಾನ್ ದರ್ಗಾ
ಪುಟ : ೧೨೪ ಬೆಲೆ : ರೂ. ೫೦
ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
**ಲೋಹಿಯಾ ಪ್ರಕಾಶನ,** 'ಕ್ಷಿತಿಜ', ಕಪ್ಪಗಲ್ಲು ರಸ್ತೆ, ಗಾಂಧಿನಗರ, ಬಳ್ಳಾರಿ - ೫೮೩ ೧೦೩

**ದೇವಕಿಯ ಪತ್ರಗಳು** (ಕಥಾ ಸಂಕಲನ)
ಶ್ರೀನಿವಾಸ ಜೋಕಟ್ಟೆ
ಪುಟ : ೧೭೩ ಬೆಲೆ : ರೂ. ೯೦
**ಶ್ರೀರಾಮ ಪ್ರಕಾಶನ,** ನಂ. ೮೯೩/ಡಿ. ೩ನೇ ಕ್ರಾಸ್, ಪೂರ್ವ ಬಡಾವಣೆ, ನೆಹರು ನಗರ, ಮಂಡ್ಯ - ೫೭೧ ೪೦೧

**ಮಹತ್ ಕಾವ್ಯ ಕಲ್ಪನೆ** ಮೂಲ : ಲ್ಯಾಸೆಲ್ ಅಬರ್‌ಕ್ರಾಂಬಿ
ಅನು : ಸಿ.ಪಿ.ಕೆ.
ಪುಟ : ೧೪೮ ಬೆಲೆ : ರೂ. ೮೦
**ತನು ಮನು ಪ್ರಕಾಶನ,** ಹೆಚ್‌ಐಜಿ - ೧೨೬೭, ಕಾವ್ಯಲೋಕ, ೧ನೇ ತಿರುವು, ೨ನೇ ಹಂತ, ಶ್ರೀರಾಂಪುರ ಬಡಾವಣೆ, ಮೈಸೂರು - ೨೫

**ಮೂರು ಜೈನ ಪುರಾಣಗಳು** ಸಿ. ಪಿ. ಕೆ.
ಪುಟ : ೩೨೮ ಬೆಲೆ : ರೂ. ೧೫೦
**ನಾಗಾರ್ಜುನ ಎಂಟರ್‌ಪ್ರೈಸಸ್,** ನಂ. ೫೮, ಅಕ್ಕಮಹಾದೇವಿ ರಸ್ತೆ, ದಾವಣಗೆರೆ

**ವಚನ ವೀಕ್ಷಣ** ಸಿ. ಪಿ. ಕೆ.
ಪುಟ : ೨೫೬ ಬೆಲೆ : ರೂ. ೧೩೦
**ಮುತ್ತು ಎಂಟರ್‌ಪ್ರೈಸಸ್,** ನಂ. ೩೪೧, ಕಾಳಮ್ಮನ ದೇವಸ್ಥಾನದ ಬೀದಿ, ಮೈಸೂರು - ೫೭೦ ೦೦೧

**ಮುಕ್ತರ ಮಾಲೆ** (ಪದ್ಯಗಳು) ಸಿ.ಪಿ.ಕೆ.
ಪುಟ : ೬೮ ಬೆಲೆ : ರೂ. ೪೦
**ಚಿತ್ರಭಾನು ಪ್ರಕಾಶನ,** ೨೨೬೫/೧೯ 'ಭಾರತಿ', ೬ನೇ ಕ್ರಾಸ್, ೪ನೇ ಮೇನ್, ವಿನಾಯಕನಗರ, ಮೈಸೂರು - ೫೭೦ ೦೧೨

**ಯೂರಿಪಿಡಿಸ್ ಕವಿಯ ಮೀಡಿಯ** ಅನು : ಸಿ.ಪಿ.ಕೆ.
ಪುಟ : ೮೮ ಬೆಲೆ : ರೂ. ೪೫
**ರೂಪ ಪ್ರಕಾಶನ,** ನಂ. ೨೬, ೧೧ನೇ ಬ್ಲಾಕ್, ಜೆಎಸ್‌ಎಸ್ ಬಡಾವಣೆ, ನಜರ್‌ಬಾದ್ ಮೊಹಲ್ಲಾ, ಮೈಸೂರು - ೧೧

**ಪರಿಪೂರ್ಣ ಜೀವನವೇ ಯೋಗ** ಸಂಪಾದಿತ :
ಪುಟ : ೨೫೬ ಬೆಲೆ : ರೂ. ೧೨೦
**ಶ್ರೀ ಪತಂಜಲಿ ಯೋಗಶಿಕ್ಷಣ ಸಮಿತಿ (ರಿ),** ಕರ್ನಾಟಕ, ಮೈಸೂರು ನಗರ

**ಅಂಬೇಡ್ಕರ್ ಪ್ರಬುದ್ಧ ಭಾರತದ ದ್ರಷ್ಟಾರ**
ಗೇಲ್ ಆಮ್‌ವೆಡ್ಟ್; ಕನ್ನಡಕ್ಕೆ : ರಾಹು
ಪುಟ : ೨೧೪ ಬೆಲೆ : ರೂ. ೧೫೦
**ಸುಮೇಧ ಪ್ರಕಾಶನ,** ಪ್ಲಾಟ್ ನಂ. ೨೦, ಮನೆ ನಂ. ೧-೯೪೯, ಹಳೆ ಜೇವರ್ಗಿ ರಸ್ತೆ, ದೇವನಗರ, ಗುಲಬರ್ಗಾ - ೫೮೫ ೧೦೫

**ಹಳದಿ ಚಿಟ್ಟೆ**(ಕವಿತೆಗಳು) ಆರ್. ವಿಜಯರಾಘವನ್
ಪುಟ : ೧೫೮ ಬೆಲೆ : ರೂ. ೯೦
**ವಿಹಾ ಪ್ರಕಾಶನ,** ನಂ. ೧೭೩, ೭ನೇ ಮೇನ್, ೨೪ನೇ 'ಎ' ಕ್ರಾಸ್, ಗೋವಿಂದರಾಜನಗರ, ನಾಗರಭಾವಿ ಮುಖ್ಯರಸ್ತೆ, ಬೆಂಗಳೂರು - ೫೬೦ ೦೭೯

**ನಾನು ಓದಿದ ಶಾಲೆ** ಕೋ. ಚೆ.
ಪುಟ : ೮೦ ಬೆಲೆ : ರೂ. ೪೦
**ಶ್ರೀ ಶರಣಬಸವೇಶ್ವರ ವಿದ್ಯಾವರ್ಧಕ ಸಂಘ (ರಿ),** ಅಷ್ಟದಶಮಾನೋತ್ಸವ ಸಮಿತಿ, ಕಾನಾಮಡುಗು, ಕೂಡ್ಲಿಗಿ ತಾ.

**ಬಿಂದು** (ಅಂಕಣಬರಹ ಸಂಕಲನ)
ಡಾ|| ಎಚ್. ಎಸ್. ಸುಜಾತಾ
ಪುಟ : ೨೪೮ ಬೆಲೆ : ರೂ. ೨೦೦
**ಸುಹಾಸ ಪ್ರಕಟಣೆಗಳು,** ೫೩, ೪ನೇ ಮುಖ್ಯರಸ್ತೆ, ಮಾರುತಿ ದೇವಸ್ಥಾನದ ಬೀದಿ, ಕುವೆಂಪುನಗರ, ಮೈಸೂರು - ೫೭೦ ೦೦೯



ಎಸ್. ಸಿ. ರಂಗನಾಥ್
'ಮಾತೃಶ್ರೀ ನಿಲಯ', ಮನೆ ನಂ. ೯/೭, ೩ 'ಡಿ' ಮುಖ್ಯರಸ್ತೆ,
೯ನೇ ಕ್ರಾಸ್, ೮೦ ಅಡಿ ರಸ್ತೆ, ಸಾರಕ್ಕಿ ೧ನೇ ಹಂತ
ಜೆ. ಪಿ. ನಗರ, ಬೆಂಗಳೂರು - ೫೬೦ ೦೭೮

# ಮರದ ಮಾತು

ನಾನು ಮರ ... ಗೊತ್ತಲ್ಲ ನಿಮಗೆ ... ನನ್ನನ್ನು 'ವೃಕ್ಷ' ಎಂತಲೂ 'ತರು' ಎಂತಲೂ ಕರೆಯುತ್ತಾರೆ. ನಾನು ನನ್ನ ಸಹಪಾಠಿಗಳೊಂದಿಗೆ ಗುಂಪಿನಲ್ಲಿ ಇದ್ದಾಗ, ನಮ್ಮ ಗುಂಪನ್ನು 'ತೋಪು' ಎಂತಲೂ, ಅಸಂಖ್ಯಾತವಾಗಿ ಇರುವಾಗ ನಮ್ಮನ್ನು 'ಕಾಡು' ಎಂತಲೂ ಕರೆಯುತ್ತಾರೆ. ನಾಗರಿಕ ಜನರು ನಮ್ಮನ್ನು ವ್ಯವಸ್ಥಿತವಾಗಿ ಬಳಸಿಕೊಂಡು ನಿರ್ಮಿಸಿಕೊಂಡ ಆವರಣವನ್ನು ಉದ್ಯಾನ ಅಥವಾ ಪಾರ್ಕ್ ಎನ್ನುತ್ತಾರೆ.

ಪ್ರಕೃತಿಯ ನಿಯಮದಂತೆ ಹುಟ್ಟುವುದು - ಬೆಳೆಯುವುದು, ನನ್ನಿಂದ ಆಗುವಷ್ಟು ನಿಸ್ವಾರ್ಥ ಸೇವೆ ಸಲ್ಲಿಸುವುದು - ಕೊನೆಗೆ ನಿಯಮದಂತೆ, ಯಾವ ಗೊಣಗಾಟ, ಚೀರಾಟ, ದುಃಖ-ದುಮ್ಮಾನಗಳೂ ಇಲ್ಲದೆ ಸಂತೋಷವಾಗಿ ಸಾಯುತ್ತೇನೆ. ನಾನು ಹುಟ್ಟಿದಂದಿನಿಂದ ಸಾಯುವವರೆಗೆ ಯಾರ ತಂಟೆಗೂ ಹೋಗುವುದಿಲ್ಲ, ಯಾವ ತಕರಾರಿಗೂ ಹೋಗುವುದಿಲ್ಲ. ಪ್ರಕೃತಿ ನಿಯಮಿಸಿದ ಕಾರ್ಯಕಲಾಪಗಳನ್ನು ಚಾಚೂ ತಪ್ಪದೆ ಆಯಾ ಕಾಲಕ್ಕೆ ಸರಿಯಾಗಿ ನಿರ್ವಹಿಸುತ್ತೇನೆ. ಅಂದರೆ, ನಾನು ಯೌವ್ವನಕ್ಕೆ ಬಂದಾಗಿನಿಂದ ಅಂತ್ಯಕಾಲದವರೆಗೆ ಆಯಾ ವಯಸ್ಸಿಗೆ ಅನುಗುಣವಾಗಿ, ಆಯಾ ಕಾಲಕ್ಕೆ ಅನುಗುಣವಾಗಿ ಹೂವು-ಕಾಯಿ-ಹಣ್ಣುಗಳನ್ನು ಕೊಡುವುದರ ಮೂಲಕ ಸೇವೆ ಸಲ್ಲಿಸುತ್ತೇನೆ. ನಾನೂ ಬೆಳೆದು ಬೇರೆಯವರೂ ಬೆಳೆಯಲು ಅವಕಾಶ ಕಲ್ಪಿಸಿಕೊಡುತ್ತೇನೆ. ನಾನು ಅನೇಕ ಪಶು-ಪಕ್ಷಿ-ಪ್ರಾಣಿ-ಕೀಟಗಳಿಗೆ ಆಶ್ರಯ ಕೊಟ್ಟು, ತಾಯಿಯಂತೆ ಆಹಾರವನ್ನೂ ಕೊಟ್ಟು ಸಲಹುತ್ತೇನೆ. ನನ್ನ ಸೋದರ-ಸೋದರಿಯರು, ಚಿಕ್ಕವರಿರಲಿ, ದೊಡ್ಡವರಿರಲಿ, ಯಾವುದೇ ರೂಪ ಆಕಾರಗಳಲ್ಲಿ (ಮರ, ಗಿಡ, ಬಳ್ಳಿ, ಹುಲ್ಲು-ಹಸಲೆ ಇತ್ಯಾದಿ) ಯಾರಿಗೂ ತೊಂದರೆ ಕೊಡುವವರಲ್ಲ. ಪಶು-ಪಕ್ಷಿ-ಪ್ರಾಣಿ ಹಾಗೂ ಮಾನವರು ಬಿಟ್ಟ ಉಸಿರನ್ನು (ಇಂಗಾಲದ ಡೈಆಕ್ಸೈಡ್) ನಾನು ತೆಗೆದುಕೊಂಡು ಅವರ ಜೀವನಕ್ಕೆ ಬೇಕಾಗುವ ಉಸಿರನ್ನು ಅಂದರೆ ಆಮ್ಲಜನಕವನ್ನು ಬಿಟ್ಟುಕೊಡುತ್ತೇನೆ. ಇದು ಪ್ರಕೃತಿಯ ಇಚ್ಛೆ. ಅದರಂತೆ, ನಾನು ತೆಗೆದುಕೊಳ್ಳುತ್ತೇನೆ ಎನ್ನುವ ಕೀಳುಭಾವನೆಯೂ ಇಲ್ಲ; ನಾನು ಕೊಡುತ್ತೇನೆ ಎಂಬ ಅಹಂಭಾವವೂ ಇಲ್ಲ.

ಮಾನವರಲ್ಲಿ ಹಲವರು ನನ್ನ ಹೆಸರನ್ನು ಉಪಯೋಗಿಸಿಕೊಂಡೇ ತಮ್ಮ ಜೀವನವನ್ನು ಸಾರ್ಥಕಪಡಿಸಿಕೊಂಡಿದ್ದಾರೆ. ಓರ್ವ ಬೇಡ, ದರೋಡೆಕೋರನಾದ ವಾಲ್ಮೀಕಿಯು ನನ್ನ ಹೆಸರನ್ನು, ಅಂದರೆ ''ಮರ-ಮರ-ಮರ'' ಎಂದು ಹೇಳಿಕೊಂಡೇ ಧ್ಯಾನ ಮಾಡುತ್ತಾ ''ರಾಮ-ರಾಮ-ರಾಮ''ಎಂದು ಧ್ಯಾನಿಸಿ ಮುಕ್ತಾತ್ಮನಾಗಿ ಮಹರ್ಷಿಯಾದ ಎಂಬ ಐತಿಹ್ಯ ಉಂಟು. ಇವನು ಹೇಳಿದ ಆತ್ಮಾರಾಮನ ಚರಿತ್ರೆ, ಇಂದು, ಮುಂದು ಮತ್ತು ಎಂದೆಂದಿಗೂ ಚಿರವಾಗಿ ಉಳಿಯುವಂತಾಗಿದೆ. ರಾಮ ತಾರಕ ಮಂತ್ರವೆಂದು ಜನಮನ ಸೇರಿದೆ. ಗೌತಮನು ಬುದ್ಧನಾದದ್ದು ಸಹ ನನ್ನ ಆಶ್ರಯದಲ್ಲೇ. ಅಂದರೆ ಬೋಧಿವೃಕ್ಷದ (ಅಶ್ವತ್ಥ ವೃಕ್ಷ) ಕೆಳಗೆ ಧ್ಯಾನ ಮಾಡುತ್ತಾ ಕುಳಿತಾಗ ಅವನಿಗೆ ಜ್ಞಾನೋದಯವಾಯಿತು. ರಾಮಾಯಣದ ಶ್ರೀರಾಮ ಸೀತೆಗಾಗಿ ವನವಾಸ ಮಾಡುವಾಗ ಅವರನ್ನು ಕಾಪಾಡಿದ್ದೇನೆ. ವೃದ್ಧರು ವಾನಪ್ರಸ್ಥಾಶ್ರಮಕ್ಕಾಗಿ ನನ್ನ ಬಳಿಗೇ ಬರುತ್ತಾರೆ. ಊರನ್ನು ತೊರೆದು ವನಕ್ಕೆ ತಪಸ್ಸಿಗಾಗಿ ಬಂದ ಎಲ್ಲರಿಗೂ ಶಾಂತಿಯನ್ನು ನೀಡಿದ್ದೇನೆ. ನೊಂದವರಿಗೆ, ಬೆಂದವರಿಗೆ ಕೊನೆಗೆ ನಾನೇ ಗತಿ. ಪ್ರತಿಯೊಬ್ಬ ಸಾಧು, ಸಂತ, ಯೋಗಿ, ಜೋಗಿ, ಬ್ರಹ್ಮಚಾರಿ, ಸಂಸಾರಿ ಮುಂತಾದ ಎಲ್ಲರೂ ನನ್ನನ್ನು ಆಶ್ರಯಿಸುವರು. ನಾನು ಯಾರಿಗೂ ದ್ರೋಹ ಬಗೆಯುವುದಿಲ್ಲ. ಸಕಲರಿಗೂ ಮಿತ್ರ, ಸಕಲರಿಗೂ ಲೇಸನ್ನೇ ಬಯಸುತ್ತೇನೆ. ಪಾಪಿಯಾಗಿರಲಿ, ಪರದೇಶಿಯಾಗಿರಲಿ, ದುಷ್ಟನಾಗಿರಲಿ, ಶಿಷ್ಟನಾಗಿರಲಿ, ದರೋಡೆಕೋರನಾಗಿರಲಿ, ಚಂಡಾಲನಾಗಿರಲಿ ಅವರೆಲ್ಲರಿಗೂ ಆಹಾರ, ಆಶ್ರಯವನ್ನು ಕೊಟ್ಟು ಸಲಹುತ್ತೇನೆ. ನನ್ನಲ್ಲಿ. ಯಾವುದೇ ರೀತಿಯ ಜಾತಿಭೇದ, ಮತಬೇಧ, ವರ್ಣಭೇದ, ವರ್ಗಭೇದ, ಪ್ರಾಂತಭೇದ, ರಾಷ್ಟ್ರಭೇದ ಎಂಬುದಿಲ್ಲ. ಸರ್ವರನ್ನೂ ಸಂತೈಸುತ್ತೇನೆ. ವಾಯುವನ್ನು ಶುದ್ಧಿಮಾಡುವ ಕಾರ್ಯವೂ ನನ್ನದೆ. ನನ್ನ ಸಹವಾಸ, ನನ್ನ ಸಹಾಯ ಬೇಡ ಎಂಬುವವರು ಈ ಜಗತ್ತಿನಲ್ಲಿ ಯಾರೂ ಇಲ್ಲ. ನನ್ನ ಅನುಗ್ರಹವಿಲ್ಲದಿದ್ದರೆ ಜೀವಿಗಳಿಗೆ ಸಾವೇ ಗತಿ. ನನ್ನನ್ನು ಎಷ್ಟರಮಟ್ಟಿಗೆ ಗೌರವಿಸುತ್ತಾರೋ ಅಷ್ಟರಮಟ್ಟಿಗೆ ಅವರಿಗೆ ಸಹಾಯವಾಗುತ್ತದೆ.

ನನ್ನ ವನರಾಜ್ಯ ಸುಖೀ ರಾಜ್ಯ. ಈ ರಾಜ್ಯದಲ್ಲಿರುವ ಪಶು-ಪಕ್ಷಿ-ಪ್ರಾಣಿಗಳು ಸ್ವತಂತ್ರವಾಗಿ ತಿಂದು-ಉಂಡು ಬದುಕುತ್ತವೆ. ಅವು ಯಾರ ತಂಟೆಗೂ ಹೋಗುವಂಥವಲ್ಲ. ಪ್ರಕೃತಿ ನಿಯಮವನ್ನು ಪಾಲಿಸುತ್ತವೆ. ಹೀಗಿರುವಾಗ ನಾಡಿನ ಜನ ನಮಗೆ ತೊಂದರೆ ಕೊಡಲು ಬಂದರೆ, ನಮ್ಮ ವೃಕ್ಷ ಸಂಪತ್ತಿಗೆ ಕೊಡಲಿ ಹಾಕಿದರೆ, ಗರಗಸದಿಂದ ಕೊಯ್ದರೆ, ನಮ್ಮ ಆಶ್ರಿತರು ರೌದ್ರಾವತಾರವನ್ನು ತಾಳುತ್ತಾರೆ. ನಾಡಿಗೆ ನುಗ್ಗಿ ನರರಾಕ್ಷಸರಿಗೆ ವೀರಭದ್ರನಂತೆ, ಕಾಲಭೈರವರಾಗಿ ಹಿಂಸಿಸುವುದು ಹಾಗೂ ಕೊಲ್ಲುವುದರ ಮೂಲಕ ಸೇಡನ್ನು ತೀರಿಸಿಕೊಳ್ಳುತ್ತಾರೆ. ಹೀಗೆ ಆದಾಗ ನಾಡಿನವರೇ...! ನಮ್ಮನ್ನು ದೂಷಿಸಬೇಡಿ. ಇದಕ್ಕೆಲ್ಲಾ ನೀವೇ ಕಾರಣರು...! ?

ನನ್ನನ್ನು ತಿರಸ್ಕಾರದಿಂದ ಕಾಣುವುದು, ಒಡೆಯುವುದು, ಬಡಿಯುವುದು, ಚಿಗುಟುವುದು, ಕೊಚ್ಚುವುದು, ನಿಮ್ಮ ಪ್ರಚಾರ ಸಾಧನಗಳನ್ನು ಮೊಳೆ ಬಡಿದು ನನ್ನ ಮೇಲೆ ನೇತಾಡುವಂತೆ ಮಾಡುವುದು, ತಂತಿಯಿಂದ ಬಿಗಿಯುವುದು, ನನ್ನ ಬೊಡ್ಡೆಗೆ (ಬುಡ) ಬೆಂಕಿ ಹಾಕುವುದು, ನಿಮ್ಮ ಖುಷಿಗಾಗಿ ನನ್ನ ಮೈಮೇಲೆಲ್ಲಾ ವಿದ್ಯುತ್ ತಂತಿ ಸುತ್ತಿ ಆಲಂಕಾರಿಕ ವಿದ್ಯುತ್ ದೀಪಗಳನ್ನು ಬೆಳಗಿಸುವುದು, ನನ್ನ ಸರ್ವತೋಮುಖ ಬೆಳವಣಿಗೆಗೆ ಅಡ್ಡಿಯಾಗುವಂತೆ ನನ್ನ ರೆಂಬೆ-ಕೊಂಬೆಗಳನ್ನು ಕಡಿದು ಘಾಸಿ ಮಾಡುವುದು – ಮುಂತಾದ ಕಾರ್ಯಗಳಿಂದ ನಾನು ನೊಂದಿದ್ದೇನೆ. ಈ ಮನುಷ್ಯರಿಗೆ ಎಷ್ಟು ಉಪಕಾರ ಮಾಡಿದರೂ ಅವರು ಕೃತಘ್ನರು ಎಂಬ ಭಾವನೆ ಬಂದಿದೆ. ಮಾನವ ಜನ್ಮ ದೊಡ್ಡದು ಎಂದು ಹೇಳುತ್ತಾರೆ. ನನ್ನನ್ನು ಹಿಂಸಿಸುವ ಮಾನವ ಜನ್ಮ ದೊಡ್ಡದಾ...?? ಇಂತಹ ಕುಕೃತ್ಯಗಳು ಮುಂದುವರೆದಿದ್ದೇ ಆದರೆ... ಅದರ ಪ್ರತಿಫಲವಾಗಿ ನಿಮಗೆ ಬರಬಾರದ ರೋಗಗಳು ಬರುತ್ತವೆ. ನಾನು/ನಾವು ಅನೇಕ ಔಷಧಿಗಳನ್ನು (ಗಿಡಮೂಲಿಕೆಗಳನ್ನು) ಕೊಟ್ಟಿದ್ದರೂ ಉಪಯೋಗಿಸಿಕೊಳ್ಳುವ ಜಾಣ್ಮೆ, ಯೋಗ್ಯತೆ ಇಲ್ಲದೆ ನರಳುತ್ತೀರಿ. ಆಗಬಾರದ್ದು ಆಗುತ್ತದೆ. ನನ್ನನ್ನು ಕೆಣಕಿದಷ್ಟೂ... ನಿಮ್ಮ ಸಾವಿನ ಗುಂಡಿಯನ್ನು ನೀವೇ ತೋಡಿಕೊಂಡು, ನಿಮ್ಮ ಸರ್ವನಾಶಕ್ಕೆ ನೀವೇ ಕಾರಣರಾಗುತ್ತೀರಿ... ಯೋಚಿಸಿ ... ಎಚ್ಚರ ... ಎಚ್ಚರ ...

☆



# ಸೂಫಿಗಳು ಮತ್ತು ಶರಣರು

**ಭಾಲಚಂದ್ರ ಜಯಶೆಟ್ಟಿ**

'ಸೂಫೀ' ಪದದ ನಿಷ್ಪತ್ತಿಯನ್ನು ವಿದ್ವಾಂಸರು ಬಗೆಬಗೆಯಾಗಿ ವಿವರಿಸಿದ್ದಾರೆ. ಅವುಗಳನ್ನು ಕ್ರೋಡೀಕರಿಸಿ ಈ ರೀತಿಯಾಗಿ ಪಟ್ಟಿ ಮಾಡಬಹುದು:

1. 'ಸೂಫ್' ಎಂದರೆ ಉಣ್ಣೆ. ಬಿಳಿ ಉಣ್ಣೆಯ ನಿಲುವಂಗಿಯನ್ನು ಧರಿಸುತ್ತಿದ್ದುದರಿಂದ ಇವರಿಗೆ 'ಸೂಫೀ' ಎಂದು ಕರೆಯಲಾಯಿತು.

2. ಗ್ರೀಕ್ ಭಾಷೆಯ 'ಸೋಫಿಯಾ' ಪದದಿಂದ 'ಸೂಫೀ' ಎಂಬ ಪದ ನಿಷ್ಪನ್ನವಾಗಿದೆ. 'ಸೋಫಿಯಾ' ಎಂದರೆ ಜ್ಞಾನ. ಪರಮಾತ್ಮನ ಪೂರ್ಣ ಜ್ಞಾನ ಪಡೆದಿರುವುದರಿಂದ ಇವರು 'ಸೂಫೀ'ಗಳು.

3. 'ಸಫ್ಪಾ'ಎಂದರೆ ಜಗುಲಿ. ಇವರು ಯಾವಾಗಲೂ ಮಸೀದಿಯ ಜಗುಲಿಯ ಮೇಲೆ ಕುಳಿತಿರುತ್ತಿದ್ದುದರಿಂದ 'ಸೂಫೀ' ಎನಿಸಿದರು.

4. 'ಸಫ್' ಎಂದರೆ ಸಾಲು. ಕಯಾಮತ ಅಂದರೆ ಸೃಷ್ಟಿಯ ಅಂತ್ಯದಲ್ಲಿ ನಿರ್ಣಾಯಕದ ದಿನ ಇವರು ಭಗವಂತನ ಎದುರಿಗೆ ಒಂದು ಪ್ರತ್ಯೇಕವಾದ ಸಾಲಿನಲ್ಲಿ ನಿಲ್ಲುತ್ತಾರೆ ಎಂಬ ಅರ್ಥದಿಂದ 'ಸೂಫೀ' ಪದ ಬಳಕೆಗೆ ಬಂತು.

5. 'ಸಫಾ' ಎಂದರೆ ಶುದ್ಧ ನಿರ್ಮಲ, ಪವಿತ್ರ ಎಂದು ಅರ್ಥ. ಇವರ ನಡೆನುಡಿಗಳೆಲ್ಲ ಪವಿತ್ರವಾಗಿರುವುದರಿಂದ 'ಸೂಫೀ' ಎನಿಸಿದರು.

ಸೂಫೀ ಪಂಥವು ಇಸ್ಲಾಂ ಸಂಪ್ರದಾಯದ ಒಂದು ಅಂಗವಾಗಿದೆ ಎಂದು ಎಲ್ಲರೂ ಒಪ್ಪುತ್ತಾರೆಯಾದರೂ ಈ ಎರಡರಲ್ಲಿಯೂ ಮೌಲಿಕವಾದ ಭೇದಗಳಿವೆ, ನಂಬಿಕೆ ಗಳಿವೆ. ಕೆಲವು ವಿದ್ವಾಂಸರ ಅಭಿಪ್ರಾಯದಂತೆ ಭಗವಂತನಿಂದ ಮೊದಲ ಮಾನವನ ಸೃಷ್ಟಿಯಾದಂದಿನಿಂದಲೇ ಸೂಫೀ ಪಂಥವು ಹುಟ್ಟಿಕೊಂಡಿತು ಎಂದು ಹೇಳುತ್ತಾರೆ. ಹೀಗಾಗಿ ಪ್ರವಾದಿ ಹಜರತ ಮುಹಮ್ಮದರೂ ಕೂಡ ಒಬ್ಬ ಸೂಫೀ ಸಂತರಾಗಿದ್ದರು ಎಂದು ಹೇಳಬಹುದು. ಅನೇಕ ಜನ ಸೂಫೀ ಸಂತರು ತಾವು ಪ್ರವಾದಿ ಹಜರತ ಮುಹಮ್ಮದರ ಪರಂಪರೆಗೆ ಸೇರಿದವರಲ್ಲ, ತಮ್ಮ ಪರಂಪರೆ ಭಿನ್ನವಾಗಿದೆ ಎಂದು ಹೇಳಿಕೊಳ್ಳುತ್ತಾರೆ. ಆದರೂ ಕೂಡ ಸೂಫೀ ನಂಬಿಕೆಯ ಮೇಲೆ ಇಸ್ಲಾಮಿನ ಸಾಕಷ್ಟು ಪ್ರಭಾವ ಆಗಿರುವುದನ್ನು ನಾವು ಕಾಣುತ್ತೇವೆ. ಪ್ರಮುಖವಾಗಿ ಸೂಫೀ ಪಂಥವು ಇಸ್ಲಾಮಿನ ಗುಹ್ಯ ಸಾಧನೆ, ಆರ್ಯರ ಅದ್ವೈತವಾದ ಮತ್ತು ವಿಶಿಷ್ಟಾದ್ವೈತವಾದ, ನವ ಪ್ಲಾಟೊನಿಕ ಮತ ಹಾಗೂ ವಿಚಾರ ಸ್ವಾತಂತ್ರ್ಯ - ಈ ನಾಲ್ಕು ತಳಹದಿಯ ಮೇಲೆ ರೂಪುಗೊಂಡಿದೆ ಎಂದು ಹೇಳಬಹುದು.

ಇದು ಇಸ್ಲಾಮಿಗಿಂತ ಪ್ರಾಚೀನವಾದುದು ಎಂದು ಸಾಧಿಸುವುದು ಕಷ್ಟ. ಆದರೂ ಸೂಫೀ ಸಿದ್ಧಾಂತಗಳು ಪೈಗಂಬರರ ಬೋಧನೆಯ ಎಲ್ಲೆಯನ್ನು ಮೀರಿಹೋಗುತ್ತವೆ. ಇಸ್ಲಾಮವು ಒಂದು ಬಾಹ್ಯ ಸೌಧದಂತಿದ್ದು ಅದರಲ್ಲಿ ವ್ಯಕ್ತಿಯು ಪರಿಮಿತನಾಗಿರುತ್ತಾನೆ. ಆದರೆ ಸೂಫೀಗಳಲ್ಲಿ ಜ್ಞಾನದಾಹವು ಅಡಗಿದ್ದು ಅದು ಆಂತರಿಕ ತಳಮಳವನ್ನು ಉಂಟುಮಾಡುತ್ತದೆ. ಈ ಆಧ್ಯಾತ್ಮಿಕ ಅನುಭೂತಿಯನ್ನು ನೇರವಾಗಿ ಸಂಪಾದಿಸಬಹುದೇ ಹೊರತು ಮಧ್ಯವರ್ತಿಗಳಾದ ಪ್ರವಾದಿ, ಸಂತ ಅಥವಾ ಪುರೋಹಿತರ ಮೂಲಕ ಪಡೆಯುವಂಥದಲ್ಲ. ಶರಣರ ಸಿದ್ಧಾಂತವೂ ಇದೇ ಆಗಿದೆ. ಸೂಫೀಗಳ ನಂಬಿಕೆಯ ಪ್ರಕಾರ ಎಲ್ಲ ಧರ್ಮಗಳು ಮುಕ್ತಿಯ ಅಥವಾ ಜ್ಞಾನಪ್ರಾಪ್ತಿಯ ಮಾಧ್ಯಮಗಳಾಗಿವೆ, ತನ್ನಲ್ಲಿ ಭಗವಂತನ ಅನುಭೂತಿಯನ್ನು ಅನುಭವಿಸುವುದೇ ಆಗಿದೆ. ಅದು ಯಾವ ಮಾರ್ಗದಿಂದ ತನ್ನ ಗುರಿಯನ್ನು ಸಾಧಿಸುತ್ತದೆ ಎಂಬುದು ಗೌಣ. ಶರಣರು ಕೂಡ ತಾವೊಂದು ಧರ್ಮವನ್ನು ಹುಟ್ಟುಹಾಕಿ, ನೀವು ಇಂಥ ಧರ್ಮವನ್ನು ಪಅಲಿಸಿದರೆ ಮಾತ್ರ ಮುಕ್ತಿ ದೊರಕುತ್ತದೆ ಎಂದು ಹೇಳಲಿಲ್ಲ. ಸೂಫೀಗಳ ಒಂದು ಮೌಲಿಕವಾದಿ ವಿಚಾರವೆಂದರೆ ತನ್ನತನವನ್ನು, ಅಂದರೆ ವೈಯಕ್ತಿಕ ಅಸ್ಮಿತೆಯನ್ನು ನ್ಯೂನ್ಯಾತಿನ್ಯೂನಗೊಳಿಸುವುದು. ಅಂದರೆ ಶರಣರ ಮಾತಿನಲ್ಲಿ 'ತಾನು' ಎಂಬುದನ್ನು ಶೂನ್ಯಗೊಳಿಸುವುದು ಎಂದು ಅರ್ಥ. ಇದು ಇಸ್ಲಾಮ್ ಎಷ್ಟರಮಟ್ಟಿಗೆ ಸ್ವೀಕರಿಸುತ್ತದೆ ಎಂಬುದು ಚಿಂತಿಸಬೇಕಾದ ವಿಚಾರ. ಯಾಕೆಂದರೆ ಇಸ್ಲಾಮವು 'ಶರೀಯತ' ಹಂತಕ್ಕಿಂತ ಮುಂದೆ ಯೋಚಿಸುವುದನ್ನೇ ಪ್ರತಿಬಂಧಿಸುತ್ತದೆ. ಆದರೆ ಸೂಫೀ ಸಿದ್ಧಾಂತದ ಪ್ರಕಾರ ಕೊನೆಯ ಹಂತವಾದ 'ಹಕೀಕತ'ವರೆಗೆ ಸಾಧಕನು ತಲುಪಿ ತನ್ನ ಪಾರ್ಥಿವತೆಯನ್ನು 'ಫನಾ' ಅಂದರೆ ನಾಶಗೊಳಿಸಿ ಪರಮಾತ್ಮನ ಶುದ್ಧ ಅಂಶವನ್ನು ಮಾತ್ರ 'ಬಕಾ' ಅಂದರೆ ಶೇಷವಾಗಿಸಿಕೊಳ್ಳುತ್ತಾನೆ. ಇಸ್ಲಾಂ ಮುಖ್ಯವಾಗಿ ಬಯಸುವುದೇನೆಂದರೆ **ಪರಲೋಕದಲ್ಲಿ ನಿನಗೆ ಉತ್ತಮ ಫಲ ದೊರೆಯಬೇಕಾದರೆ ಈ ಲೋಕದಲ್ಲಿ ನೀನು ಹೇಗೆ ಬಾಳಬೇಕು** ಎಂಬುದಾಗಿದೆ. ಮುಂದೆ ಪರಲೋಕದಲ್ಲಿ ಸಿಗಬಹುದಾದ ಬದುಕನ್ನು ನೀನು ಇದೇ ಲೋಕದಲ್ಲಿ ಪಡೆ ಎಂಬುದು ಸೂಫೀ ಸಿದ್ಧಾಂತ, 'ನೀನು ಸಾಯುವುದಕ್ಕೆ ಮೊದಲು ಸಾಯಿ' ಎಂಬುದು ಅವರ ಉಪದೇಶವಾಗಿದೆ. ಇದರ ಅರ್ಥವೆಂದರೆ ನಿನ್ನ ಭೌತಿಕ ಬದುಕನ್ನು ಕೊಂದು ಆಧ್ಯಾತ್ಮಿಕ ಬದುಕಿನ ಮೇಲೆ ನಿನ್ನ ಮನಸ್ಸನ್ನು ಕೇಂದ್ರೀಕರಿಸು ಎಂದು.

ಇಸ್ಲಾಮು ಏಕೇಶ್ವರವಾದವನ್ನು ನಂಬುತ್ತದೆ. ಅದರ ಭಗವಂತನು ಸಾಕಾರನಲ್ಲದಿದ್ದರೂ ಸಗುಣನಾಗಿದ್ದಾನೆ. ಜೀವಾತ್ಮನು ಪರಮಾತ್ಮನಿಗೆ ದಾಸನಾಗಿದ್ದಾನೆ. ಅಲ್ಲಿ ದಾಸ್ಯ ಭಕ್ತಿ ಇದೆ. ಅದು ದ್ವೈತ ಭಾವನೆಯನ್ನು ಅವಲಂಬಿಸಿದೆ. ಅಂದರೆ, ಸಾಂಪ್ರದಾಯಿಕ ಇಸ್ಲಾಂನಲ್ಲಿ ಭಗವಂತನನ್ನು ಮಾನವನ ಹಂತದಿಂದ ದೂರವಿಡಲಾಗಿದೆ. ಇದು ಸೂಫೀಗಳಿಗೆ ಹಿಡಿಸಲಿಲ್ಲ. ಇಸ್ಲಾಂನ ಕೆಲವು ವಿಚಾರಗಳ ಬಗ್ಗೆ ಅವರಲ್ಲಿ ಒಂದು ರೀತಿಯ ಕ್ರಾಂತಿಕಾರಕ ಮನೋಭಾವನೆ ಬೆಳೆಯಿತು. ಸೂಫೀ ಪಂಥದ ಪರಮಾತ್ಮನು ನಿರ್ಗುಣನಾಗಿದ್ದಾನೆ. ಅದು ಜೀವಾತ್ಮ ಮತ್ತು ಪರಮಾತ್ಮನಲ್ಲಿ ಅದ್ವೈತವನ್ನು ಒಪ್ಪುತ್ತದೆ. ಆಡಂಬರದ ಬದಲು ಸದಾಚಾರದ ಬದುಕು, ದಾಸ್ಯದ ಬದಲು ಮಾಧುರ್ಯ ಭಕ್ತಿಯು ಸೂಫೀಯ ಜೀವಾಳವಾಗಿದೆ. ಇಸ್ಲಾಮಿನ ಭಕ್ತಿಯಲ್ಲಿ ನ್ಯಾಯನಿಷ್ಠುರನಾದ ಭಗವಂತನ ಭಯದ ಛಾಯೆ ಸ್ಪಷ್ಟವಾಗಿ ಕಾಣುತ್ತದೆ. ಆದರೆ ಸೂಫೀಯ ಭಕ್ತಿಯು ಪ್ರೇಮಸ್ವರೂಪಿಯಾದ ಭಗವಂತನ ಪ್ರೀತಿಯ ತಳಹದಿಯ ಮೇಲೆ ನಿಂತಿದೆ. ಹೀಗಾಗಿ ಸೂಫೀ ಪಂಥವು ಇಸ್ಲಾಮಿಗೆ ಪ್ರತಿಕೂಲವಾಗಿ ಪರಿಣಮಿಸಿತು. ಮುಹಮ್ಮದ ಪೈಗಂಬರರ ಮರಣಾನಂತರ ಈ ಸೂಫೀ ವಿಶ್ವಾಸಗಳಿಗೆ ಷಿಯಾ-ನೇ-ಅಲಿಯ ಗುಂಪಿನವರು ಕೆಲವು ಹೊಸ ಸಂಕಲ್ಪನೆಗಳನ್ನು ಜೋಡಿಸಿದರು. **ಗುಲೂಬ್**- ಎಂದರೆ ಮಾನವನು ಈಶ್ವರನ ಮಟ್ಟಕ್ಕೆ ಏರಬಲ್ಲನು, ಅರ್ಥಾತ್ ಮನುಷ್ಯನು ಈಶ್ವರನಾಗಬಲ್ಲನು. **ತಕ್ಸೀರ** - ಅಂದರೆ ಅಲ್ಲಾಹನು ಇಷ್ಟಪಟ್ಟರೆ ಮನುಷ್ಯನ ರೂಪು ತಳೆಯಬಲ್ಲನು. (ಈ ಸಿದ್ಧಾಂತದೊಂದಿಗೆ ಹಜರತ್ ಅಲಿಯವರಲ್ಲಿ ದೇವತ್ವದ ಕಲ್ಪನೆಯನ್ನು ಸಂಸ್ಥಾಪಿಸಲಾಯಿತು.) ಆದರೆ ಮುಂದೆ ಈ ನಂಬಿಕೆ ಉಳಿದುಬರಲಿಲ್ಲ. ಹಾಗೆಂದೇ ಪ್ರಸಿದ್ಧ ಸೂಫೀ ಸಾಧಕನಾದ ಮನ್ಸೂರ್ ಹಲ್ಲಾಜನು 'ಅಹಮ್ ಬ್ರಹ್ಮಾಸ್ಮಿ' (ಅನಲ್‌ಹಕ್) ಎಂದು ಹೇಳಿದ್ದಕ್ಕಾಗಿ ನೇಣುಗಂಬ ಏರಬೇಕಾಯಿತು. ಹೀಗಾಗಿ ಪ್ರಾರಂಭದ

ದಿನಗಳಲ್ಲಿ ಸೂಫೀ ಪಂಥವು ಇಸ್ಲಾಮಿನ ಕಡು ವಿರೋಧವನ್ನು ಎದುರಿಸಬೇಕಾಯಿತು. ಮುಂದೆ ಇಮಾಮ ಗಜಾಲಿ ಎನ್ನುವವರು ಇಸ್ಲಾಂ ಹಾಗೂ ಸೂಫೀ ಪಂಥದಲ್ಲಿ ಸಮನ್ವಯವನ್ನು ಸ್ಥಾಪಿಸಿದ ಮೇಲೆ ಇವುಗಳಲ್ಲಿಯ ಸಂಘರ್ಷವು ಕೊನೆಗೊಂಡು ಸೂಫೀ ಪಂಥವು ಇಸ್ಲಾಮಿನ ಒಂದು ಶಾಶ್ವತವಾದ ಅಂಗ ಎಂದು ಪರಿಗಣಿಸಲಾಯಿತು.



**ಭಾರತಕ್ಕೆ ಸೂಫೀ ಪಂಥದ ಆಗಮನ**

ಇಸ್ಲಾಂ ಮತ್ತು ಸೂಫೀ ಎರಡೂ ಸಂಪ್ರದಾಯಗಳು ಇಸ್ಲಾಮೀ ಆಡಳಿತದೊಂದಿಗೆ ಭಾರತವನ್ನು ಪ್ರವೇಶಿಸಿದವು. ಮೊಟ್ಟ ಮೊದಲಿಗೆ 12ನೆಯ ಶತಮಾನದಲ್ಲಿ ಅಲ್ ಹುಜ್ಜೀರಿಯವರ ಆಗಮನದೊಂದಿಗೆ ಸೂಫೀ ಪಂಥವು ಭಾರತವನ್ನು ಪ್ರವೇಶಿಸಿತು. ಸೂಫೀಗಳ ಕುರಿತು 'ಚಾರ ಪೀರ ಚೌದಹ ಖಾನುವಾದೇ' ಎಂಬ ಮಾತೊಂದಿದೆ. ಅಂದರೆ ನಾಲ್ಕು ಜನ ಪೀರರಿಂದ ಸೂಫೀ ಪಂಥದ ಹದಿನಾಲ್ಕು ಶಾಖೆಗಳು ವಿಕಾಸಗೊಂಡವು ಎಂದು ಇದರ ಅರ್ಥ. ಆ ನಾಲ್ಕು ಜನ ಪೀರರಿಂದ ಹುಟ್ಟಿಕೊಂಡ ಸೂಫೀಯ ನಾಲ್ಕು ಪ್ರಮುಖ ಸಂಪ್ರದಾಯಗಳು ಏಕಕಾಲಕ್ಕೆ ಭಾರತವನ್ನು ಪ್ರವೇಶಿಸದೆ ಬೇರೆ ಬೇರೆ ಕಾಲಖಂಡಗಳಲ್ಲಿ ಪ್ರವೇಶಿಸಿದವು. ಅವುಗಳ ವಿವರ ಈ ರೀತಿಯಾಗಿದೆ:

1. ಚಿಶ್ತಿ ಸಂಪ್ರದಾಯ : ಹನ್ನೆರಡನೆಯ ಶತಮಾನದ ಉತ್ತರಾರ್ಧ
2. ಸುಹರಾವರ್ದೀ ಸಂಪ್ರದಾಯ : ಹದಿಮೂರನೆಯ ಶತಮಾನದ ಪೂರ್ವಾರ್ಧ
3. ಖಾದರೀ ಸಂಪ್ರದಾಯ : ಹದಿನೈದನೆಯ ಶತಮಾನದ ಉತ್ತರಾರ್ಧ
4. ನಕ್ಶಬಂಧೀ ಸಂಪ್ರದಾಯ : ಹದಿನಾರನೆಯ ಶತಮಾನದ ಉತ್ತರಾರ್ಧ

ಇವುಗಳಲ್ಲಿ ತುಂಬ ಮಹತ್ವದ ಮತ್ತು ಪ್ರಸಿದ್ಧವಾದ ಸಂಪ್ರದಾಯವೆಂದರೆ ಚಿಶ್ತಿ ಸಂಪ್ರದಾಯ. ಈ ಸಂಪ್ರದಾಯದ ಏಳನೆಯ ತಲೆಮಾರಿನ ಸಂತರಾದ ಖ್ವಾಜಾ ಮುಯಿನುದ್ದೀನ ಚಿಶ್ತೀಯವರು ಭಾರತದಲ್ಲಿ ಸೂಫೀ ಮತವನ್ನು ಪ್ರಚುರಪಡಿಸಿದರು. ಸೂಫೀ ಸಂತರು ತಮ್ಮ ಶಾಂತವೂ ಅಹಿಂಸಾಪೂರ್ಣವೂ ವಿಶಾಲವೂ ಆದ ದೃಷ್ಟಿಕೋನದ ಆಚರಣೆಯ ಮೂಲಕ ಭಾರತದಲ್ಲಿ ಇಸ್ಲಾಂ ಧರ್ಮವನ್ನು ಎಷ್ಟರ ಮಟ್ಟಿಗೆ ಪ್ರಚುರಗೊಳಿಸಿದರೋ ಅಷ್ಟು ಪ್ರಮಾಣದಲ್ಲಿ ಆಕ್ರಮಣಶೀಲರಾದ ಮುಸ್ಲಿಮ ಶಾಸಕರ ಕತ್ತಿ - ಕೋವಿಗಳಿಗೂ ಕೂಡ ಸಾಧ್ಯವಾಗಿರಲಿಲ್ಲ. ತಮ್ಮ ವೈಯಕ್ತಿಕ ಸಾತ್ವಿಕ ಬದುಕಿನ ಪ್ರಭಾವದಿಂದ ಇವರು ಪರಧರ್ಮೀಯರನ್ನು ಆಕರ್ಷಿಸಿ ಇಸ್ಲಾಮಿನ ಅನುಯಾಯಿಗಳ ಸಂಖ್ಯೆಯನ್ನು ಅಪಾರವಾಗಿ ಬೆಳೆಸಿದರು. ಇದು ಇವರ ಪ್ರೀತಿಯ ವಿಜಯವಾಗಿತ್ತು. ಅದರಲ್ಲಿ ಆತ್ಮೀಯತೆ ಹಾಗೂ ನಂಬಿಕೆಗಳಿಗೆ ಅಪರಿಮಿತವಾದ ಶಕ್ತಿ ತುಂಬಿತ್ತು.

ಸೂಫೀಗಳಲ್ಲಿಯೂ ಶರಣರಲ್ಲಿಯೂ ಕಂಡುಬರುವ ಒಂದು ಮಹತ್ವದ ಅಂಶ ಇದು ಸೂಫೀಗಳು ಮತ್ತು ಶರಣರು ಈ ಇಬ್ಬರ ಸಂಪ್ರದಾಯಗಳಲ್ಲಿ ಸಾಮಾಜಿಕ ಒಗ್ಗಟ್ಟು ಮತ್ತು ಸಾಮಾಜಿಕ ಸಮಾನತೆಗೆ ಹೆಚ್ಚಿನ ಒತ್ತು ಕೊಡಲಾಗಿದೆ. ಸಮಾಜದಲ್ಲಿ ಅಸ್ಪೃಶ್ಯನಾದ ವ್ಯಕ್ತಿಯು ಈ ಎರಡೂ ಸಂಪ್ರದಾಯಗಳಲ್ಲಿ ದೀಕ್ಷಿತನಾಗಿ ಆ ಸಂಪ್ರದಾಯಗಳನ್ನು ಸ್ವೀಕರಿಸಿದನೆಂದರೆ ಆತನನ್ನು ತುಂಬ ಗೌರವದಿಂದ ಕಾಣಲಾಗುತ್ತದೆ. ಆತನ ಹಿಂದಿನ ಸಂಸ್ಕಾರಗಳ ಬಗ್ಗೆ ಸಹಿಷ್ಣುತೆಯನ್ನು ತೋರುವುದರ ಜೊತೆಗೆ ಆಯಾ ಸಂಪ್ರದಾಯಗಳ ಎಲ್ಲ ಧಾರ್ಮಿಕ, ಸಾಮಾಜಿಕ ಮಾನ ಸನ್ಮಾನಗಳನ್ನೂ, ಸ್ವಾತಂತ್ರ್ಯಗಳನ್ನೂ ಕೊಡಲಾಗುತ್ತದೆ. ಅಸ್ಪೃಶ್ಯರ ಮತ್ತು ಅವಹೇಳನಕ್ಕೆ ಗುರಿಯಾದ ಜನಾಂಗದ ದೃಷ್ಟಿಯಲ್ಲಿ ಇದು ಕಡಿಮೆ ಮಹತ್ವದ ಸಂಗತಿಯೇನಲ್ಲ. ಇಸ್ಲಾಮದ ಏಕೇಶ್ವರ ವಾದವು ಬಿರುಗಾಳಿಗೆ ಸಿಕ್ಕು ಹಿಂಸೆ, ರಕ್ತಪಾತ, ಅಧಿಕಾರ ಲಾಲಸೆ, ಭೋಗವಿಲಾಸಗಳಿಗೆ ತುತ್ತಾದಾಗ ಅದರ 'ದೀನ' ಮತ್ತು 'ಈಮಾನ್'ಗಳಿಗೆ ಅವಸಾನದ ಸ್ಥಿತಿಯುಂಟಾಗಿತ್ತು. ಅಂಥ ಕಾಲಕ್ಕೆ ಒಂದು ಧಾರ್ಮಿಕ ಜನಾಂದೋಲನ ಪ್ರಾರಂಭವಾಯಿತು. ಅದಕ್ಕೆ 'ಸಲಮಾನ ಪಾರತೀ ಆಂದೋಲನ' ಎಂದು ಹೆಸರು. ಈ ಆಂದೋಲನದ ಪರಿಣಾಮವಾಗಿ ಮತ್ತೆ ಜೀವ-ಬ್ರಹ್ಮರ ನಡುವಿನ ಕಡಿದ ಕೊಂಡಿ ಬೆಸೆದುಕೊಂಡಿತು. ಅದೇ ಮುಂದೆ ಸೂಫೀ ಪಂಥಕ್ಕೆ ನಾಂದಿಯಾಯಿತು ಎಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ಅದೇನೇ ಇರಲಿ. ಸೂಫೀ ಸಂತರಲ್ಲಿ ಪ್ರತಿಯೊಬ್ಬರೂ ಒಬ್ಬೊಬ್ಬ ವ್ಯಕ್ತಿಯಾಗಿ ಮಾಡಿದ ಕೆಲಸವನ್ನು ಶರಣರು ಅನುಭವಮಂಟಪ ಎಂಬ ಒಂದು ಸಂಘಟನೆಯ ಮೂಲಕ ಮಾಡಲು ಪ್ರಯತ್ನಿಸಿದ್ದರಿಂದ ಬಹುಶಃ ಶರಣರಿಗಿಂತ ಒಬ್ಬ ವ್ಯಕ್ತಿಯಾಗಿ ಸೂಫೀ ಸಂತನು ಜನಮಾನಸದ ಆಳಕ್ಕೆ ಇಳಿದು ಸಂವಾದಿಸಲು ಸಾಧ್ಯವಾಯಿತು ಎಂದು ಹೇಳಬಹುದು.

**ಸೂಫೀ ಸಿದ್ಧಾಂತಗಳು**

ಆಧ್ಯಾತ್ಮಿಕ ಕ್ಷೇತ್ರದಲ್ಲಿ ನಂಬಿಕೆಗಳು, ಪ್ರಮುಖವಾಗಿ ಮೂರು ತತ್ತ್ವಗಳ ವಿವೇಚನೆಯನ್ನು ಆಧರಿಸಿ ರೂಪುಗೊಂಡಿವೆ : ಬ್ರಹ್ಮ, ಜೀವ ಮತ್ತು ಜಗತ್ತು. ಈ ಮೂರು ತತ್ವಗಳ ಸ್ವರೂಪ ಮತ್ತು ಅವುಗಳಲ್ಲಿರುವ ಪರಸ್ಪರ ಸಂಬಂಧಗಳನ್ನು ಕುರಿತ ಚಿಂತನೆಯ ವೈವಿಧ್ಯಗಳೇ ದ್ವೈತ, ಅದ್ವೈತ, ದ್ವೈತಾದ್ವೈತ, ಏಕೇಶ್ವರ ಮುಂತಾದ ವಾದಗಳು.

**ಬ್ರಹ್ಮ** : ಸೂಫೀ ಪಂಥವು ಕುರಾನಿನಲ್ಲಿ ಪ್ರತಿಪಾದಿಸಲ್ಪಟ್ಟ ಪರಮಾತ್ಮನ ಸ್ವರೂಪವನ್ನು - ಏಕೇಶ್ವರವಾದವನ್ನು ತನ್ನದೇ ಆದ ದೃಷ್ಟಿಕೋನದಿಂದ ಸ್ವೀಕರಿಸುತ್ತದೆ. ಪರಮಾತ್ಮನನ್ನು ಬಿಟ್ಟರೆ ಬೇರೆ ಇನ್ನೇನೂ ಇಲ್ಲ. ಪ್ರಪಂಚದಲ್ಲಿ ಕಾಣುವುದೆಲ್ಲ ಪರಮಾತ್ಮನ ವ್ಯಕ್ತ ರೂಪವಾಗಿದೆ, ಪರಮಾತ್ಮನು ಒಬ್ಬನೆ, ಅದ್ವೈತನು, ಮಂಗಲಮಯನು, ಸುಂದರನು, ಸತ್ಯ ಸ್ವರೂಪನೂ ಆಗಿದ್ದಾನೆ. ಇಸ್ಲಾಮವು ಆತನ ಸಗುಣ ಹಾಗೂ ನಿರ್ಗುಣ ಎರಡೂ ಸ್ವರೂಪಗಳನ್ನು ಒಪ್ಪಿದರೆ ಸೂಫೀ ಪಂಥವು ಬರೀ ನಿರ್ಗುಣ ರೂಪವನ್ನು ಮಾತ್ರ ಸ್ವೀಕರಿಸುತ್ತದೆ. ಪರಮಾತ್ಮನು ಅನಾದಿ, ಅಗೋಚರ ಮತ್ತು ಸರ್ವವ್ಯಾಪಕನಾಗಿದ್ದಾನೆ.

**ಜೀವ** : ಜೀವ ಮತ್ತು ಬ್ರಹ್ಮನಲ್ಲಿ ತಾತ್ತ್ವಿಕವಾದ ಭೇದವಿಲ್ಲ. ಬ್ರಹ್ಮನ ಸೂಕ್ಷ್ಮ ಅಂಶವೇ ಜೀವ. ಅಹಂಕಾರ ಮತ್ತು ಮಾಯೆಯ ಭ್ರಮೆಯಿಂದಾಗಿ ಜೀವವು ತನ್ನ ಮೂಲ ಸ್ವರೂಪವನ್ನು ಮರೆತು ಕ್ಲೇಶಕ್ಕೆ ಒಳಗಾಗುತ್ತದೆ. ಪ್ರೇಮ ಮತ್ತು ಭಕ್ತಿಯ ಮೂಲಕ ಅದು ಮುಕ್ತಾವಸ್ಥೆಯನ್ನು ಹೊಂದುತ್ತದೆ.

**ಜಗತ್ತು** : ಈ ಜಗತ್ತು ಅಸತ್ಯವಾಗಿದೆ. ಬ್ರಹ್ಮಸತ್ತೆಯು ಈ ಅಸತ್ಯದ ಕನ್ನಡಿಯಲ್ಲಿ ಪ್ರತಿಬಿಂಬಿತವಾಗುತ್ತದೆ. ಆ ಪ್ರತಿಬಿಂಬವೇ ಜಗತ್ತು. ಈ ಪ್ರತಿಬಿಂಬದಿಂದಾಗಿಯೇ ಜಗತ್ತಿನ ಸತ್ತೆ ಇದೆ. ಅದು ನಿರಪೇಕ್ಷ ಸತ್ತೆಯಲ್ಲ. ಪಾರಮಾರ್ಥಿಕ ದೃಷ್ಟಿಯಿಂದ ಅದು ಅಸತ್ಯವೇ ಸರಿ.

ಈ ರೀತಿಯಾಗಿ ಈ ಸಿದ್ಧಾಂತವು ಅದ್ವೈತಕ್ಕೆ ತೀರ ಹತ್ತಿರವಾಗುತ್ತದೆ. ಈ ಸಿದ್ಧಾಂತಗಳ ನೆಲಗಟ್ಟಿನ ಮೇಲೆ ಸೂಫೀಗಳು ತಮ್ಮ ಸಾಧನಾ ಮಾರ್ಗವನ್ನು ರೂಪಿಸಿಕೊಂಡರು. ಅದೇ 'ತಸವ್ವುಫ' ಸಾಧನೆ. ಮಾನವ ಹೃದಯವು ನೈಸರ್ಗಿಕವಾಗಿ ಒಂದೇ ಬಗೆಯದಾಗಿದ್ದು ಅನಂತ ಕಾಲದಿಂದಲೂ ಪ್ರತ್ಯಕ್ಷವಾಗಿಯೋ ಅಪ್ರತ್ಯಕ್ಷವಾಗಿಯೋ ಆತ್ಮಾವಲೋಕನದಲ್ಲಿ ಚಡಪಡಿಸುತ್ತಿದೆ. ಮುಸ್ಲಿಂ ಸಾಧಕರ ಹೃದಯದಲ್ಲಿಯೂ ಈ ತುಡಿತ ಉಂಟಾಗಿ ಅದು ಸೂಫೀ ಪಂಥದ ರೂಪದಿಂದ ಪ್ರಪಂಚದಲ್ಲಿ ಆವಿರ್ಭವಿಸಿತು.

ಸೂಫೀಗಳಲ್ಲಿ ಒಂದು ವರ್ಗ ಪ್ರೇಮೋಪಾಸನೆಗೆ ಒತ್ತು ಕೊಟ್ಟರೆ ಇನ್ನೊಂದು ವರ್ಗ ಸೌಂದರ್ಯೋಪಾಸನೆಯನ್ನು ಸಮರ್ಥಿಸುತ್ತದೆ. ಸೌಂದರ್ಯೋಪಾಸಕರಲ್ಲಿ ಇಬನ್ ಸಿನಾ ಪ್ರಮುಖರಾಗಿದ್ದರೆ, ಪ್ರೇಮೋಪಾಸಕರಲ್ಲಿ 'ಮನ್ಸೂರ ಹಲ್ಲಾಜ'ರು ಪ್ರಮುಖರಾಗಿದ್ದರು. ಸೌಂದರ್ಯೋಪಾಸಕರಿಗಿಂತ ಪ್ರೇಮೋಪಾಸಕರ ಪ್ರಭಾವ-ಪ್ರಚಾರವೇ ಹೆಚ್ಚು. ಕೆಲವೊಂದು ಸಲ ಈ ಸಂತರು ಪ್ರೇಮ ಮತ್ತು ಸೌಂದರ್ಯ ಎರಡೂ ಬಗೆಯಲ್ಲಿ ನಿರ್ಗುಣ ಬ್ರಹ್ಮನನ್ನು ಉಪಾಸನೆಗೈದಿದ್ದಾರೆ.

**ಸೂಫೀ ಸಾಧನೆ**

ಶೂನ್ಯ ತತ್ತ್ವದಲ್ಲಿ ಶೂನ್ಯವಾದ ನಿಷ್ಕಲಲಿಂಗದಿಂದ ಹೊರಟ ಸಾದಾಖ್ಯಗಳು ಷಡಧ್ವಗಳ ಮೂಲಕ ಅಭಿವ್ಯಕ್ತಗೊಂಡು ಜೀವಸೃಷ್ಟಿಯಾಗುತ್ತದೆ. ಈ ಜೀವವು ಸಾಧನೆಯ ಮೂಲಕ ಹಿಮ್ಮುಖವಾಗಿ ಚರಿಸಿ ಸ್ಥೂಲದಿಂದ ಸೂಕ್ಷ್ಮವನ್ನು, ಸಾಕಾರದಿಂದ ನಿರಾಕಾರವನ್ನು ಅಂದರೆ ಶೂನ್ಯವನ್ನು ಸೇರುತ್ತದೆ. ಸೂಫೀಗಳ ಸಾಧನಾ ಮಾರ್ಗವೂ ಕೂಡ ಇದೇ ಬಗೆಯದಾಗಿದೆ. ಈ ಸಾಧನಾ ಪಥದಲ್ಲಿ ಶರಣರು ಆರು ಸ್ಥಲಗಳನ್ನು ಗುರುತಿಸಿಕೊಂಡಿರುವ ಹಾಗೆ ಸೂಫೀಗಳು ನಾಲ್ಕು ಅಂತಸ್ತುಗಳನ್ನು ಗುರುತಿಸಿದ್ದಾರೆ.

ಅವುಗಳೆಂದರೆ ಶರೀಯತ್, ತರೀಕತ್, ಮಾರಿಫತ್ ಮತ್ತು ಹಕೀಕತ್. ಇವುಗಳನ್ನು ನಾವು ಸುಲಭವಾಗಿ ಷಟ್ಸ್ಥಲಗಳಿಗೆ ಸಮೀಕರಿಸಬಹುದು. ಪ್ರತಿಯೊಂದು ಅಂತಸ್ತಿನಲ್ಲಿಯೂ ಸಾಧಕನು ಅನುಭಾವದ ವಿವಿಧ ಲೋಕಗಳಲ್ಲಿ ವಿಹರಿಸುತ್ತಾನೆ. ನಾಲ್ಕು ಅಂತಸ್ತುಗಳಿಗೆ ಅನುರೂಪವಾದ ಅನುಭಾವ ಸ್ಥಿತಿಯ ಲೋಕಗಳೂ ನಾಲ್ಕು ಇವೆ. ಆಯಾ ಲೋಕದಲ್ಲಿ ಸಾಧಕನ ಸ್ವರೂಪವೂ ಬದಲಾಗುತ್ತಾ ಹೋಗುತ್ತದೆ. ಅದು ಈ ಕೆಳಗಿನಂತಿದೆ :

| | ಅಂತಸ್ತುಗಳು | ಲೋಕ | ಸಾಧಕ |
|---|---|---|---|
| 1. | ಶರೀಯತ್ | ಆಲಮೇ ನಾಸೂತ್ | ಮೋಮೀನ್ |
| 2. | ತರೀಕತ್ | ಆಲಮೇ ಮಲಕೂತ್ | ಸಾಲಿಕ್ |
| 3. | ಮಾರಿಫತ್ | ಆಲಮೇ ಜಬರೂತ್ | ಆರಿಫ |
| 4. | ಹಕೀಕತ್ | ಆಲಮೇ ಲಾಹೂತ್ | ಹಕ್ |

1. ಶರೀಯತ್‌ಅನ್ನು ನಾವು ಭಕ್ತಸ್ಥಲದೊಂದಿಗೆ ಸಮೀಕರಿಸಬಹುದು. ಶರೀಯತ್ ಅಂದರೆ ಕುರಾನ ಮತ್ತು ಕುರಾನಿನ ವ್ಯಾಖ್ಯಾನಗಳಾಗಿರುವ ಹದೀಸಗಳನ್ನು ಅಕ್ಷರಶಃ ನಂಬಿ ಅವುಗಳನ್ನು ಆಚರಣೆಗೆ ತರುವುದು. ಸೂಫೀ ಅಥವಾ ತಸವ್ವುಫ್‌ದ ಶರೀಯತ್‌ಗೂ ಇಸ್ಲಾಮಿನ ಶರೀಯತ್‌ಗೂ ಒಂದು ಸೂಕ್ಷ್ಮವಾದ ಭೇದವಿದೆ. ತಸವ್ವುಫ್ ಎನ್ನುವುದು ಎರಡು ತತ್ತ್ವಗಳನ್ನು ಒಳಗೊಂಡಿದೆ. ಒಂದು ಇಲ್ಮ(ಜ್ಞಾನ) ಇನ್ನೊಂದು ಅಮಲ್(ಕೃತ್ಯ). ಇಸ್ಲಾಮ್‌ನಲ್ಲಿ ಇಲ್ಮದ ನಂತರ ಅಮಲ ಹುಟ್ಟಿಕೊಳ್ಳುತ್ತದೆ. ಅಂದರೆ ಮೊದಲು ನೀನು ಜ್ಞಾನ ಪಡೆದುಕೋ, ಆಮೇಲೆ ಅದನ್ನು ಆಚರಣೆಗೆ ತಂದುಕೋ ಎಂಬುದು ಇದರ ಮತಿತಾರ್ಥ. ಆದರೆ ತಸವ್ವುಫ್‌ನಲ್ಲಿ ಮೊದಲು ಆಚರಣೆಯನ್ನು ಶುದ್ಧಗೊಳಿಸಿಕೋ ಅಂದರೆ ಕೃತ್ಯ ಮಾಡು ಆಮೇಲೆ ಜ್ಞಾನ ಸಂಪಾದನೆಯಾಗುತ್ತದೆ ಎಂದು ಹೇಳಲಾಗುತ್ತದೆ. ಈ ಹಂತದಲ್ಲಿಯೇ ಶರಣರಿಗೂ ಸೂಫೀಗಳಿಗೂ ಹತ್ತಿರದ ಸಂಬಂಧ ಕಂಡುಬರುತ್ತದೆ. ಯಾರೋ ಒಬ್ಬರು ಬೋಧಿಸಿದ ಜ್ಞಾನವನ್ನು ನೀನು ಉರುಹೊಡೆದು ಅದನ್ನು ಆಚರಣೆಗೆ ತರುವ ಬದಲು ನಿನ್ನ ಅನುಭವವನ್ನು ವಿಸ್ತರಿಸಿಕೊಂಡು ಜ್ಞಾನವನ್ನು ಪಡೆ ಎಂಬುದು ತಸವ್ವುಫಿನ ಮತ್ತು ಶರಣರ ಸಿದ್ಧಾಂತವಾಗಿದೆ. ಶರಣರ ಕಾಯಕ ಮತ್ತು ದಾಸೋಹ ತತ್ತ್ವಗಳು ಈ ಸಿದ್ಧಾಂತದಲ್ಲಿಯೇ ಅಳಗೊಂಡಿವೆ. ಇದುವೇ 'ಆಲಮೇ ನಾಸೂತ' ಅಂದರೆ ಮರ್ತ್ಯಲೋಕದ ಸ್ಥಿತಿ.

2. ಸೂಫೀಗಳು ತರೀಕತನ್ನು ಭಕ್ತಿಯ ಸೋಪಾನವೆನ್ನುತ್ತಾರೆ. ತರೀಕತ್‌ನಲ್ಲಿ ಸಾಧಕನು ಬಾಹ್ಯ ಕ್ರಿಯೆಗಳಿಂದ ಮುಕ್ತನಾಗಿ ಶುದ್ಧ ಮನಸ್ಸಿನಿಂದ ಕೇವಲ ಪರಮಾತ್ಮನ ಧ್ಯಾನದಲ್ಲಿಯೇ ಮಗ್ನನಾಗಿರುತ್ತಾನೆ. ಇಸ್ಲಾಂ ಧರ್ಮವು ಶರೀಯತ್ ಅಂತಸ್ತನ್ನು ದಾಟಿ ಮುಂದೆ ಸಾಗಲು ಅನುಮತಿಸುವುದಿಲ್ಲ, ಆದರೆ ಸೂಫೀ ಪಂಥವು ಸಾಧನಾ ಮಾರ್ಗದಲ್ಲಿ ಶರೀಯತನ್ನೂ ಮೀರಿ ಮುಂದೆ ಸಾಗುತ್ತದೆ. ಇಸ್ಲಾಂ ಸಂಪ್ರದಾಯವು ಸೈದ್ಧಾಂತಿಕವಾಗಿ ಒಪ್ಪಿಕೊಂಡರೂ ಇವುಗಳ ಕುರಿತು ಯೋಚಿಸುವುದನ್ನು ಕೂಡ ನಿಷೇಧಿಸುತ್ತದೆ. ಒಬ್ಬ ವಿದ್ವಾಂಸರ ಮಾತಿನಲ್ಲಿ ಹೇಳುವುದಾದರೆ 'ತಲೆ ಬಾಗುವುದೇ ಶರೀಯತ್ ಹಾಗೂ ಮನಸೋಲುವುದೇ (ದಿಲ್‌ಲಗಾನಾ) ತರೀಕತ್' ಆಗಿದೆ. ನಿಜವಾಗಿ ಹೇಳಬೇಕೆಂದರೆ ತರೀಕತ್‌ದಿಂದಲೇ ಸೂಫೀ ಸಾಧನೆಯು ಪ್ರಾರಂಭವಾಗುತ್ತದೆ. ಈ ಅಂತಸ್ತಿನಲ್ಲಿ ಸಾಧಕನು ದೈಹಿಕ ತಪಸ್ಸನ್ನು ಪೂರೈಸಿಕೊಂಡು ಗುರುವಿನ ಮಾರ್ಗದರ್ಶನದಲ್ಲಿ ಗುಹ್ಯ ಸಾಧನೆಯಲ್ಲಿ ತೊಡಗುತ್ತಾನೆ. ಗುರುವು ತನ್ನ ಶಿಷ್ಯನ ಎಲ್ಲ ದೌರ್ಬಲ್ಯಗಳನ್ನು ನಿವಾರಿಸಿ ಸಾಧನಾ ಪಥದಲ್ಲಿ ಮುನ್ನಡೆಸುತ್ತಾನೆ. 'ಇಶ್ಕ-ಏ-ಮಜಾಜಿ'ದಿಂದ 'ಇಶ್ಕ-ಏ-ಹಕೀಕಿ'ಯ ಕಡೆಗೆ, ಅಂದರೆ ಪಾರ್ಥಿವ ಪ್ರೇಮದಿಂದ ಆಧ್ಯಾತ್ಮಿಕ ಪ್ರೇಮದ ಕಡೆಗೆ ಜೀವಾತ್ಮನು ತನ್ನ ಯಾತ್ರೆಯನ್ನು ಆರಂಭಿಸುತ್ತಾನೆ. ಈ ಅಂತಸ್ತಿನಲ್ಲಿ ಸಾಧಕನು 'ಆಲಮೇ ಮಲಕೂತ್' ಅಂದರೆ ದೇವದೂತರ ಗುಣವನ್ನು ಹೊಂದುವ ಲೋಕವನ್ನು ಪ್ರವೇಶಿಸುತ್ತಾನೆ.

3. ಮಾರಿಫತ್‌ಅನ್ನು ಗುಪ್ತವಿದ್ಯಾಸ್ತರವೆಂತಲೂ ಕರೆಯುತ್ತಾರೆ. ಇಲ್ಲಿ ಸಾಧಕನು ಈ ಸೃಷ್ಟಿಯ ಚರಾಚರ ವಸ್ತುಗಳೆಲ್ಲವನ್ನೂ ಪ್ರೇಮಾನಂದದ ರೂಪದಲ್ಲಿ ಕಾಣುತ್ತಾನೆ. ಎಲ್ಲವನ್ನೂ, ಎಲ್ಲರನ್ನೂ ಭಗವಂತನೆಂದೇ ತಿಳಿದು ತನ್ನ ಶಾಂತಿಪೂರ್ವಕವಾದ ಬದುಕಿನಲ್ಲಿ ನಿರತನಾಗುತ್ತಾನೆ. ಮಾರಿಫತ್ ಎಂಬ ಅಂತಸ್ತಿಗೆ ತಲುಪಿದಾಗ ಸಾಧಕನು 'ಆಲಮೇ ಜಬರೂತ್' ಅಂದರೆ ನಿರ್ವಿಘ್ನವಾದ ಲೋಕವನ್ನು ಪ್ರವೇಶಿಸುತ್ತಾನೆ. ಇಲ್ಲಿ ಪ್ರವಾದಿ ಮತ್ತು ಸಾಧಕನ ನಡುವೆ ಯಾವುದೇ ಮುಚ್ಚುಮರೆ ಇರುವುದಿಲ್ಲ, ಆತನಿಗೆ ಆತ್ಮಶಕ್ತಿಯ ಮೂಲಕ ಗುಹ್ಯಾತಿಗುಹ್ಯ ಸಂಗತಿಗಳೂ ಕೂಡ ಅನುಭವಕ್ಕೆ ಬರಹತ್ತುತ್ತವೆ. ಜ್ಞಾನೋದಯವಾಗಿ ಆತನು ಎತ್ತೆತ್ತಲೂ ಪರಮಾತ್ಮನನ್ನೇ ಕಾಣುತ್ತಾನೆ.

4. ಹಕೀಕತ್ ಎಂಬುದು ಐಕ್ಯಾವಸ್ಥೆಯ ಕೊನೆಯ ಹಂತವಾಗಿದೆ. ಹಕೀಕತ್ ಶಬ್ದದ ಅರ್ಥ ವಾಸ್ತವತೆ. ಇಲ್ಲಿ ಪಾರಿಭಾಷಿಕ ಅರ್ಥ, 'ಪರಮ ಸತ್ಯ'ದ ಸಾಕ್ಷಾತ್ಕಾರ ಎಂದು. ಇದು ಜೀವಾತ್ಮನು ಪರಮಾತ್ಮನಲ್ಲಿ ಬೆರೆತು ತನ್ನ ಜೀವಾತ್ಮ ಸ್ವರೂಪವನ್ನು ನಾಶ(ಫನಾ)ಗೊಳಿಸಿಕೊಂಡು ಪರಮಾತ್ಮ ಸ್ವರೂಪವನ್ನು ಉಳಿಸಿ(ಬಕಾ)ಕೊಳ್ಳುತ್ತಾನೆ. ಈ ಸ್ಥಿತಿಯನ್ನು ಸೂಫೀಗಳು 'ವಾಸಿಲೇ ರಬ್' ಎಂದು ಕರೆಯುತ್ತಾರೆ. ಶರಣರ ಪರಿಭಾಷೆಯಲ್ಲಿ ಹೀಗೆ ಹೇಳಬಹುದು: ಜೀವಾತ್ಮನ ಪಾರ್ಥಿವ ಸ್ವರೂಪವನ್ನು 'ಶೂನ್ಯ'ಗೊಳಿಸಿ (ಫನಾ ಮಾಡಿ) ಪರಮಾತ್ಮನ ಸ್ವರೂಪವನ್ನು ಉಳಿಸಿಕೊಳ್ಳುವುದು (ಬಕಾ ಮಾಡುವುದು) ಅರ್ಥಾತ್ 'ಸಂಪಾದಿ'ಸುವುದು. ಇದುವೇ 'ಶೂನ್ಯ-ಸಂಪಾದನೆ' ಮತ್ತು ಲಿಂಗಾಂಗ ಸಾಮರಸ್ಯ (ವಾಸಿಲೇ ರಬ್) ಎಂದಾಗುತ್ತದೆ. ಹಕೀಕತ್ ಹಂತದಲ್ಲಿ ಸಾಧಕನು ಭಗವಂತನನ್ನು ಸಾಕ್ಷಾತ್ಕರಿಸಿಕೊಂಡು 'ಆತನೇ ನಾನು, ನಾನೇ ಆತನು' ಎಂಬ ಅನಲ್‌ಹಕ್ ಸ್ಥಿತಿ ತಲುಪುತ್ತಾನೆ. ಹಕೀಕತ್ ಎಂದರೆ ಶಾಶ್ವತವಾದ ಅಂತಿಮ ಸತ್ಯ. ಶರೀಯತ್‌ದಿಂದ ಹಕೀಕತ್‌ವರೆಗಿನ ಸೂಫೀಗಳ ಈ ವಿಕಾಸ ಯಾತ್ರೆಯು ಶರಣರ ಭಕ್ತಸ್ಥಲದಿಂದ ಐಕಸ್ಥಲದವರೆಗಿನ ವಿಕಾಸ ಯಾತ್ರೆಗೆ ಸಮವಾಗಿದೆ. ಶರಣರ ಐಕ್ಯಸ್ಥಿತಿಯು ಸತ್ತಮೇಲೆ ಸಿಗುವಂಥ ಸ್ಥಿತಿಯಲ್ಲ, ಬದುಕಿರುವಾಗಲೇ ಅದನ್ನು ಸಾಧನೆಯ ಮೂಲಕ ಅನುಭವಿಸಬಹುದಾದ ಒಂದು ಆಧ್ಯಾತ್ಮಿಕ ಚರಮ ಸ್ಥಿತಿ.

**ಸೂಫೀಯ ನಂಬಿಕೆಗಳು**

ಡಾ॥ ಬುಕೆಟ್ ಸೂಫೀಗಳ ಈ ಕೆಳಕಂಡ ನಂಬಿಕೆಗಳನ್ನು ಪಟ್ಟಿ ಮಾಡಿದ್ದಾರೆ:

1. ಈ ಸೃಷ್ಟಿಯ ಸಕಲ ಚರಾಚರ ವಸ್ತುಗಳಲ್ಲಿ ಪರಮಾತ್ಮನ ಅಸ್ತಿತ್ವವಿದೆ ಮತ್ತು ಎಲ್ಲ ವಸ್ತುಗಳೂ ಪರಮಾತ್ಮನಲ್ಲಿಯೇ ಇವೆ.

2. ವಿಶ್ವದ ಎಲ್ಲ ವಸ್ತುಗಳೂ ಪರಮಾತ್ಮನಿಂದ ಹೊರಡುತ್ತವೆ. ಆತನಲ್ಲದೆ ಯಾರೂ ಯಾವ ವಸ್ತುವನ್ನೂ ಸೃಷ್ಟಿಸಲಾರರು.

3. ಎಲ್ಲ ಮತ-ಧರ್ಮಗಳೂ ವ್ಯರ್ಥ. ಆದರೆ ಅವುಗಳಿಂದ ಒಂದೇ ಒಂದು ಪ್ರಯೋಜನವೆಂದರೆ ಎಲ್ಲ ಧರ್ಮಗಳೂ ಒಂದೇ ಸತ್ಯದ ಕಡೆಗೆ ತಮ್ಮ ಇಂಗಿತವನ್ನು ವ್ಯಕ್ತಪಡಿಸುತ್ತವೆ. ಇವುಗಳಲ್ಲಿ ಎಲ್ಲಕ್ಕಿಂತ ಉತ್ತಮ ಧರ್ಮವೆಂದರೆ ಇಸ್ಲಾಂ ಆಗಿದೆ. ಅದರಲ್ಲಿ ಸೂಫೀ ದರ್ಶನವು ಉನ್ನತ ದರ್ಶನವಾಗಿದೆ.

4. ಪುಣ್ಯ ಮತ್ತು ಪಾಪಗಳಲ್ಲಿ ಯಾವುದೇ ಭೇದವಿಲ್ಲ, ಏಕೆಂದರೆ ಎರಡರ ಸೃಷ್ಟಿಯೂ ಭಗವಂತನಿಂದಲೇ ಆಗಿದೆ.

5. ಮಾನವನ ಸಂಕಲ್ಪಗಳಿಗೆ ಪ್ರೇರಣೆಯನ್ನು ಕೊಡುವವನು ಅಲ್ಲಾಹನೇ ಆಗಿದ್ದಾನೆ. ಆತನಿಲ್ಲದೆ ಯಾವ ಸಂಕಲ್ಪವೂ ಆಗುವುದಿಲ್ಲ, ಮನುಷ್ಯನು ತನ್ನ ಕರ್ಮಗಳ ಅಧೀನನಲ್ಲ.

6. ಆತ್ಮವು ಶರೀರವೆಂಬ ಪಂಜರದಲ್ಲಿ ಕೈದಿಯಾಗಿದೆ. ಪಂಜರಕ್ಕಿಂತ ಮೊದಲೇ ಪಕ್ಷಿಯ ಸೃಷ್ಟಿಯಾಗಿದೆ. ಆದ್ದರಿಂದ ಪಂಜರದ ನಾಶವಾಗದ ಹೊರತು ಪಕ್ಷಿ (ಆತ್ಮ) ಸ್ವತಂತ್ರವಾಗುವುದಿಲ್ಲ, ಸಾವು ಅನಿವಾರ್ಯ ಮತ್ತು ಕಾಮ್ಯವಾಗಿದೆ. ಸಾವಿನ ನಂತರವೇ ಆತ್ಮವು ಪರಮಾತ್ಮನಲ್ಲಿ ವಿಲೀನವಾಗಲು ಸಾಧ್ಯ.

7. ಸೂಫೀಗಳ ಮುಖ್ಯ ಕರ್ತವ್ಯವೆಂದರೆ ಧ್ಯಾನ ಮತ್ತು ಸಮಾಧಿ ಹಾಗೂ ಪ್ರಾರ್ಥನೆ ಮತ್ತು ನಾಮಸ್ಮರಣೆ.

ಈ ಪದ್ಧತಿಗಳಿಂದ ಮಾತ್ರ ಅಲ್ಲಾಹನಲ್ಲಿ ವಿಲೀನವಾಗಲು ಸಾಧ್ಯ.

**ಸಾಮಾಜಿಕ ಕಳಕಳಿ**

ಸೂಫೀ ಪಂಥವು ಬದುಕಿನಲ್ಲಿ ಪಲಾಯನವಾದವನ್ನು ಒಪ್ಪುವುದಿಲ್ಲ. ಶರಣರ ಹಾಗೆ ಇವರು ಕೂಡ ಪ್ರಪಂಚದಲ್ಲಿ ಬಾಳಿ ಬದುಕಿ, ಸಾಮಾಜಿಕ ಹೊಣೆಗಳನ್ನು ನಿರ್ವಹಿಸಿ ಆಧ್ಯಾತ್ಮವನ್ನು ಸಾಧಿಸಬೇಕು ಎಂದು ಹೇಳುತ್ತಾರೆ. ಶರಣರ ಹಾಗೆ ಇಲ್ಲಿಯೂ ಸನ್ಯಾಸವು ಅನಿವಾರ್ಯವಲ್ಲ. ಶರಣರಲ್ಲಿಯೂ ಸೂಫೀಗಳಲ್ಲಿಯೂ ಕಾಯಕ ತತ್ತ್ವವನ್ನು ಚಾಚೂ ತಪ್ಪದೇ ಪಾಲಿಸಲಾಗುತ್ತದೆ. ಕಾಯಕ ಮಾಡದೆ ಮನುಷ್ಯನಿಗೆ ಉಣ್ಣುವ ಹಕ್ಕಿಲ್ಲ. ಕಾಯಕದಿಂದ ಬಂದ ಅಂದಂದಿನ ಆದಾಯವನ್ನು ಅಂದೇ ಖರ್ಚು ಮಾಡಬೇಕು ಎಂಬ ಅಂಶವನ್ನು ಶರಣರೂ ಒಪ್ಪುತ್ತಾರೆ ಸೂಫೀಗಳೂ ಒಪ್ಪುತ್ತಾರೆ, ಶರಣರು ದಾಸೋಹದ ಮೂಲಕ ಸಾಮಾಜಿಕ ಆದಾಯವನ್ನು ಸಮತೋಲನವಾಗಿ ಕಾಪಾಡಿದರೆ ಸೂಫೀಗಳು 'ಜಕಾತ' ಎಂಬ ಹೆಸರಿನಿಂದ ಈ ಕಾರ್ಯ ಮಾಡುತ್ತಾರೆ. ಪದಗಳು ಭಿನ್ನವಾಗಿ ಕಂಡರೂ ಎರಡರ ಉದ್ದೇಶ ಒಂದೇ, ಅರ್ಥ ಒಂದೇ.

ಸೂಫೀ ಪಂಥದ ಅಕ್ಕಮಹಾದೇವಿ ಎಂದೇ ಹೇಳಬಹುದಾದಂಥ ರಾಬಿಯಾ ಬಸರಿಯು ಒಮ್ಮೆ ಅನೇಕ ದಿನಗಳ ಹಸಿವಿನಿಂದ ಕಂಗಾಲಾಗಿದ್ದಾಗ ಎಲ್ಲಿಂದಲೋ ಒಂದು ತುತ್ತು ಕೂಳು ದೊರೆಯಿತು. ಆಕೆ ಅದನ್ನು ತಿನ್ನಬೇಕು ಎಂದು ತುತ್ತನ್ನು ಬಾಯಿಗಿಡುವಷ್ಟರಲ್ಲಿ ಇನ್ನೊಬ್ಬ ಯಾವನೋ ಹಸಿವೆಯಿಂದ ನರಳುತ್ತಿರುವುದು ಕೇಳಿಸುತ್ತದೆ. ತನ್ನ ಆತ್ಮಸ್ವರೂಪಿಯಾದ ಇನ್ನೊಂದು ಆತ್ಮವು ಆ ಬೇರೊಂದು ದೇಹದಲ್ಲಿ

ಹಸಿವೆಯಿಂದ ಚಡಪಡಿಸುತ್ತಿರುವಾಗ ತಾನು ಹೇಗೆ ಆಹಾರ ಸೇವನೆ ಮಾಡುವುದು ? ರಾಬಿಯಾ ಬಸರಿಯು ತನಗೆ ದೊರೆತ ಕೂಳನ್ನು ಆ ಹಸಿದವನಿಗೆ ನೀಡುತ್ತಾಳೆ. ಆತನು ಕೂಳನ್ನು ಬಾಯಿಗೆ ಇಡಬೇಕು ಅನ್ನುವಷ್ಟರಲ್ಲಿ ಇನ್ನೊಬ್ಬನ ಹಸಿದ ಕೂಗು ಕೇಳಿಸುತ್ತದೆ. ಆತನು ತಾನು ಉಣ್ಣದೆ ಆ ಕೂಳನ್ನು ಇನ್ನೊಬ್ಬನಿಗೆ ನೀಡುತ್ತಾನೆ. ಈ ರೀತಿಯಾಗಿ ತಮಗೆ ಒದಗಿದ ದೈಹಿಕ ಕ್ಲೇಶಗಳನ್ನು ಸೂಫಿಗಳು ದೈವೀ ವರಪ್ರಸಾದವೆಂದು ಭಾವಿಸುತ್ತಿದ್ದರು. ಇನ್ನೊಬ್ಬರ ನೋವಿಗೆ ಮಿಡಿಯುತ್ತಿದ್ದರು.

ಶರಣರಾಗಲೀ ಸೂಫಿಗಳಾಗಲಿ ಎರವಲು ತಂದ ಆಧ್ಯಾತ್ಮಿಕ ವಿಚಾರಗಳನ್ನು ನಂಬಿ ಗರ್ವಪಟ್ಟವರಲ್ಲ, ಏನೇ ವಿಚಾರಗಳಿದ್ದರೂ ಅವು ಅವರ ಆತ್ಮಾನುಭವದ ವಿಚಾರಗಳಾಗಿದ್ದವು. ಈ ಹಂತದಲ್ಲಿಯೇ ಸೂಫಿಗಳು ಇಸ್ಲಾಂನಿಂದ ಭಿನ್ನರಾಗಿ, ಶರಣರು ಭಾರತದ ಇತರ ದಾರ್ಶನಿಕರಿಂದ ಭಿನ್ನರಾಗಿ ನಿಲ್ಲುತ್ತಾರೆ.




ಶರಣರ ವಚನಗಳಲ್ಲಿ ಅನೇಕ ಕಡೆ ನರಕದ ವಿಚಾರ ಬರುತ್ತದೆ. ದುರ್ಮಾರ್ಗಿಯನ್ನು ಪರಮಾತ್ಮನು ನಾಯಕ ನರಕ, ಕುಂಭೀಪಾಕ ನರಕ ಮುಂತಾದುವುಗಳಲ್ಲಿ ಹಾಕುತ್ತಾನೆ ಎಂದು ಅನೇಕ ವಚನಕಾರರು ನುಡಿದಿದ್ದಾರೆ. ಆದರೆ ಅದೇ ವಚನಕಾರರು ಸ್ವರ್ಗ - ನರಕಗಳು ಎಂಬುವು ಬೇರೆ ಎಲ್ಲಿಯೂ ಇಲ್ಲ ಎಂದು ಕೂಡ ಹೇಳಿದ್ದಾರೆ. ಯಾಕೆಂದರೆ ನರಕದ ಭೀತಿಯನ್ನು ತೋರಿಸಿ ಸ್ವರ್ಗದ ಲಾಲಸೆಯನ್ನು ಅಂಟಿಸಿ ಭಕ್ತಿಯ ಕಡೆಗೆ ಮನಸ್ಸನ್ನು ಬಲವಂತನಾಗಿ ಎಳೆಯುವುದು ಅದೆಂಥ ಭಕ್ತಿ? ಶರಣರ ದೃಷ್ಟಿಕೋನವನ್ನು ನಾವು ಸೂಕ್ಷ್ಮವಾಗಿ ಪರಿಶೀಲಿಸಿದಾಗ ಈ ಅಂಶವು ಗಮನಕ್ಕೆ ಬಾರದೆ ಇರದು. ಸೂಫಿಗಳ ದೃಷ್ಟಿಕೋನವೂ ಇದೇ ಆಗಿದೆ. ಸ್ವರ್ಗ-ನರಕಗಳ ಯಾವ ಆಮಿಷ, ಭಯವೂ ಇಲ್ಲದೆ ನಮ್ಮ ಬದುಕನ್ನು ಸದಾಚಾರದಿಂದ, ಸಕಲ ಜೀವಾತ್ಮರಲ್ಲಿ ಪರಮ ತತ್ತ್ವವನ್ನು ಕಾಣುತ್ತ ಸಾಧನೆಯಲ್ಲಿ ಮುಂದುವರಿದರೆ ಅದೇ ಕೈವಲ್ಯಕ್ಕೆ ದಾರಿ, ಫನಾ ಆಗಲು ಸುಗಮ ಮಾರ್ಗ. ಇಸ್ಲಾಮನ್ನು ಮೊದಲು ಮಾಡಿಕೊಂಡು ಎಲ್ಲ ಸಂಪ್ರದಾಯಗಳು, ''ಮೊದಲು ನಂಬು ಆಮೇಲೆ ಆ ನಂಬಿಕೆಯನ್ನು ನಿನ್ನ ಆಚರಣೆಯ ಮೂಲಕ ಅನುಭವಕ್ಕೆ ತಂದುಕೋ'' ಎಂದು ಹೇಳುತ್ತವೆ. ಆದರೆ ಸೂಫಿಗಳು ಮತ್ತು ಶರಣರು ''ನಿನ್ನ ಅನುಭಾವಕ್ಕೆ ಬಾರದುದನ್ನು ನಂಬಬೇಡ; ನಿನ್ನ ಅನುಭಾವದಿಂದ ನಿನ್ನ ನಂಬಿಕೆಯನ್ನು ನೀನೇ ಕಂಡುಕೋ'' ಎಂದು ಸಾಮಾಜಿಕ ಬದುಕಿನಲ್ಲಿ ಮಾತ್ರವಲ್ಲ ಆಧ್ಯಾತ್ಮಿಕ ಸಾಧನೆಯ ಕ್ಷೇತ್ರದಲ್ಲಿಯೂ ಕೂಡ ಪೂರ್ಣ ಸ್ವಾತಂತ್ರ್ಯವನ್ನು ನೀಡುತ್ತಾರೆ.

**ಸತಿ-ಪತಿ ಭಾವ**

ಮಹಿಳೆ ವಿಮೋಚನೆಯಲ್ಲಿ ಶರಣರು ಒಂದು ವಿಕ್ರಮವನ್ನೇ ಸಾಧಿಸಿದರು ಎಂದು ಹೇಳಬೇಕು. ತುಲಸೀದಾಸರಂಥ ಸಮನ್ವಯವಾದೀ ಭಕ್ತಾಗ್ರಣಿಗಳು, 'ಢೋಲ ಗಂವಾರ ಶೂದ್ರ ಪಶು ನಾರೀ, ಯೇ ಸಬ ತಾಡನ ಕೇ ಅಧಿಕಾರೀ' ಎಂದು ಪುರುಷಸೂಕ್ತದ ಮಾತನ್ನು ಹೇಳುತ್ತಾರೆ. ಅಂದರೆ ತಮಟೆ, ಪೆದ್ದ, ಶೂದ್ರ, ಪಶು ಮತ್ತು ನಾರೀ ಇವರೆಲ್ಲ ಒದೆತ ತಿನ್ನುವ ಹಕ್ಕುಳ್ಳವರು (ಅರ್ಥಾತ್ ಇವರನ್ನೆಲ್ಲ ಒದೆಯುತ್ತಲೇ ಇರಬೇಕು) ಎಂದು ಅರ್ಥ. ಈ ರೀತಿಯಾಗಿ ಹೆಣ್ಣನ್ನು ಶೂದ್ರರ ಜಾತಿಗೆ, ದನಗಳ ಜಾತಿಗೆ ಸೇರಿಸಿರುವಾಗ ಶರಣರು 'ಹೆಣ್ಣು ಪ್ರತ್ಯಕ್ಷ ಕಪಿಲಸಿದ್ಧ ಮಲ್ಲಿಕಾರ್ಜುನ' ಎಂದು ಗೌರವಿಸಿದರು. ಆ ಹೆಣ್ಣು ಗೌರವದ ವಸ್ತುವಾದಳೇ ಹೊರತು ಆರಾಧ್ಯದ ವಸ್ತುವಾಗಲಿಲ್ಲ, ಇದಕ್ಕೆ ಒಂದು ಬಲವಾದ ಕಾರಣವಿದೆ. ಭಾರತೀಯ ಉಪಾಸನೆಯ ಪರಂಪರೆಯಲ್ಲಿ ಉಪಾಸ್ಯವಾದ ಪರಮತತ್ತ್ವವನ್ನು ಯಾವಾಗಲೂ ಪುರುಷರೂಪವಾಗಿಯೂ ಮತ್ತು ಉಪಾಸಕನಾದ ಸಾಧಕನನ್ನು ಸ್ತ್ರೀರೂಪವಾಗಿಯೂ ಕಾಣಲಾಗುತ್ತದೆ. ಹೀಗಾಗಿ ಹೆಣ್ಣಾಗಿರಲಿ, ಗಂಡಾಗಿರಲಿ, ಸಾಧಕರಾದವರು ತಾವು ಹೆಣ್ಣು ಎಂದೇ ಅರ್ಥ. ಅದೇ ಭಾವನೆ ಶರಣರಲ್ಲಿಯೂ ಬೆಳೆದುಬಂದಿತು. ವಚನಕಾರ್ತಿಯರಂತೂ ಸರಿಯೇ ಸರಿ, ಆದರೆ ಗಜೇಶ ಮಸಣಯ್ಯ, ಘಟ್ಟಿವಾಳಯ್ಯ ಇವರಲ್ಲಿಯೂ ಕೂಡ ಈ ಸತೀ ಭಾವವನ್ನು ನಾವು ಕಾಣುತ್ತೇವೆ. ಏಕಾಂತಿಕವೂ, ಗುಹ್ಯಾತಿಗುಹ್ಯವೂ, ವ್ಯಕ್ತಿಸಾಪೇಕ್ಷವೂ ಆದ ರತಿ ಭಾವದಂತೆ ಆಧ್ಯಾತ್ಮಿಕ ಅನು ಭಾವವೂ ಕೂಡ ಏಕಾಂತಿಕವಾಗಿದೆ, ವ್ಯಕ್ತಿಸಾಪೇಕ್ಷವಾಗಿದೆ. ಆದ್ದರಿಂದಲೇ ಲಿಂಗಾಂಗ ಸಾಮರಸ್ಯವನ್ನು ಶರಣರು 'ಶರಣ ಸತಿ, ಲಿಂಗ ಪತಿ' ಎಂದು ಕರೆದರು.

ಶರಣರ ಈ ಲಿಂಗಾಂಗ ಸಾಮರಸ್ಯವನ್ನೇ ಸೂಫಿಗಳು 'ವಾಸಿಲೇ ರಬ್' ಎಂದು ಕರೆದರು. 'ರಬ್' ಎಂದರೆ ಪರಮಾತ್ಮ. ವಾಸಿಲ್ > 'ವಿಸಾಲ' ಅಂದರೆ ಕೂಡುವಿಕೆ, ಸೇರುವಿಕೆ ಎಂದು ಅರ್ಥ. ಭಾರತೀಯ ಭಕ್ತಿ ಪರಂಪರೆ ಮತ್ತು ಸೂಫಿ ಪಂಥಗಳನ್ನು ಉಪಾಸನೆಯ ದೃಷ್ಟಿಯಿಂದ ಹೋಲಿಸಿ ನೋಡಿದಾಗ ಒಂದು ಪ್ರಮುಖವಾದ ವ್ಯತ್ಯಾಸ ಕಂಡುಬರುತ್ತದೆ. ಭಾರತೀಯ ಪರಂಪರೆಯಲ್ಲಿ ಉಪಾಸಕನು ಹೆಣ್ಣು ಹಾಗೂ ಉಪಾಸ್ಯನು ಗಂಡು. ಆದರೆ ಸೂಫಿ ಪಂಥದಲ್ಲಿ ಇದಕ್ಕೆ ವಿಲೋಮವಾಗಿ ಉಪಾಸಕನು ಗಂಡು ಮತ್ತು ಉಪಾಸ್ಯನು ಹೆಣ್ಣು, ಸೂಫಿಗಳ ಈ ದೃಷ್ಟಿಕೋನಕ್ಕೆ ನಾವು ಸುಲಭವಾಗಿ ಕಾರಣಗಳನ್ನು ಗುರುತಿಸಬಹುದು.

ಇಸ್ಲಾಮವು ಪರಮಾತ್ಮನನ್ನು 'ನೂರ' ಅಂದರೆ ಜ್ಯೋತಿಸ್ವರೂಪವಾಗಿ ಕಾಣುತ್ತದೆ. ಈ ಜ್ಯೋತಿಸ್ವರೂಪನಾದ ಪರಮಾತ್ಮನನ್ನು ಸೂಫಿಗಳು ಸೌಂದರ್ಯ ಸ್ವರೂಪಿಯಾಗಿಯೂ, ಪ್ರೇಮ ಸ್ವರೂಪಿಯಾಗಿಯೂ ಕಂಡರು. ಸೌಂದರ್ಯ ಮತ್ತು ಪ್ರೇಮಗಳು ಹೆಣ್ಣಿನಲ್ಲಿ ಸ್ಥಾಯಿಯಾಗಿ ನೆಲೆಗೊಂಡಿರುವಷ್ಟು ಗಂಡಿನಲ್ಲಿ ನೆಲೆಗೊಂಡಿರುವುದಿಲ್ಲ. ಹೀಗಾಗಿ ಸೂಫಿಗಳು ಹೆಣ್ಣನ್ನು ಪ್ರೇಮದ ಪುತ್ಥಳಿಯನ್ನಾಗಿ ಕಂಡು ಆಕೆಯಲ್ಲಿ ಪರಮಾತ್ಮನ ಸ್ವರೂಪವನ್ನು ಆರೋಪಿಸಿರುತ್ತಾರೆ. ಸೂಫಿ ಪಂಥವು ಹುಟ್ಟಿ ಬೆಳೆದ ನಾಡಿನಲ್ಲಿ ಹೆಣ್ಣು ಮನೆಯ ನಾಲ್ಕು ಗೋಡೆಗಳ ನಡುವೆ ವಾಸಿಸುತ್ತಿದ್ದಳು. ಆಕೆಯ ಮುಖದರ್ಶನವಾಗುತ್ತಿದ್ದುದು ಬಹು ಅಪರೂಪ. ನಮ್ಮಲ್ಲಿಯ ವಿರಹಿಣಿಯಾದ ಹೆಣ್ಣು ತನ್ನ ಪ್ರಿಯತಮನಿಗಾಗಿ ಚಡಪಡಿಸುವಂತೆ ಅಲ್ಲಿ ಗಂಡು ತನ್ನ ಪ್ರಿಯತಮೆಯ ಒಂದು ದರ್ಶನಕ್ಕಾಗಿ, ಏಕಾಂತದ ಮಿಲನಕ್ಕಾಗಿ ಚಡಪಡಿಸುತ್ತಿದ್ದ. ಆಕೆಯನ್ನು ಕಾಣಲು, ಕೂಡಲು ಆತನಿಗೆ ಅನೇಕ ವಿಘ್ನಬಾಧೆಗಳನ್ನು ಎದುರಿಸಬೇಕಾಗುತ್ತಿತ್ತು. ಹೀಗಾಗಿ ಹೆಣ್ಣನ್ನೇ ಆತ ಪರಮಾತ್ಮನ ಪ್ರತೀಕವನ್ನಾಗಿ ಮಾಡಿಕೊಂಡ. ಉಪಾಸಕನಾದವನು ಗಂಡು ಮತ್ತು ಉಪಾಸ್ಯ ವಸ್ತುವು ಹೆಣ್ಣು ಎಂಬ ಕಲ್ಪನೆ ಬೆಳೆದುಬಂತು. ಇದೇ ರೂಪಕವನ್ನು ನಾವು ಸೂಫಿ ಕಾವ್ಯಗಳಲ್ಲಿ ಕಾಣುತ್ತೇವೆ.

**ಉಪಸಂಹಾರ**

ಸೂಫಿ ಕವಿಗಳು ಭಾರತದ ಜಾನಪದರಲ್ಲಿ ಮನೆಮಾಡಿಕೊಂಡಿದ್ದ ಕತೆಗಳನ್ನೇ ಬಳಸಿಕೊಂಡು ಅನೇಕ ಪ್ರೇಮಾಖ್ಯಾನಕ ಕಾವ್ಯಗಳನ್ನು ರಚಿಸಿದ್ದಾರೆ. ಇವರು ಭಾರತೀಯ ಸಾಹಿತ್ಯದಲ್ಲಿ ಒಂದು ಹೊಸ ಕಾವ್ಯ ಪರಂಪರೆಯನ್ನು ಪ್ರಾರಂಭಿಸಿದರು. ಮುಸ್ಲಿಮ ಆಕ್ರಮಣಕಾರಿಗಳು ಮತ್ತು ಧರ್ಮಾಂಧ ಶಾಸಕರುಗಳಿಗಿಂತ ಸಮರ್ಥವಾಗಿ ಸೂಫಿ ಸಂತರು ಭಾರತದಲ್ಲಿ ಇಸ್ಲಾಮ ಧರ್ಮವನ್ನು ಪ್ರಚುರಪಡಿಸಿದರು. ಆದರೆ ಧರ್ಮ ಪ್ರಚಾರ ಇವರ ಮೂಲ ಗುರಿಯಾಗಿರಲಿಲ್ಲ, ಇವರ ವ್ಯಕ್ತಿತ್ವ, ಇವರ ಸನ್ನಡತೆ, ಇವರ ಆದರ್ಶಗಳಿಗೆ ಮನಸೋತು ಭಾರತೀಯ ಸಮಾಜದಲ್ಲಿ ತುಳಿತಕ್ಕೆ ಒಳಗಾಗಿದ್ದ, ಅವಹೇಳನಕ್ಕೆ ಗುರಿಯಾಗಿದ್ದ, ಮಾನವೀಯ ಬದುಕಿಗೆ ವಂಚಿತರಾಗಿದ್ದ ಜನತೆ ಇವರ ಗುರುತ್ವವನ್ನು ಸ್ವೀಕರಿಸಿದರು. ಈ ರೀತಿಯಾಗಿ ಇವರ ಮೂಲಕ ಧರ್ಮ ಪ್ರಚಾರ ತಾನೇ ತಾನಾಗಿ ಆಯಿತು.

ಕೊನೆಯದಾಗಿ ನಾನು ಒಂದೆರಡು ಮಾತುಗಳನ್ನು ಸೇರಿಸಬಯಸುತ್ತೇನೆ. ಸೂಫಿಗಳ ಪ್ರಭಾವದಿಂದ ಎರಡು ಸಂಸ್ಕೃತಿಗಳ ಸಮನ್ವಯದ ಪ್ರಯತ್ನವಷ್ಟೇ ನಡೆಯಲಿಲ್ಲ, ಎರಡು ಭಾಷೆಗಳ, ಎರಡು ಧಾರ್ಮಿಕ ನಂಬಿಕೆಗಳ ಸಮಾಗಮವೂ ಆಯಿತು. ಹಿಂದೀ ಸಾಹಿತ್ಯದಲ್ಲಿ ಹೊಸದೊಂದು ಕಾವ್ಯ ಪರಂಪರೆ ಹುಟ್ಟಿಕೊಂಡಿತು. ಮುಂದೆ ಈ ಪರಂಪರೆಯನ್ನು ಮುಸ್ಲಿಮ ಕವಿಗಳಷ್ಟೇ ಅಲ್ಲ, ಈಶ್ವರದಾಸ ಪುಷ್ಕರ, ಸೂರದಾಸ 'ಲಖನವೀ', ಮೇಘರಾಜ ಸಾಹಾ, ಹೇಮರತ್ನ ಸೂರಿ, ನಂದದಾಸ, ಕಾಶೀರಾಮ ಮುಂತಾದ ಹಿಂದೂ ಕವಿಗಳೂ ಕೂಡ ಮುಂದುವರಿಸಿ ಪ್ರೇಮಾಖ್ಯಾನಕ ಕಾವ್ಯಗಳನ್ನು ರಚಿಸಿದರು. ಒಟ್ಟಾರೆ ಹೇಳಬೇಕೆಂದರೆ ಭಾರತೀಯ ಕಾವ್ಯ ಪರಂಪರೆಯಲ್ಲಿ ಸೂಫಿಗಳು ಪ್ರೇಮದ ಉತ್ಕಟತೆಯನ್ನು ಚಿತ್ರಿಸುವಲ್ಲಿ ಒಂದು ವಿಕ್ರಮವನ್ನೇ ಸಾಧಿಸಿದರು ಎಂದು ಹೇಳಬೇಕು.

ಭಾಲಚಂದ್ರ ಜಯಶೆಟ್ಟಿ
೧೩-೩೦೨, ಅಕ್ಷಿ ಹಾರ್ಮೋನಿ, ಹೊರವರ್ತುಲ ರಸ್ತೆ
ಬೆಳ್ಳಂದೂರು, ಬೆಂಗಳೂರು - ೫೬೦ ೧೦೩



# ನಿರ್ಮತೀಯ ರಾಷ್ಟ್ರೀಯವಾದಿ ನೆಲೆ ಹಾಗೂ ಕುವೆಂಪು ಅವರ 'ಜಯ ಹೇ ಕರ್ನಾಟಕ ಮಾತೆ'

ಡಾ|| ಎಂ. ಡಿ. ಒಕ್ಕುಂದ

**ಭಾ**ರತದ ರಾಷ್ಟ್ರೀಯತೆಗೆ ಎರಡು ಆಯಾಮಗಳಿವೆ. ವಸಾಹತುಶಾಹಿ ರಾಜಕೀಯ ವ್ಯವಸ್ಥೆ ಹಾಗೂ ಬಂಡವಾಳಶಾಹಿ ಆರ್ಥಿಕ ವ್ಯವಸ್ಥೆಯ ನಿರ್ವಹಣೆಯ ಭಾಗವಾಗಿ ಭಾರತ ಒಂದು ಆಧುನಿಕ ರಾಷ್ಟ್ರವಾಗಿ ರೂಪ ತಾಳಿತು. ಎರಡನೆಯದಾಗಿ ವಸಾಹತುಶಾಹಿ ಆಡಳಿತ ವ್ಯವಸ್ಥೆಯ ವಿರುದ್ಧದ ಸ್ವಾತಂತ್ರ್ಯ ಹೋರಾಟ ಭಾರತವನ್ನು ಒಂದು ರಾಷ್ಟ್ರವಾಗಿ ರೂಪಿಸಿತು. ವಸಾಹತುಶಾಹಿ ಆಡಳಿತ ಭಾರತದಂಥ ರೂಪುಗೊಳ್ಳುತ್ತಿರುವ ರಾಷ್ಟ್ರವನ್ನು ಹಿಡಿತದಲ್ಲಿಟ್ಟುಕೊಳ್ಳಲು ಮತವನ್ನು ಒಂದು ವಿಭಜನಾ ಸಾಧನವಾಗಿ ಬಳಸಿಕೊಂಡಿತು. ಹಾಗೆಯೇ ಭಾರತದ ರಾಷ್ಟ್ರೀಯ ಹೋರಾಟದ ಆರಂಭದ ಸ್ತರದಲ್ಲಿ ಕೂಡ 'ಮತ' ಪ್ರಧಾನ ವೇದಿಕೆಯಾಯಿತು. ಹಿಂದೂ ಕೋಮುವಾದ ಮತ್ತು ಮುಸ್ಲಿಮ್ ಮೂಲಭೂತವಾದಗಳು ರಾಷ್ಟ್ರೀಯತೆಯ ಕಲ್ಪನೆಯನ್ನು ಮತೀಕರಿಸಿದವು. ಹಿಂದು-ಮುಸ್ಲಿಮ್ ದ್ವೇಷವು ಮತೀಯ ರಾಷ್ಟ್ರೀಯತೆಯ ಮುಖ್ಯ ಲಕ್ಷಣವಾಯಿತು. ಮುಸ್ಲಿಮ್ ಪ್ರಾತಿನಿಧ್ಯದ ಮಾದರಿಯಲ್ಲಿಯೇ ಶೂದ್ರ, ದಲಿತ, ಆದಿವಾಸಿ ಸಮುದಾಯಗಳೂ ಪ್ರಾತಿನಿಧ್ಯಕ್ಕೆ ಹೋರಾಟ ನಡೆಸಿ ರಾಷ್ಟ್ರೀಯತೆಗೆ ಜಾತಿ, ಜನಾಂಗಗಳೂ ವಿಭಜಕ ನೆಲೆಯನ್ನು ಒದಗಿಸಿದವು. ಇವುಗಳಿಗೆ ಪರ್ಯಾಯವಾಗಿ ಹುಟ್ಟಿರುವ ಚಿಂತನೆಗಳನ್ನು ನಿರ್ಮತೀಯ ರಾಷ್ಟ್ರೀಯವಾದಿ ನೆಲೆ ಎಂದು ಗುರುತಿಸಬಹುದಾಗಿದೆ. ಹಿಂದೂ-ಮುಸ್ಲಿಮ್-ಶೂದ್ರ-ದಲಿತ ಮೊದಲಾದ ಭೇದಗಳನ್ನು ದೂರೀಕರಿಸಿ ಭಾರತದ ಸ್ವಾತಂತ್ರ್ಯ ಹೋರಾಟದಲ್ಲಿ ಎಲ್ಲರನ್ನೂ ಒಳಗೊಳ್ಳುವುದು ಹಾಗೂ ಆಧುನಿಕ ರಾಷ್ಟ್ರವ್ಯವಸ್ಥೆಯಲ್ಲಿ ಎಲ್ಲರಿಗೂ ಪ್ರಾತಿನಿಧ್ಯ ನೀಡುವುದು ನಿರ್ಮತೀಯ ರಾಷ್ಟ್ರೀಯವಾದದ ಪ್ರಮುಖ ರಾಜಕೀಯ ನಿಲುವಾಗಿದೆ. ಆಂತರಿಕವಾಗಿ ಹಲವು ಸೂಕ್ಷ್ಮ ವ್ಯತ್ಯಾಸಗಳಿದ್ದರೂ ಪರಮಹಂಸ, ವಿವೇಕಾನಂದ, ಮಹಾತ್ಮ ಗಾಂಧಿ, ಕಮ್ಯುನಿಸ್ಟರು, ಸಮಾಜವಾದಿಗಳು, ಕ್ರಾಂತಿಕಾರಿಗಳು, ನಿರ್ಮತೀಯ ರಾಷ್ಟ್ರೀಯವಾದದ ಹಲವು ಆಯಾಮಗಳನ್ನು ಪ್ರತಿಪಾದಿಸಿದರು. ಇವರೆಲ್ಲರ ಚಿಂತನೆಗಳ ಒಂದು ಕಲಸು ಮೇಲೋಗರವಾಗಿ ನಿರ್ಮತೀಯ ರಾಷ್ಟ್ರೀಯವಾದದ ಒಂದು ಸಡಿಲವಾದ ಚೌಕಟ್ಟು ಭಾರತದ ರಾಷ್ಟ್ರೀಯ ಹೋರಾಟದಲ್ಲಿ ರೂಪ ತಾಳಿತ್ತು. ಇದು ಕೋಮುವಾದಿ ಮತ್ತು ಮೂಲಭೂತವಾದಿ ಚಿಂತನೆಗಳಿಗೆ ಪರ್ಯಾಯವಾಗಿತ್ತು. ನವೋದಯ ಕನ್ನಡ ಕವಿಗಳ ಮೇಲೆ ಮತೀಯ ರಾಷ್ಟ್ರೀಯವಾದಿ ಚಿಂತನೆಗಳಂತೆ ನಿರ್ಮತೀಯ ರಾಷ್ಟ್ರೀಯವಾದಿ ಚಿಂತನೆಗಳ ಭಿನ್ನ ಆಯಾಮಗಳು ಪ್ರಭಾವ ಬೀರಿದ್ದವು. ಈ ನೆಲೆಯು ಕಾವ್ಯದಲ್ಲಿ ಮೈದಾಳಿದ ಬಗೆಯನ್ನು ಪ್ರಾತಿನಿಧಿಕವಾಗಿ ಕುವೆಂಪು ಅವರ 'ಜಯ ಹೇ ಕರ್ನಾಟಕ ಮಾತೆ' ನಾಡಗೀತೆಯಲ್ಲಿ ಗುರುತಿಸಬಹುದಾಗಿದೆ.

ಕುವೆಂಪು ಅವರ 'ಹಂಪೆಯ ಭೀಮ' ಮತೀಯ ರಾಷ್ಟ್ರೀಯವಾದಿ ನೆಲೆಯನ್ನು ವಿವರಿಸಿದರೆ ಈ ನಾಡಗೀತೆಯು ಆ ಕಾಲದ ನಿರ್ಮತೀಯ ರಾಷ್ಟ್ರೀಯವಾದದ ಒಂದು ಮಗ್ಗುಲನ್ನು ತಿಳಿಯಪಡಿಸುತ್ತದೆ. ಕವಿಯೊಬ್ಬ ಏಕಕಾಲದಲ್ಲಿ ಎರಡು ವಿರುದ್ಧ ಚಿಂತನೆಗಳಿಂದ ಪ್ರಭಾವಿತವಾಗುವ ಚೋದ್ಯವನ್ನು ಕವಿ ಹಾಗೂ ಕಾಲಗಳ ಮುಖಾಮುಖಿಯ ಪರಿಣಾಮದಲ್ಲಿ ಗ್ರಹಿಸಬಹುದಾಗಿದೆ. ಈ ನಾಡಗೀತೆಯ ಪಠ್ಯದ ಜೊತೆಗೆ ಅದರ ಬರವಣಿಗೆಯ ಆರಂಭದ ಸ್ವರೂಪ, ಅದನ್ನು ಕುರಿತಾಗಿ ಕವಿಯ ನಿಲುವು ಹಾಗೂ ನಾಡಗೀತೆಯಾದ ನಂತರ ಹುಟ್ಟಿರುವ ವಿವಾದಗಳೆಲ್ಲ ಮತೀಯ ಮತ್ತು ನಿರ್ಮತೀಯ ಚಿಂತನೆಗಳ ಸಂಘರ್ಷವನ್ನು ಒಳಗೊಂಡಿರುವುದರಿಂದ ಪಠ್ಯದೊಂದಿಗೆ ಈ ಎಲ್ಲ ಸಂಗತಿಗಳನ್ನು ವಿಶ್ಲೇಷಣೆಗೆ ಒಳಪಡಿಸಲಾಗಿದೆ.

**ಕುವೆಂಪು ಅವರ 'ಜಯ ಹೇ ಕರ್ನಾಟಕ ಮಾತೆ'**

ಕುವೆಂಪು ಅವರ ಜನಪ್ರಿಯ ಪದ್ಯಗಳಲ್ಲಿ 'ಜಯ ಹೇ ಕರ್ನಾಟಕ ಮಾತೆ' ಕೂಡ ಒಂದು. ಇದರ ಪ್ರಪಿತಾಮಹನನ್ನು ಅವರು 'ಕರ್ನಾಟಕ ರಾಷ್ಟ್ರಗೀತೆ' ಎಂಬ ಹೆಸರಿನಿಂದ ೧೯೨೪-೨೫ರಷ್ಟು ಹಿಂದೆಯೇ ರೂಪಿಸಿದ್ದರು. ೧೯೩೦ರಲ್ಲಿ ಪ್ರಕಟವಾದ ಅವರ ಮೊದಲ ಕವನ ಸಂಕಲನ 'ಕೊಳಲು' ಅದರ ಪರಿಷ್ಕೃತ ಆವೃತ್ತಿಯನ್ನು ಒಳಗೊಂಡಿದೆ. ೧೯೭೦-೭೧ರಲ್ಲಿ ಕನ್ನಡ ಸಾಹಿತ್ಯ ಪರಿಷತ್ತು ಈ ಕವಿತೆಯನ್ನು ನಾಡಗೀತೆಯಾಗಿ ಸ್ವೀಕರಿಸಿ ಮೂರು ನಿಮಿಷಗಳಿಗೆ ಹಾಡುವಷ್ಟು ಸಂಗ್ರಹಿಸಿಕೊಂಡಿತು. ೨೦೦೪ರಲ್ಲಿ ಕರ್ನಾಟಕ ಸರಕಾರ

> ದೇಶ ಮತ್ತು ಭಾಷೆಗಳನ್ನು ಮಾತೃಸ್ವರೂಪಿಯಾಗಿ ಕಂಡು ಅವುಗಳ ನಡುವೆ ತಾಯಿ ಮತ್ತು ಮಗಳ ಕರುಳಬಳ್ಳಿಯ ಸಂಬಂಧವನ್ನು ಬೆಸೆದು ಎರಡರ ನಡುವೆ ಅವಿನಾಭಾವ ಸಂಬಂಧವನ್ನು ಕವಿತೆ ಸೃಷ್ಟಿಸುತ್ತದೆ. ದೇಶ ಮತ್ತು ಭಾಷೆಗಳನ್ನು ಮಾತೃರೂಪದಲ್ಲಿ ಕಲ್ಪಿಸಿಕೊಂಡು ಮತೀಯ ರಾಷ್ಟ್ರೀಯವಾದಕ್ಕೆ ಪ್ರೇರಣೆ ನೀಡಿದ 'ವಂದೇ ಮಾತರಂ' ಮಾದರಿಯಲ್ಲಿ ಈ ಕವಿತೆಯ ಮಟ್ಟಿಗೆ ಪರಿವರ್ತನೆ ಮಾಡುತ್ತದೆ. ದೇಶವನ್ನು ತಾಯಿಗೆ, ತಾಯಿಯನ್ನು ದೇವರಿಗೆ ಹೋಲಿಸುವ ಮಾದರಿಯ ಕವಿತೆಗಳಲ್ಲಿ ಧಾರ್ಮಿಕ ಕಾರಣಕ್ಕೆ ಮುಸ್ಲಿಂ ಸಮುದಾಯವನ್ನು ಹೊರಗಿಡುವ ತಂತ್ರವಿತ್ತು. ಆದರೆ 'ಜಯ ಹೇ ಕರ್ನಾಟಕ ಮಾತೆ'ಯಲ್ಲಿ ಎಲ್ಲರನ್ನೂ ಒಳಗೊಳ್ಳುವ ಸಾಮರಸ್ಯವಾದಿ ಚಿಂತನೆ ಇದೆ.

ಈ ಗೀತೆಯನ್ನು ನಾಡಗೀತೆಯಾಗಿ ಸ್ವೀಕರಿಸಿತು. ಕುವೆಂಪು ಅವರ ಪರಿಷ್ಕರಣ, ಪರಿಷತ್ತಿನ ಸಂಗ್ರಹ, ಸರಕಾರ ನಾಡಗೀತೆಯಾಗಿ ಸ್ವೀಕರಿಸುವಾಗ ಮಧ್ವರ ಹೆಸರಿನ ಸೇರ್ಪಡೆ ಮೊದಲಾದ ಹಂತಗಳಲ್ಲಿ ಈ ಕವಿತೆ ಕೆಲವು ವಿವಾದಗಳನ್ನು ಹುಟ್ಟುಹಾಕಿದೆ.

**ಸಾಮರಸ್ಯ ಮತ್ತು ಬಹುಸಾಂಸ್ಕೃತಿಕತೆಯ ನಿಲುವು**

ಕುವೆಂಪು ೧೯೮೦ರಲ್ಲಿ ಪ್ರಕಟಿಸಿದ ತಮ್ಮ 'ನೆನಪಿನ ದೋಣಿ'ಯಲ್ಲಿ ಈ ಗೀತೆಯನ್ನು ಕುರಿತಾಗಿ ಕೆಲವು ಮಹತ್ವದ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ. ''ಠಾಕೂರರ 'ಜನಗಣಮನ'ದಂತೆ ನಮ್ಮ ನಾಡಿಗೂ ಒಂದು ರಾಷ್ಟ್ರಗೀತೆಯನ್ನು ನೀಡುವ ಪ್ರಯತ್ನದ ಭ್ರೂಣಸ್ಥಿತಿಯಂತಿದೆ'' ಎಂದು ತಮ್ಮ 'ಕರ್ನಾಟಕ ರಾಷ್ಟ್ರಗೀತೆ'ಯನ್ನು ಕುರಿತು ಹೇಳಿಕೊಳ್ಳುತ್ತಾರೆ. ಇಪ್ಪತ್ತನೆಯ ಶತಮಾನದ ಆರಂಭದ ದಶಕಗಳಲ್ಲಿ ಭಾರತದ ರಾಷ್ಟ್ರೀಯ ಹೋರಾಟಗಳ ಮೇಲೆ ಗಾಢವಾದ ಪ್ರಭಾವ ಬೀರಿದ ಗೀತೆಯೆಂದರೆ ಬಂಕಿಮಚಂದ್ರರ 'ವಂದೇಮಾತರಂ'. ಈ ಗೀತೆಯು ಭಾರತದಲ್ಲಿ ಮತೀಯ ರಾಷ್ಟ್ರೀಯವಾದಕ್ಕೆ ದೊಡ್ಡ ಪ್ರಮಾಣದಲ್ಲಿ ಸ್ಫೂರ್ತಿ ನೀಡಿತು. ಮುಸ್ಲಿಮರನ್ನು ಹೊರತುಪಡಿಸಿದ ಭಾರತ ರಾಷ್ಟ್ರೀಯತೆಯ ಪ್ರತಿಪಾದನೆಗೆ ಬುನಾದಿ ಹಾಕಿತು. ಹಿಂದೂ ದೇವತೆಗಳನ್ನು ಆರಾಧಿಸುವ ಪ್ರತಿಮೆಗಳಿಂದ ತುಂಬಿದ ಈ ಗೀತೆಯನ್ನು ರಾಷ್ಟ್ರಗೀತೆಯೆಂದು ಸ್ವೀಕರಿಸಲು ಜಿನ್ನಾ ಹಾಗೂ ಮುಸ್ಲಿಂ ಲೀಗ್ ವಿರೋಧಿಸಿದವು. ೧೯೪೭ ಆಗಸ್ಟ್ ೧೪ರ ಮಧ್ಯರಾತ್ರಿ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ಸು ಠಾಕೂರರ 'ಜನಗಣಮನ'ವನ್ನು ರಾಷ್ಟ್ರಗೀತೆಯೆಂದೂ ತ್ರಿವರ್ಣ ಧ್ವಜವನ್ನು ರಾಷ್ಟ್ರಧ್ವಜವೆಂದೂ ಒಪ್ಪಿ, ನೆಹರೂ ಅವರ ನೇತೃತ್ವದಲ್ಲಿ ಸ್ವಾತಂತ್ರ್ಯವನ್ನು ಘೋಷಿಸಿತು. ಆಗ ಹಿಂದೂ ಮಹಾಸಭಾ ಹಾಗೂ ಆರೆಸ್ಸೆಸ್ ಸಂಘಟನೆಗಳು ಈ ಎರಡೂ ರಾಷ್ಟ್ರೀಯ ಲಾಂಛನಗಳನ್ನು ತಿರಸ್ಕರಿಸಿ 'ವಂದೇ ಮಾತರಂ' ಹಾಗೂ 'ಭಗವಾಧ್ವಜ'ಗಳನ್ನು ತಮ್ಮ ರಾಷ್ಟ್ರೀಯ ಲಾಂಛನಗಳೆಂದು ಘೋಷಿಸಿದವು. ಅಂದಿನಿಂದ ಇಂದಿನವರೆಗೂ ಆ ವಿವಾದ ಮುಂದುವರಿದಿದೆ. ಈ ಎಲ್ಲ ಚರಿತ್ರೆಯೊಂದಿಗೆ ಬೆಳೆದ ಕುವೆಂಪು ಅವರು ೧೯೮೦ರ ಕಾಲಘಟ್ಟದಲ್ಲಿ ನಿಂತು ೧೯೨೪-೨೫ರ ಕವಿತೆಯೊಂದನ್ನು ಕುರಿತು ತಮಗೆ ಠಾಕೂರರ 'ಜನಗಣಮನ' ಮಾದರಿಯಾಗಿತ್ತು ಎಂದು ಹೇಳಿಕೊಳ್ಳುತ್ತಾರೆ. ತನ್ನದು ಬಂಕಿಮರ

## ಇಂಗ್ಲಿಷ್ ಹೈದ



ಸೀಗೆ ಕೊಬ್ಬರಿ ಎಣ್ಣೆ ಹಾಕಿ ಬಾಚಿ
ಜೋಡಿ ಸರ್ಪಜಡೆಗಳ ನಿತಂಬಕ್ಕಿಳಿಸಿ
ಬೆಟ್ಟತಾವರೆ ಹೂವ ಮುಡಿದು
ಲಂಗದಾವಣಿ ತೊಟ್ಟು
ಮಂಟಿ ನೂಕಿ ಏದುಸಿರ ಫಸ್ಟ್ ಬಸ್ಸಿಡಿದು
ಬೆಚ್ಚಗೆ, ಪುಸ್ತಕಗಳ ಎದೆಗೊತ್ತಿ
ಮಾರ್ನಿಂಗ್ ಕ್ಲಾಸಿಗೆ, ಬಸ್‌ಸ್ಟ್ಯಾಂಡ್ ಹತ್ತಿರ
ಕಾಲೇಜು ಗೇಟ್ ದಾಟುತ್ತಿರುವಾಗ
ಗೊಂದಲ, ಬೆವರು, ಜಿನುಗು
ಎದುರಾಗುತ್ತಿರುವ
ಊರ ಇಂಗ್ಲಿಷ್ ಹೈದನ ಕಂಡು

ನೆಟ್ಟಗೆ ಬರದ
ಗಡ್ಡವನ್ನೆ ಫ್ರೆಂಚ್ಗೆ ತಿರುಗಿಸಿ
ಗರಿ ಸೂಟ ಧರಿಸಿ
ಫಳಫಳ ಪಾಲಿಷ್ಡ್ ಬೂಟು ಹಾಕಿ
ನಡೆದುಹೋದಂತೆಲ್ಲ ಪುಳಕ ಬೀರುತ
ಷೇಕ್ಸ್‌ಪಿಯರ್, ರೂಸೊ, ಶೆಲ್ಲಿ
ಬೊದಿಲೇರ್, ಲಾರೆನ್ಸ್, ಚೆ ಗುವಾರ
ಕಠಿಣ ಅಭ್ಯಾಸ ತಿಳಿಯ
ಕಿನ್ನರಿ ಜೋಗಿಯಾಗಿ ಹಾಡುತ
ಕಾಲೇಜು ಕನ್ನಿಕೆಯರ ಎದೆ ಢವಗುಡಿಸುವ
ಕಾಮ್ರೇಡ್ ಲೆಕ್ಚರರ್
ಮನೆ ಜೀತ ಮೊಮ್ಮಗ
ಚೆಲ್ವ ಆಲಿಯಾಸ್ ಚೆಲುವರಾಜನಿಗೆ
ನಮಸ್ಕಾರ ಎನ್ನುವುದೊ...
ಬೇಕಂತಲೆ ತಲೆತಗ್ಗಿಸುವುದೋ... ಎಂದು.

ಕೊರೆವ ಜೀನ್ಸ್, ಬಿಗಿವ ಸ್ಕರ್ಟ್
ಮಿರಿಮಿರಿ ತರೇವಾರಿ ಪಂಜಾಬಿ ಡ್ರೆಸ್
ಬಾಯ್ಕಟ್ ಬಾಬ್ಕಟ್ ಟಕ್ ಟಕ್ ಹೀಲ್ಡಿನ
ಪುಟಪುಟನೆ ಪುಟಿಯುವ ನಗರ ಪುಟ್ಟಿಯರು
ಭಾರಿ ರೆಸ್ಪೆಕ್ಟ್‌ನ
ಗುಡ್ ಮಾರ್ನಿಂಗ್ ಸರ್, ಗುಡ್ ಮಾರ್ನಿಂಗ್ ಸರ್ಗೆ
ಓ ಹೆಲೊ, ಹೆಲೊ, ಮಾರ್ನಿಂಗ್, ಮಾರ್ನಿಂಗ್
ವಿನಯ ವಿನಿಮಯದಿ
ಕಟ್ಟುತಿತ್ತು ಜೀವಕಳೆ
ಕಾಲೇಜು ಕಂಬ ಪಡಸಾಲೆಗಳಿಗೆ.
ಊರಿಗೂರೆ ಅಯ್ಯನ ಪಾದಕ್ಕಡವಾಗಿ ಭಣ ಭಣ
ಮೂರಂಕಣ ಮಾಡುಮನೆ
ಲಾಟುಲಾಟು ಹಳ್ಳಸಾಲು ಮಕ್ಕಿಸಾಲು ಧಣಿ
ಘನ ಪಟೇಲರ ಮೊಮ್ಮಗಳು,
ಬಿಂಕ ಬಿಮ್ಮದಿ ಕಾಲಲಿ ತೋರಿಸಿದ್ದ
ಎರಡು ಕೈಯೊಡ್ಡಿ ಮಾಡುವ
ಜೀತದಾಳ ಕುಡಿ ಕಮ್ ಲೆಕ್ಚರರ್ಗೆ
ಅದೇನನ್ನುವುದು ?
ಕನ್‌ಫ್ಯೂಸು... ಕನ್‌ಫ್ಯೂಸು.

ಏಳುತ್ತಿಲ್ಲ ಕೈಯ್ಯಿ,
ಬರುತ್ತಿಲ್ಲ ಬಾಯಿ ನಮಸ್ಕಾರಕೆ
ತಲೆತಗ್ಗಿಸಿ,
ಯಮಹೆಜ್ಜೆ ಹಾಕುವುದ ಬಿಟ್ಟು.

ಅಟೆಂಡೆನ್ಸ್ ಟ್ವೆಂಟಿನೈನ್ ಬಂದಾಗ
ಎದೆ ಜುಮುಜುಮು, ಢವ ಢವ
ಜೀರೊ ಸೌಂಡಲಿ ಪ್ರೆ...ಸೆ...ಂಟು ಭಾರ
ಇಳಿಸಲು,
ಇನ್ನೊಂದು ತಾಯ ಜನ್ಮದನುಭವ.
ತುಂಟ ಪೋರಿಯರ ಕಿಲಕಿಲ ನಡುವೆ
ಅದೂ ಕೇಳದೆ, ನಡುನಡುವೆ
ಯಥಾ ಆಬ್ಸೆಂಟ್...! ಚೋಜುಗ
ಇದ್ಯಾರ್ರೀ... ವೈ. ಡಿ. ಶಿವಗಂಗಮ್ಮ
(ಯಮದೂರು ಧೂತೇಗೌಡ ಶಿವಗಂಗಮ್ಮ)
ನಾನೆ, ಪ್ರೆಸೆಂಟ್ಸಾರ್ ತೆಗಿವಾಗ
ಗೊಳ್ಳನೆ ನೂರು ಕಣ್ಣಿರಿತ
ನಾಟಿ ಬಿಂಕ ಶಿವಗಂಗಮ್ಮಗೆ.

ಗಾಬರಿ, ಬೆವೆತ, ಸಂಕಟ
ಕಾಲೇಜಿಗೆ ಮೂರುನಾಮ
ಮೈನೋವೆಂದು ಮೂರು ದಿನ,
ಸಂಚಕಾರ ಅಯ್ಯನಿಗೆ ಹೇಳಿದರೆ
ಅತ್ತೂ... ಕರೆದೂ ನೆಂಟರಿಂದೆಲ್ಲ ಹೇಳಿಸಿ
ಧರಣಿ ಮಾಡಿ ಸೇರಿದ್ದ ಕಾಲೇಜಿಗೆ

ಕೆಟ್ಟೆ ಈಗಾದ್ರೆ, ಎಂದು
ಟ್ವೆಂಟಿನೈನ್ ಧ್ವನಿಸುವಾಗಲೆ
ಪೂರ್ಣಪ್ರಮಾಣ ಪ್ರೆಸೆಂಟ್ ಸಾರ್
ಪೂಜ್ಯ ಗುರುಗಳಿಗೆ, ಆಲಿಯಾಸ್
ಜೀತಗಾರ ಜೀತಗಾರ ಕುಡಿ
ಇಂಗ್ಲಿಷ್ ಲೆಕ್ಚರರ್ ಚೆಲುವರಾಜನಿಗೆ.

**ಡಾ॥ ಎಂ. ಎಸ್. ಶೇಖರ್**
ಆರ್೭-ರೀಡರ್ಸ್ ಕ್ವಾರ್ಟರ್ಸ್, ಮಾನಸಗಂಗೋತ್ರಿ, ಮೈಸೂರು - ೫೭೦ ೦೦೬

'ವಂದೇ ಮಾತರಂ' ಮಾದರಿ ಅಲ್ಲ ಎನ್ನುವದು ಆ ವಿವರಣೆಯ ಮುಖ್ಯಧ್ವನಿ. ಹಿಂದೂ ಮತ್ತು ಮುಸ್ಲಿಮ್ ಕೋಮುವಾದಿ ಮತ್ತು ಮೂಲಭೂತವಾದಿ ಸಂಘಟನೆಗಳ ಸಂಘರ್ಷದ ಆರಂಭದ ಕಾಲದಲ್ಲಿ ಕುವೆಂಪು ಅವರಂಥ ಕವಿಯೊಬ್ಬ ಠಾಕೂರರ ಮಾದರಿಯನ್ನು ಆಯ್ಕೆಮಾಡಿಕೊಳ್ಳುವ ವಿಧಾನದಲ್ಲಿಯೇ ಮತೀಯ ರಾಷ್ಟ್ರೀಯತೆಯನ್ನು ತಿರಸ್ಕರಿಸಿ ನಿರ್ಮತೀಯ ರಾಷ್ಟ್ರೀಯತೆಯನ್ನು ಒಪ್ಪಿಕೊಳ್ಳುವ ಅವರ ಸಾಮರಸ್ಯವಾದಿ ನಿಲುವು ಖಚಿತವಾಗಿ ವ್ಯಕ್ತವಾಗುತ್ತದೆ.

ಕುವೆಂಪು ಅವರು 'ಕರ್ನಾಟಕ ರಾಷ್ಟ್ರಗೀತೆ'ಯನ್ನು ಕುರಿತಾಗಿ ಹೇಳಿದ ಇನ್ನೊಂದು ಮಾತು ಗಮನಾರ್ಹ: ''ಹೈದರ್, ಟಿಪ್ಪು, ಶಿವಾಜಿ, ತುಕಾರಾಂ, ಪಂಪ, ಪುಲಿಕೇಶಿ, ಕೆಂಪೇಗೌಡ, ಅರ್ಥವಾಗದ 'ಮಾರಾಮ' ಈ ಎಲ್ಲ ಹೆಸರುಗಳ ಕಲಬೆರಕೆಯ ವಿಚಿತ್ರ ಪಾಕವಿರುವದನ್ನು ಓದುಗರು ದರಹಸ್ಮಿತರಾಗಿ ಗಮನಿಸಬಹುದು.'' ಫ್ಯಾಸಿಸಂ ಮತ್ತು ನಾಸಿಸಂಗಳ ಚಿಂತನೆಗಳಿಂದ ಪ್ರೇರಣೆ ಪಡೆದು ಶುದ್ಧ ಆರ್ಯ ಜನಾಂಗದ ಸಾಂಸ್ಕೃತಿಕ ರಾಷ್ಟ್ರೀಯತೆಯನ್ನು ಸಾವರ್ಕರ್ ಹಾಗೂ ಅವರ ಬಳಗ ಪ್ರತಿಪಾದಿಸಲು ಆರಂಭಿಸಿದ ಕಾಲಘಟ್ಟದಲ್ಲಿ ಬರೆದ 'ಕರ್ನಾಟಕ ರಾಷ್ಟ್ರಗೀತೆ'ಯ ಬಗ್ಗೆ ೧೯೮೦ರಲ್ಲಿ ಕುವೆಂಪು ಮೇಲಿನಂತೆ ಅಭಿಪ್ರಾಯಪಡುವುದು ಆ ಕಾಲದ ಮತ್ತು ೮೦ರ ದಶಕದ ಕೋಮುವಾದಿ ರಾಷ್ಟ್ರೀಯತೆಗೆ ನೀಡಿದ ಸ್ಪಷ್ಟವಾದ ಪ್ರತಿಭಟನಾತ್ಮಕ ಪ್ರತಿಕ್ರಿಯೆಯಂತೆ ಕಾಣಿಸುತ್ತದೆ. ಆದಿಕಾಲದಿಂದಲೂ ಭಾರತದ ಸಂಸ್ಕೃತಿಯ ಬಹುಮುಖ್ಯ ಲಕ್ಷಣವಾದ ಸಂಕರಶೀಲತೆಯನ್ನು ಕುವೆಂಪು ಎತ್ತಿ ಹಿಡಿಯುತ್ತಾರೆ. 'ಕಲಬೆರಕೆಯ ವಿಚಿತ್ರ ಪಾಕ'ವೇ ಭಾರತದ ಸಮ್ಮಿಶ್ರ ಸಂಸ್ಕೃತಿ. ಅವರು ತಮ್ಮ ನಾಡಗೀತೆಯಲ್ಲಿ ಬಹುಸಾಂಸ್ಕೃತಿಕತೆಯನ್ನು ಉದ್ದೇಶಪೂರ್ವಕವಾಗಿಯೇ ಪ್ರತಿಪಾದಿಸಿದ್ದಾರೆ.

**ಕುವೆಂಪು ಪರಿಷ್ಕರಣದ ಸ್ವರೂಪ ಮತ್ತು ಸಾಮರಸ್ಯ**

''ಭಾವ ಮತ್ತು ಭಾಷೆ ಎರಡರ ಸೃಷ್ಟಿಯಿಂದಲೂ ಕವಿಯ ವಿಕಾಸವನ್ನು ಗುರುತಿಸಲು ನೆರವಾಗುತ್ತದೆಂದು ಯಾವುದನ್ನೂ ತಿದ್ದಲು ಹೋಗದೇ ಅದನ್ನು ಎಲ್ಲ ನ್ಯೂನತೆಗಳೊಡನೆ ಇಲ್ಲಿ ಕೊಡುತ್ತೇನೆ,'' ಎಂದು 'ನೆನಪಿನ ದೋಣಿಯಲ್ಲಿ' 'ಕರ್ನಾಟಕ ರಾಷ್ಟ್ರಗೀತೆ'ಯನ್ನು ಕುವೆಂಪು ಯಥಾವತ್ತಾಗಿ ನೀಡಿದ್ದಾರೆ. ಬಂಜಗೆರೆ ಜಯಪ್ರಕಾಶ ಅವರು ''ನಾಡಗೀತೆಯೊಂದನ್ನು ಬರೆಯುವ ಹಂಬಲ ಹಾಗೂ ಅದರೊಳಗೆ ಭಿನ್ನ ಪರಂಪರೆಗಳ ಮಿಳಿತವನ್ನು ಸೂಚಿಸುವಂತೆ ಇರುವ ಹೆಸರುಗಳ ಪಟ್ಟಿ ಈಗ ಮಾನ್ಯಗೊಂಡಿರುವ ನಾಡಗೀತೆಗಿಂತ ಆಗಿನ ಪ್ರಯತ್ನದಲ್ಲೇ ಕುವೆಂಪು ದೃಷ್ಟಿಕೋನಕ್ಕೆ ಹೆಚ್ಚು ಸಮೀಪವಿರುವಂತಿದೆ'' ಎಂದು 'ಕರ್ನಾಟಕ ರಾಷ್ಟ್ರಗೀತೆ' ಹಾಗೂ 'ಜಯ ಹೇ ಕರ್ನಾಟಕ ಮಾತೆ' ಎರಡನ್ನೂ ತುಲನೆ ಮಾಡಿ ಪ್ರತಿಕ್ರಿಯಿಸಿದ್ದಾರೆ. ಇಲ್ಲಿ ಹೈದರ್, ಟಿಪ್ಪು, ಶಿವಾಜಿ, ಪುಲಿಕೇಶಿ, ಕೆಂಪೇಗೌಡ ಮೊದಲಾದ ಅರಸರ ಹೆಸರುಗಳನ್ನು ಕುವೆಂಪು ತೆಗೆದುಹಾಕಿದ್ದಾರೆ. ಭಾರತದ ರಾಜಕೀಯ ಪರಂಪರೆಯ ಸ್ಮೃತಿಕೋಶದಲ್ಲಿ ಒಬ್ಬ ಮುಸ್ಲಿಮ್ ದೊರೆಯ ಹೆಸರು ಕೂಡ ಪ್ರಸ್ತಾಪಗೊಳ್ಳದೆ ಇರುವದು ಮೇಲ್ನೋಟಕ್ಕೆ ಸಮನ್ವಯತೆಗೆ ಭಂಗಬಂದಂತೆ ಕಾಣಿಸುತ್ತದೆ. ಆಶ್ಚರ್ಯದ ಸಂಗತಿ ಎಂದರೆ ಮೊದಲ ರಾಷ್ಟ್ರಗೀತೆಯಲ್ಲಿ ಕುವೆಂಪು ಅವರು ತಮ್ಮ ಇತರ ಕೃತಿಗಳಲ್ಲಿ ಉಗ್ರವಾಗಿ ಖಂಡಿಸಿದ ಮತ್ತು ಹೊಸಕಾಲಕ್ಕೆ ತಕ್ಕಂತೆ ಪರಿವರ್ತಿಸಿದ ವೈದಿಕ ಲಾಂಛನಗಳನ್ನು ಸೇರಿಸಿದ್ದರು. ಪುರಾಣ, ಆಗಮ, ಸ್ಮೃತಿ, ಶ್ರುತಿ, ಶುಭಕರ ದಿವಿಜರು ಇತ್ಯಾದಿ. 'ಜಯ ಹೇ ಕರ್ನಾಟಕ ಮಾತೆ'ಯಲ್ಲಿ ಇವುಗಳನ್ನು ತೆಗೆದುಹಾಕಿದ್ದಾರೆ. ಜತೆಗೆ ನಾನಕ, ರಮಾನಂದ, ಕಬೀರ, ಚೈತನ್ಯ, ಪರಮಹಂಸ ಮತ್ತು ವಿವೇಕಾನಂದರ ಹೆಸರುಗಳನ್ನು ಹೊಸತಾಗಿ ಸೇರಿಸುತ್ತಾರೆ. ಮೊದಲ ಕವಿತೆಯಲ್ಲಿ ಬಿಟ್ಟುಹೋಗಿದ್ದ ಭಾರತದ ಬಹುದೊಡ್ಡ ಧಾರ್ಮಿಕ ಹಾಗೂ ಆಧ್ಯಾತ್ಮಿಕ ಸಾಮರಸ್ಯದ ಪರಂಪರೆಯನ್ನು ಸೇರಿಸುವ ಮತ್ತು ಜೀವವಿರೋಧಿ ಬ್ರಾಹ್ಮಣ್ಯದ ಪ್ರತಿಪಾದನೆಯ ಆಕರಗಳನ್ನು ಕೈಬಿಟ್ಟಿರುವ ಕಾರಣಗಳಿಂದ ಕುವೆಂಪು ದೃಷ್ಟಿಕೋನಕ್ಕೆ 'ಜಯ ಹೇ ಕರ್ನಾಟಕ ಮಾತೆ'ಯೇ 'ಕರ್ನಾಟಕ ರಾಷ್ಟ್ರಗೀತೆ'ಗಿಂತ ಹೆಚ್ಚು ಸಮೀಪವಾಗಿದೆ ಎಂದು ಹೇಳಬಹುದು. ಊಳಿಗಮಾನ್ಯ ವ್ಯವಸ್ಥೆಯು ಬಂಡವಾಳಶಾಹಿ ವ್ಯವಸ್ಥೆಯಾಗಿ ಪರಿವರ್ತನೆಯಾಗುತ್ತ ಆಧುನಿಕ ರಾಷ್ಟ್ರ ವ್ಯವಸ್ಥೆಯು ರೂಪಗೊಳ್ಳುವಾಗ ಮತ, ಜಾತಿ, ಭಾಷೆ, ಲಿಂಗ, ಬುಡಕಟ್ಟುಗಳು ತಂತಮ್ಮ ಪ್ರಾತಿನಿಧ್ಯಗಳನ್ನು ಪ್ರತಿಪಾದಿಸುತ್ತ ಹಲವು ಬಗೆಯ ರಾಷ್ಟ್ರೀಯತೆಗಳು ಸಂಘರ್ಷ ನಡೆಸಿರುವಾಗ, ವಸಾಹತುಶಾಹಿ ವಿರೋಧಿ ಹೋರಾಟವನ್ನು ಬೆಂಬಲಿಸುವ ರಾಷ್ಟ್ರೀಯ ಐಕ್ಯವನ್ನು ಪ್ರತಿಪಾದಿಸಲು ರಾಷ್ಟ್ರಗೀತೆಗಳನ್ನು ಬರೆಯುವ ಆಂತರಿಕ ಒತ್ತಡಕ್ಕೆ ಒಳಗಾದ ಕುವೆಂಪು ಎಲ್ಲವನ್ನೂ ಸಮತೂಗಿಸಿಕೊಂಡು ಹೋಗಲು ಎದುರಿಸಬೇಕಾದ ಬಿಕ್ಕಟ್ಟುಗಳನ್ನು ಎದುರಿಸಿದ್ದಾರೆ. ಮತ್ತು ''ಜಯ ಹೇ ಕರ್ನಾಟಕ ಮಾತೆ''ಯಲ್ಲಿ ಪರಿಹಾರ ಕಂಡುಕೊಳ್ಳಲು ಯತ್ನಿಸಿದ್ದಾರೆ. ಡಾ॥ ವಿ. ಬಿ. ತಾರಕೇಶ್ವರ ಅವರು ಹೇಳುವಂತೆ, ''ತಾವು ರೂಪಿಸುತ್ತಿರುವ ಗುರುತು ಸಮುದಾಯ ಮತ್ತು ಅದು ತನ್ನದೆಂದು ದಾವೆ ಹೂಡಿರುವ ಭೌಗೋಳಿಕ ಪ್ರದೇಶದ ಚರಿತ್ರೆಯನ್ನು ಬರೆಯುವಾಗ ಸಾಧ್ಯವಾದಷ್ಟು ಎಲ್ಲರನ್ನೂ ಒಗ್ಗೂಡಿಸುವಂಥ ಹಳೆಯ ಸಮುದಾಯಗಳ ಸಂಕೇತಗಳಿಗೆ, ವಿಚಾರಗಳಿಗೆ, ಅದರಲ್ಲೂ ಆ ಸಮುದಾಯಗಳು ಸಾಂಸ್ಕೃತಿಕವಾಗಿ ಅಥವಾ ಜನಸಂಖ್ಯೆ ಹಾಗೂ ಆರ್ಥಿಕವಾಗಿ ಪ್ರಬಲವಾಗಿದ್ದರೆ ಪ್ರಾಮುಖ್ಯ ನೀಡಲಾಗುತ್ತದೆ. ಹಳೆಯ ಸಮುದಾಯಗಳ ಸಂಕೇತ ಮತ್ತು ವಿಚಾರಗಳನ್ನು ಒಂದು ಭಾಷಿಕ ಸಮುದಾಯವಾಗಿ ಬೆಸೆಯುವ ಕ್ರಿಯೆಯನ್ನು ಇದು ಮಾಡುತ್ತಿರುತ್ತದೆ. ಈ ನಿಟ್ಟಿನಲ್ಲಿ ಕುವೆಂಪು ಅವರ ರಾಷ್ಟ್ರಗೀತೆಯು ತನ್ನ ಉದ್ದೇಶವನ್ನು ಬಹುಮಟ್ಟಿಗೆ ಈಡೇರಿಸಿಕೊಂಡಿದೆ.''




ಮೈಸೂರಿನ ಇನ್‌ಸ್ಟಿಟ್ಯೂಷನ್ ಆಫ್ ಎಂಜಿನಿಯರ್ಸ್ ಸಭಾಂಗಣದಲ್ಲಿ ೨೯-೭-೨೦೧೧ರಂದು ನವಕರ್ನಾಟಕದ ಬೃಹತ್ ಪುಸ್ತಕ ಮೇಳವನ್ನು, ವಿದ್ಯಾವರ್ಧಕ ಪ್ರಥಮ ದರ್ಜೆ ಕಾಲೇಜಿನ ಪ್ರಾಂಶುಪಾಲರಾದ ಪ್ರೊ॥ ಶಿವರಾಮು ಕಾಡನಕುಪ್ಪೆ ಅವರು ಉದ್ಘಾಟಿಸಿದರು.

ಠಾಕೂರರ ರಾಷ್ಟ್ರಗೀತೆಯು ಹಲವು ಭಾಷಿಕ ಸಮುದಾಯಗಳನ್ನು ಒಗ್ಗೂಡಿಸುವ ಭೌಗೋಳಿಕ ರಾಷ್ಟ್ರೀಯತೆಗೆ ಮಹತ್ವ ನೀಡುವುದರಿಂದ ಅಲ್ಲಿ ಸಂಘರ್ಷಕ್ಕೆ ಅವಕಾಶ ಕಡಿಮೆ. ನಾಡು ಮತ್ತು ದೇಶಗಳಿಗೆ ಸಾಂಸ್ಕೃತಿಕ ಕೋಶಗಳಿರುತ್ತವೆಯೆಂಬ ನಂಬಿಕೆಯ ಹಿನ್ನೆಲೆಯಲ್ಲಿ ರಾಷ್ಟ್ರಗೀತೆ ಬರೆಯುವುದರಿಂದ ಕುವೆಂಪು ಅವರು ಹಲವು ಸಂಘರ್ಷ ಮತ್ತು ಬಿಕ್ಕಟ್ಟುಗಳಿಗೆ ಮುಖಾಮುಖಿಯಾಗಬೇಕಾಗುತ್ತದೆ. ''ಶ್ರೀ ರಾಮಕೃಷ್ಣ ಪರಮಹಂಸ ಮತ್ತು ಅರವಿಂದರು ಕುವೆಂಪು ಅವರ ಅನುಭಾವ ಹಾಗೂ ಆಧ್ಯಾತ್ಮಿಕ ದೃಷ್ಟಿಯನ್ನು ರೂಪಿಸಿದರೆ, ವಿವೇಕಾನಂದ ಮತ್ತು ಗಾಂಧಿಯವರು ಅವರ ವೈಚಾರಿಕತೆ ಹಾಗೂ ರಾಷ್ಟ್ರೀಯತೆಯ ಕಲ್ಪನೆಗಳನ್ನು ರೂಪಿಸಿದರೆಂದು ಹೇಳಬಹುದು'' ಎಂದು ಕುವೆಂಪು ಅವರ ನಿರ್ಮತೀಯ ರಾಷ್ಟ್ರೀಯವಾದದ ಪ್ರೇರಕ ಶಕ್ತಿಗಳನ್ನು ಜಿ. ಎಸ್. ಶಿವರುದ್ರಪ್ಪ ಅವರು ಸರಿಯಾಗಿ ಗುರುತಿಸಿದ್ದಾರೆ.

**ಪಠ್ಯದೊಳಗಿನ ವಿವರಗಳು ಮತ್ತು ಸಾಮರಸ್ಯ**

ಕುವೆಂಪು ಅವರ ಕಾವ್ಯದಲ್ಲಿ ಕಂಡುಬರುವ ಮೂರು ಮುಖ್ಯ ಸಂಗತಿಗಳೆಂದರೆ –

೧. ಸಾಂಸ್ಥಿಕ ಧರ್ಮಗಳ ನಿರಾಕರಣೆ ಮತ್ತು ವಿಶ್ವಮಾನವ ಪ್ರಜ್ಞೆ
೨. ನಿರ್ಮತೀಯ ರಾಷ್ಟ್ರೀಯವಾದದ ಹಿನ್ನೆಲೆಯಲ್ಲಿ ಮತಗಳ ಸೌಹಾರ್ದತೆಯ ಪ್ರತಿಪಾದನೆ
೩. ಅಲ್ಲಲ್ಲಿ ಮತೀಯ ರಾಷ್ಟ್ರೀಯವಾದದ ಅಭಿವ್ಯಕ್ತಿ

ಕುವೆಂಪು ಅವರ ಮಹಾಪ್ರತಿಭೆ ಈ ಮೂರು ವೈರುಧ್ಯಗಳನ್ನೊಳಗೊಂಡ, ಪರಸ್ಪರ ಸಂಘರ್ಷಗಳಿಗೆ ಕಾರಣವಾಗಬಹುದಾದ ಸಂಗತಿಗಳಿಂದ ರೂಪತಾಳಿದೆ. 'ಜಯ ಹೇ ಕರ್ನಾಟಕ ಮಾತೆ' ಎಂಬ ನಾಡಗೀತೆಯ ಮಟ್ಟಿಗೆ ಅವರು ನಿರ್ಮತೀಯ ರಾಷ್ಟ್ರೀಯವಾದದ ಪ್ರತಿಪಾದನೆಗೆ ಮತಗಳ ಸೌಹಾರ್ದತೆಯನ್ನು ಪ್ರತಿಪಾದಿಸುತ್ತಾರೆ. ಜಾತಿ, ಮತ, ಜನಾಂಗಗಳ ಪ್ರಾತಿನಿಧ್ಯಗಳನ್ನು ರಾಷ್ಟ್ರವೆಂಬ ಕಲ್ಪಿತ ಸಮುದಾಯಕ್ಕೆ ಗತಕಾಲದಿಂದ ಜೋಡಿಸಲು ಯತ್ನಿಸುತ್ತಾರೆ.

ಮೊದಲನೆಯದಾಗಿ, ದೇಶ ಮತ್ತು ಭಾಷೆಗಳನ್ನು ಮಾತೃಸ್ವರೂಪಿಯಾಗಿ ಕಂಡು ಅವುಗಳ ನಡುವೆ ತಾಯಿ ಮತ್ತು ಮಗಳ ಕರುಳಬಳ್ಳಿಯ ಸಂಬಂಧವನ್ನು ಬೆಸೆದು ಎರಡರ ನಡುವೆ ಅವಿನಾಭಾವ ಸಂಬಂಧವನ್ನು ಕವಿತೆ ಸೃಷ್ಟಿಸುತ್ತದೆ. ದೇಶ ಮತ್ತು ಭಾಷೆಗಳನ್ನು ಮಾತೃರೂಪದಲ್ಲಿ ಕಲ್ಪಿಸಿಕೊಂಡು ಮತೀಯ ರಾಷ್ಟ್ರೀಯವಾದಕ್ಕೆ ಪ್ರೇರಣೆ ನೀಡಿದ 'ವಂದೇ ಮಾತರಂ' ಮಾದರಿಯಲ್ಲಿ ಈ ಕವಿತೆಯ ಮಟ್ಟಿಗೆ ಪರಿವರ್ತನೆ ಮಾಡುತ್ತದೆ. ದೇಶವನ್ನು ತಾಯಿಗೆ, ತಾಯಿಯನ್ನು ದೇವರಿಗೆ ಹೋಲಿಸುವ ಮಾದರಿಯ ಕವಿತೆಗಳಲ್ಲಿ ಧಾರ್ಮಿಕ ಕಾರಣಕ್ಕೆ ಮುಸ್ಲಿಂ ಸಮುದಾಯವನ್ನು ಹೊರಗಿಡುವ ತಂತ್ರವಿತ್ತು. ಆದರೆ 'ಜಯ ಹೇ ಕರ್ನಾಟಕ ಮಾತೆ'ಯಲ್ಲಿ ಎಲ್ಲರನ್ನೂ ಒಳಗೊಳ್ಳುವ ಸಾಮರಸ್ಯವಾದಿ ಚಿಂತನೆ ಇದೆ. ಎರಡನೆಯದಾಗಿ, ರಾಷ್ಟ್ರ ಮತ್ತು ರಾಜ್ಯಗಳ ಪ್ರಕೃತಿ ಸಂಪತ್ತನ್ನು ಕುರಿತಾಗಿ ಅಭಿಮಾನ ಪ್ರಕಟವಾಗುತ್ತದೆ. ಇದೂ ಕೂಡ ಮತೀಯತೆಯಿಂದ ಕಳಂಕಿತವಾಗುವುದಿಲ್ಲ. ಮೂರನೆಯದಾಗಿ, ಭಾರತದ ರಾಜಮನೆತನಗಳ ಹೆಸರು ಬರದೇ ಹೋಗಿದ್ದರೂ ಬೇರೆ ಆಯಾಮಗಳಿಂದ ಅದನ್ನು ತುಂಬಿಕೊಳ್ಳಲಾಗಿದೆ. ನಾಲ್ಕನೆಯದಾಗಿ, ಕಾವ್ಯ, ಸಂಗೀತ, ಶಿಲ್ಪಕಲೆಗಳ ಪರಂಪರೆಯನ್ನು ಸ್ಮರಿಸಲಾಗಿದೆ. ಐದನೆಯದಾಗಿ ಧಾರ್ಮಿಕ ದಾರ್ಶನಿಕ ಪಂಥಗಳ ವಿಭಿನ್ನ ಧಾರೆಗಳನ್ನು ಸಂಗಮಿಸಲಾಗಿದೆ. ಈ ಐದೂ ನೆಲೆಗಳಿಂದ ಪ್ರತಿಯೊಂದು ಜಾತಿ, ಮತ, ಪಂಥ, ಜನಾಂಗಗಳ ವಿವರಗಳನ್ನು ದಾಖಲಿಸುತ್ತ ಹೋದರೆ ಒಂದು ಮಹಾಕಾವ್ಯವೇ ಆದೀತು. ಅಖಂಡವಾಗಿ ನೋಡಿದಾಗ ಒಂದು ಬಗೆಯ ಆಂತರಿಕ ಸಮನ್ವಯತೆ ಕಂಡುಬರುತ್ತದೆ.

### ಧಾರ್ಮಿಕ ಸಾಮರಸ್ಯದ ಸ್ವರೂಪ

''ಸೆಕ್ಯುಲರ್ ಅಂದರೆ ಧರ್ಮರಹಿತ, ಮತರಹಿತ, ಚಾರ್ವಾಕ ಅಥವಾ ನಾಸ್ತಿಕ ಎಂದೇನೂ ಅಲ್ಲ. ಎಲ್ಲ ಧರ್ಮಗಳೂ ಎಲ್ಲ ದೃಷ್ಟಿಗಳೂ ಎಲ್ಲ ಆಚಾರ, ಆರಾಧನೆಗಳೂ ಪರಸ್ಪರ ಗೌರವದಿಂದ ಪರಸ್ಪರ ವಿಶ್ವಾಸದಿಂದ ದಾರಿಗಳು ಬೇರೆ ಬೇರೆಯಾದರೂ ಸರ್ವರಿಗೂ ಏಕವಾದ ಭಗವತ್ ತತ್ವದ ಕಡೆಗೆ ಸಾಗುವುದು'' ಎಂಬುದು ಕುವೆಂಪು ಅವರ ಧರ್ಮನಿರಪೇಕ್ಷತೆಯ ಪರಿಕಲ್ಪನೆ. ಅದನ್ನವರು 'ಧರ್ಮ ಸಮನ್ವಯ' ಎಂದು ಕರೆಯುತ್ತಾರೆ. ಇಂಥ ಧರ್ಮ ಸಮನ್ವಯ ಈ ನಾಡಗೀತೆಯ ಆತ್ಯಂತಿಕ ತಿರುಳಾಗಿದೆ :

*ಸರ್ವಜನಾಂಗದ ಶಾಂತಿಯ ತೋಟ*
*ರಸಿಕರ ಕಂಗಳ ಸೆಳೆಯುವ ನೋಟ*
*ಹಿಂದೂ ಕ್ರೈಸ್ತ ಮುಸಲ್ಮಾನ*
*ಪಾರಸಿಕ ಜೈನರುದ್ಯಾನ*

ಆದರ್ಶಮಯ ಧಾರ್ಮಿಕ ಸಾಮರಸ್ಯದ ಸುಂದರ ಚಿತ್ರವನ್ನು ಕವಿತೆ ಬಿಡಿಸುತ್ತದೆ. ಈ ಶಿಷ್ಟ ಧರ್ಮಗಳನ್ನು ಮಾತ್ರ ನೆನೆಯದೆ ಕಪಿಲ, ಪತಂಜಲಿ, ಗೌತಮ, ಜಿನ, ನಾನಕ, ರಮಾನಂದ, ಕಬೀರ, ಚೈತನ್ಯ, ಪರಮಹಂಸ, ವಿವೇಕಾನಂದ ಮೊದಲಾದ ಅವೈದಿಕ ಹಿಂದೂ -ಮುಸ್ಲಿಮ್ ಸಂಕರಿತ ಹಾಗೂ ಸೌಹಾರ್ದತಾವಾದಿ ಧಾರ್ಮಿಕ, ದಾರ್ಶನಿಕ ಪರಂಪರೆಗಳನ್ನು ಸೇರಿಸುತ್ತದೆ. ಇಡೀ ಕವಿತೆಯನ್ನು ಸಾಮರಸ್ಯದ ನಿಲುವು ಮುನ್ನಡೆಸಿದೆ. ''ಕನ್ನಡದಂಥ ನಿಜರೂಪದ ಪ್ರಾಂತೀಯ ಭಾಷೆ ತನ್ನೆಲ್ಲ ಆಯಾಮಗಳಲ್ಲಿ ಬೆಳೆದು ನಿಲ್ಲುವುದು ಇತರ ಪ್ರಾಂತೀಯ ಭಾಷೆಗಳೂ ಸಹಮತದಲ್ಲಿದ್ದು ತಮ್ಮ ಉನ್ನತಿಯನ್ನು ಸಾಧಿಸಿದಾಗ ಮಾತ್ರ. ಈ ಬಹುಮುಖತೆಯ ಭಾರತದಲ್ಲಿ ಆದಿಕಾಲದಿಂದಲೂ ಬೆಳೆಸಿಕೊಂಡುಬಂದ ಪರಿಕಲ್ಪನೆ. ಆದ್ದರಿಂದ ಅವರು ಇಡೀ ದೇಶಕ್ಕೆ ಏಕಭಾಷೆ, ಏಕಮತ, ಏಕದೃಷ್ಟಿಯನ್ನು ರಾಷ್ಟ್ರೀಯತೆಯ ಹಿನ್ನೆಲೆಯಲ್ಲಿ ತಿರಸ್ಕರಿಸುತ್ತಾರೆ.'' ಅವರು ಬಯಸಿದಂತೆ 'ಠಾಕೂರ ಮಾದರಿ' ಹಾಗೂ 'ಬೆರಕೆ ಸಂಸ್ಕೃತಿ' ಅವರ ನಾಡಗೀತೆಯ ಗುಣಗಳಾಗಿವೆ.

ಕುವೆಂಪು ಪ್ರತಿಪಾದಿಸಿದ 'ಸರ್ವಜನಾಂಗದ ಶಾಂತಿಯ ತೋಟ'ದ ಆದರ್ಶ, ಸಾಮರಸ್ಯ ಆ ಕಾಲದಲ್ಲಿಯೂ ಇರಲಿಲ್ಲ, ಈಗೂ ಇಲ್ಲ. ಇಪ್ಪತ್ತನೆಯ ಶತಮಾನದ ಆರಂಭದ ದಶಕಗಳಲ್ಲಿ ಬ್ರಿಟಿಷರ ಒಡೆದಾಳುವ ನೀತಿ ಹಾಗೂ ಹಿಂದೂ-ಮುಸ್ಲಿಂ ಕೋಮುವಾದ ಮೂಲಭೂತ ವಾದಗಳ ಬೆಳವಣಿಗೆಯಿಂದ ಭಾರತೀಯ ಬದುಕು ಮತೀಯ ದ್ವೇಷ ಹಾಗೂ ಹಿಂಸೆಗಳಿಂದ ತುಂಬಿ ತುಳುಕುತ್ತಿತ್ತು, ಆ ಕಾಲದ ನೋವಿಗೆ ಕವಿ ಪರಿಹಾರರೂಪವಾಗಿ ಸಾಮರಸ್ಯದ ಸುಂದರ ಕನಸನ್ನು ಹೆಣೆದಿದ್ದಾರೆ. ಭವಿಷ್ಯದ ಬದುಕಾದರೂ ನೆಮ್ಮದಿಯನ್ನು ಪಡೆಯಲಿ ಎಂಬ ಸದಾಶಯ ಇಲ್ಲಿದೆ.




ಕುವೆಂಪು ಅವರ ನಾಡಗೀತೆಯಲ್ಲಿ ಕೆಲವು ಲೋಪಗಳು ಹಾಗೇ ಉಳಿದುಕೊಂಡಿವೆ. ದಲಿತರು, ಬುಡಕಟ್ಟು ಜನಾಂಗ ಮತ್ತು ಮಹಿಳೆಯರ ಪರಂಪರೆಗಳ ಪ್ರಸ್ತಾಪ ಬರುವುದಿಲ್ಲ. ಗ್ರಾಮೀಣಲೋಕ ಕಣ್ಮರೆಯಾಗಿದೆ. ಹೆಚ್ಚಿನ ಪ್ರಮಾಣದಲ್ಲಿ ಆಳುವ ವರ್ಗ, ಶಿಷ್ಟ ವರ್ಗ ಹಾಗೂ ಅವುಗಳ ಸುತ್ತಲಿನ ಜಗತ್ತು ಮೈದಾಳಿದಂತೆ ಭಾಸವಾಗುತ್ತದೆ. ರಾಷ್ಟ್ರದ ಎಲ್ಲ ಸಂಸ್ಕೃತಿಗಳನ್ನು ಒಳಗೊಂಡು ರಾಷ್ಟ್ರಗೀತೆ ಬರೆಯಹೊರಡುವ ಕುವೆಂಪು ಅವರಿಗೆ ಈ ಉಳಿದ ಲೋಕಗಳು ಹಕ್ಕೊತ್ತಾಯವನ್ನು ಮಂಡಿಸುತ್ತವೆ.

### ಸರಕಾರಿ ನಾಡಗೀತೆ ಮತ್ತು ಮಧ್ವರ ಹೆಸರು

೨೦೦೩ರಲ್ಲಿ ಕರ್ನಾಟಕ ಸರಕಾರವು ಕುವೆಂಪು ಅವರ 'ನಾಡಗೀತೆ'ಯನ್ನು ಅಧಿಕೃತವಾಗಿ 'ನಾಡಗೀತೆ' ಎಂದು ಒಪ್ಪಿಕೊಂಡಾಗ ಅದರಲ್ಲಿ ಮಧ್ವಾಚಾರ್ಯರ ಹೆಸರನ್ನು ಸೇರಿಸುವ ಪ್ರಯತ್ನ ನಡೆಯಿತು. ನಾಡಗೀತೆಯಲ್ಲಿ ಮಧ್ವರ ಹೆಸರು ಸೇರಿಸಬೇಕೆಂದು ಕುವೆಂಪು ಅವರ ಹತ್ತಿರ ಬಂದವರೇನೂ ಬ್ರಾಹ್ಮಣರಾಗಲೀ, ಮಧ್ವ ಮತಾನುಯಾಯಿಗಳಾಗಲೀ ಅಲ್ಲ. ಅವರ ಚಿತಾವಣೆಯಿಂದ ಪ್ರಭಾವಿತಗೊಂಡು ಹಲವು ಮತಮೂಢ ಶೂದ್ರರೇ ಮುಂದಾಗಿದ್ದು, ತಾವು ಯಾರ ಪರವಾಗಿ ದನಿ ಎತ್ತಿದರೋ ಅವರೇ ಈ ರೀತಿ ವರ್ತಿಸುವುದನ್ನು ಕಂಡು ಕುವೆಂಪು ಏನಾದರೂ ಮಾಡಿಕೊಳ್ಳಿ ಎಂದು ಹೇಳಿಕಳಿಸಿದರೇ ಹೊರತು, ಅದರ ತಿದ್ದುಪಡಿಗಳನ್ನು ತಾವೇ ಮಾಡಿಕೊಟ್ಟರೆಂಬುದು, ಅದಕ್ಕೆ ಅವರ ಸಮ್ಮತಿ ಇತ್ತೆಂಬುದು ಶುದ್ಧ ಸುಳ್ಳು, ಎಂಬ ಕೆ. ಪಿ. ಪೂರ್ಣಚಂದ್ರ ತೇಜಸ್ವಿಯವರ ಮಾತು, ಇಡೀ ಘಟನೆಯ ಸುತ್ತಲಿನ ಮತೀಯ ಚಿಂತನೆಗಳನ್ನು ಸ್ಪಷ್ಟಪಡಿಸುತ್ತದೆ. ಎಂ. ಚಿದಾನಂದಮೂರ್ತಿಯಂಥ ಸಂಶೋಧಕರು ಮಧ್ವರ ಹೆಸರನ್ನೊಳಗೊಂಡ ಆವೃತ್ತಿಯನ್ನೇ ಅಧಿಕೃತ ಆವೃತ್ತಿ ಎಂದು ಹೇಳಿದ್ದು ಅವರು ಗುರುತಿಸಿಕೊಂಡಿರುವ ಚಿಂತನಾ ಕ್ರಮಕ್ಕೆ ತಕ್ಕ ಹಾಗೇ ಇದೆ.

ಕುವೆಂಪು ಅವರು ತಮ್ಮದೊಂದು ಗೀತೆ ನಾಡಗೀತೆಯಾಗುವುದಾದರೆ ಪರಿಷತ್ತು ಬೇಕಾದಂತೆ ಬೇಕಾದಷ್ಟು ಸಂಗ್ರಹಿಸಲು ಅನುಮತಿ ನೀಡುವುದು ಹಾಗೂ ತಾವು ಕಠೋರವಾಗಿ ವಿರೋಧಿಸಿದ ಮಧ್ವಾಚಾರ್ಯರು ನಾಡಗೀತೆಯಲ್ಲಿ ಅವತರಿಸಿದರೂ ಒಪ್ಪಿಕೊಳ್ಳುವುದು ಅವರ ನಿರಂಕುಶಮತಿ ಕವಿತ್ವಕ್ಕೆ ಹೊಂದಿಕೆಯಾಗುವಂಥದ್ದಲ್ಲ. ಇಂಥ ಸಣ್ಣಪುಟ್ಟ ವೈರುಧ್ಯಗಳ ಮಧ್ಯದಲ್ಲಿಯೇ ದೊಡ್ಡ ಕವಿಗಳು ಬೆಳೆಯುತ್ತಾರೆ. ವಿವಾದಗಳು, ಮಿತಿಗಳು ಏನೇ ಇದ್ದರೂ, ಕರ್ನಾಟಕದ ಮಟ್ಟಿಗೆ ಕುವೆಂಪುರವರ 'ಜಯ ಹೇ ಕರ್ನಾಟಕ ಮಾತೆ'ಯಂಥ ಸಾಮರಸ್ಯವಾದಿ ರಾಷ್ಟ್ರೀಯತೆ ಹಾಗೂ ಕನ್ನಡತ್ವಗಳನ್ನು ಪ್ರತಿಪಾದಿಸುವ ಕವಿತೆ ಇನ್ನೊಂದಿಲ್ಲ.

### ಅಭಿವ್ಯಕ್ತಿ ವಿಧಾನ ಉದ್ದೇಶಪೂರ್ವಕ ರಚನೆ ಮತ್ತು ಕಾವ್ಯಾತ್ಮಕತೆ

ಕುವೆಂಪು ಅವರ 'ಜಯ ಹೇ ಕರ್ನಾಟಕ ಮಾತೆ' ಒಂದು ಉದ್ದೇಶಪೂರ್ವಕ ರಚನೆ. ನಿರ್ಮತೀಯ ರಾಷ್ಟ್ರೀಯತೆಯನ್ನೊಳಗೊಂಡ, ಸಾಮರಸ್ಯವನ್ನು ಪ್ರತಿಪಾದಿಸುವ ರಾಷ್ಟ್ರಗೀತೆಯೊಂದನ್ನು ಠಾಕೂರ್ ಅವರ ಮಾದರಿಯಲ್ಲಿ ರಚಿಸಿದ್ದಾರೆ. ಕೆಲವು ವಿಚಾರಗಳನ್ನು ಪ್ರತಿಪಾದಿಸಲು ಹುಟ್ಟುವ ಉದ್ದೇಶಪೂರ್ವಕ ರಚನೆಗಳು ಕವಿಯೊಬ್ಬನ ಗಾಢವಾದ ಧ್ಯಾನದಲ್ಲಿ ಸಂವೇದನೆಗಳಾಗಿ ಪರಿವರ್ತನೆ ಹೊಂದದಿದ್ದರೆ ಕವಿತೆಯಾಗದೇ ಪ್ರಣಾಳಿಕೆ ಸ್ವರೂಪದ ಬರಹಗಳಾಗುವ ಅಪಾಯ ಇದ್ದೇ ಇರುತ್ತದೆ. ವಿಚಾರ ಪ್ರತಿಪಾದಕ ಕವಿ, ಆಗ ಹಲವು ಮಾರ್ಗಗಳನ್ನು ಶೋಧಿಸಿಕೊಳ್ಳಬೇಕಾಗುತ್ತದೆ. ಕುವೆಂಪು ಅವರು ಇಲ್ಲಿ ಲಯಗಾರಿಕೆಯನ್ನು, ಕಲ್ಪನಾಶೀಲತೆಯನ್ನು, ಸಾಂಸ್ಕೃತಿಕ ಸಾಂಕೇತಿಕತೆಯನ್ನು ಮಾರ್ಗವಾಗಿ ಕಂಡುಕೊಂಡಿದ್ದಾರೆ. ಯಾವ ವಿಚಾರಗಳನ್ನು ಕಾವ್ಯದಲ್ಲಿ ಪ್ರತಿಪಾದನೆ ಮಾಡಬೇಕೆಂದು ಕವಿ ಬಯಸುತ್ತಾನೋ ಅವುಗಳನ್ನು ಗಾಢವಾಗಿ ಅನುಭವಿಸುವುದರಿಂದ, ಧ್ಯಾನಸ್ಥ ಸ್ಥಿತಿಯಲ್ಲಿ ಸಂವೇದನೆಗಳನ್ನಾಗಿ ಪರಿವರ್ತಿಸುವುದರಿಂದ ಅವುಗಳಿಗೊಂದು ಕಾವ್ಯಾತ್ಮಕತೆಯನ್ನು ಧಾರೆ ಎರೆಯಬಹುದೆಂಬುದಕ್ಕೆ 'ಜಯ

ಹೇ ಕರ್ನಾಟಕ ಮಾತೆ' ಒಂದು ಉದಾಹರಣೆಯಾಗಿದೆ.

**ಸೌಹಾರ್ದತೆಯ ಆಶಯ ಹಾಗೂ ಕವಿತೆಯ ಅಭಿವ್ಯಕ್ತಿ**

ಕಾವ್ಯದ ಶಕ್ತಿಯೇ ಅಂಥದ್ದು, ಒಮ್ಮೆ ಪದ ಒಂದು ಕವಿತೆಯ ಆವರಣದೊಳಗೆ ಹೆಜ್ಜೆ ಇಟ್ಟರೆ ತನ್ನ ಮೂಲರೂಪವನ್ನು ಕಳೆದುಕೊಂಡು ಅಥವಾ ಅದನ್ನೂ ಉಳಿಸಿಕೊಂಡು ಮತ್ತೆ ಹಲವು ಹೊಸ ಅರ್ಥ, ಧ್ವನಿ, ಸಂಕೇತಗಳನ್ನು ಧಾರಣ ಮಾಡಿಕೊಳ್ಳುತ್ತದೆ. ಈ ಧಾರಣ ಕ್ರಿಯೆ ಮೂಲಭೂತವಾಗಿ ಭಾಷೆಗೆ, ಕಾವ್ಯಕ್ಕೆ ಸ್ವತಂತ್ರವಾಗಿ ಸಂಬಂಧಿಸಿದ್ದಲ್ಲ. ಅದು ಕವಿತೆಯ ಕಾಲಮಾನದ ಮೌಲ್ಯಗಳು, ಆದರ್ಶಗಳು, ವಾಸ್ತವಗಳು, ಸಂಘರ್ಷಗಳು, ವೈರುಧ್ಯಗಳನ್ನು ಹಾಗೂ ಕವಿಯ ವೈಯಕ್ತಿಕ ಸಂವೇದನಾಶೀಲತೆಯ ವಿಧಾನ, ವೈಚಾರಿಕ ದೃಷ್ಟಿಕೋನ, ಪ್ರತಿಭಾ ಸಾಮರ್ಥ್ಯಗಳನ್ನು ಅವಲಂಬಿಸಿರುತ್ತದೆ. ಕವಿ-ಸಮಾಜ-ಭಾಷೆ ಹಾಗೂ ಕವಿತೆಯ ರೂಪದ ಏಕೀಕರಣವೇ ಕಾವ್ಯ. ಈ ಏಕೀಕರಣದಲ್ಲಿ ಪ್ರತಿಯೊಂದು ಘಟಕಕ್ಕೂ ತನ್ನದೇ ಆದ ಪಾತ್ರವಿರುತ್ತದೆ. ಕವಿಯ ದೃಷ್ಟಿಕೋನ ಮತ್ತು ಸಾಮಾಜಿಕ ವಾಸ್ತವಗಳು ಕಾವ್ಯದ ಅಭಿವ್ಯಕ್ತಿಯಾದ ಭಾಷೆ ಲಯ ಮತ್ತು ರೂಪಗಳನ್ನು ತೀರ್ಮಾನಿಸುತ್ತವೆ. 'ಜಯ ಹೇ ಕರ್ನಾಟಕ ಮಾತೆ'ಯ ರಚನೆಗೆ ಅದರ ಅಭಿವ್ಯಕ್ತಿಗೆ ಕಾರಣವಾಗಿರುವುದು ಮತೀಯತೆಯಿಂದ ಕಲುಷಿತಗೊಂಡ ೧೯೨೦ರ ದಶಕದ ಭಾರತದ ಬದುಕು. ಸೌಹಾರ್ದತೆ ಕವಿಯ ದೃಷ್ಟಿಕೋನ. ಈ ಎರಡೂ ಒತ್ತಡದಲ್ಲಿ ರೂಪತಾಳುವಾಗ ಕವಿತೆ ಸಹಜವಾಗಿಯೇ ಮತೀಯ ನೆಲೆಗಳ ನಿರಾಕರಣೆಯೊಂದಿಗೆ ಸೌಹಾರ್ದತೆಯ ನೆಲೆಗಳನ್ನು ಶೋಧಿಸುತ್ತ ಒಳಗೊಳ್ಳುತ್ತ ಹೋಗುತ್ತದೆ. ಸಮಾನತೆಯ ಮೌಲ್ಯ ಸೌಹಾರ್ದತೆಗೆ ಅಡಿಪಾಯವಾಗಿ ಬಹು ಸಂಸ್ಕೃತಿ ಬಹು ಜನಾಂಗ ಬಹು ಹಿತಾಸಕ್ತಿಗಳನ್ನು ಒಳಗೊಳ್ಳಲು ಸಾಧ್ಯವಾಗುತ್ತದೆ.

**ಬರಿ ಹೆಸರಿನ ಪಟ್ಟಿಯಲ್ಲ; ಹಲವು ಸಾಂಸ್ಕೃತಿಕ ಧಾರೆಗಳ ಸಂಕೇತ ಮತ್ತು ರೂಪಕಗಳು**

ಕುವೆಂಪು ಅವರ ನಾಡಗೀತೆಯನ್ನು ಕುರಿತಾಗಿ ಆಗಾಗ ಚರ್ಚೆಗಳು ನಡೆಯುತ್ತಿರುತ್ತವೆ. ಇತ್ತೀಚೆಗೆ ಡಾ|| ಎಂ. ಎಂ. ಕಲಬುರ್ಗಿಯವರು ವಿಚಾರಸಂಕಿರಣ ಒಂದರಲ್ಲಿ ಈ ನಾಡಗೀತೆಯಲ್ಲಿ ಬರಿ ಹೆಸರಿನ ಪಟ್ಟಿ ಇದೆ ಎಂದು ಹೇಳಿಕೆ ನೀಡಿದ್ದು ವರದಿಯಾಗಿತ್ತು. ಕಾವ್ಯವನ್ನು ಕೇವಲ ರಸಾನುಭವದ ಸಾಂಪ್ರದಾಯಿಕ ನೆಲೆಯಿಂದ ಗ್ರಹಿಸುವ ಮನಸ್ಥಿತಿಗೆ ಅದು ಹಾಗೇ ಕಾಣಿಸಬಹುದು. ಕವಿಯ ಕಾಲದ ಸಾಂಸ್ಕೃತಿಕ ರಾಜಕಾರಣದಿಂದ ಕವಿತೆಯನ್ನು ಹೊರಗಿಟ್ಟು ನೋಡಿದರೆ ಅದು ಹೆಸರಿನ ಪಟ್ಟಿಯಾಗಿಯೂ, ಸರಳ ಮಕ್ಕಳ ಹಾಡಾಗಿಯೂ ಕಂಡೀತು. ಆಧುನಿಕ ರಾಷ್ಟ್ರವೊಂದು ರೂಪುಗೊಳ್ಳುತ್ತಿರುವಾಗ, ಅಸಂಖ್ಯ ಪ್ರಾತಿನಿಧ್ಯಗಳ ನಡುವೆ ಅವೂ ರಾಷ್ಟ್ರದ ಒಳಸೇರುವ ವಿಷಯದಲ್ಲಿ ಸಂಘರ್ಷಗಳು ನಡೆಯುತ್ತಿರುವಾಗ, ಆ ಸಂಘರ್ಷಗಳನ್ನೆಲ್ಲ ಒಟ್ಟಾಗಿಸಿ ವಸಾಹತುಶಾಹಿ ವಿರುದ್ಧದ ಹೋರಾಟವಾಗಿ ರೂಪಿಸುವ ಗಂಭೀರ ಸಾಂಸ್ಕೃತಿಕ ರಾಜಕಾರಣದ ಭಾಗವಾಗಿ ಕುವೆಂಪು ಅವರ ಕವಿತೆ ರಚನೆಗೊಂಡಂತಿದೆ. ಈ ಸಾಂಸ್ಕೃತಿಕ ರಾಜಕಾರಣದ ನೆಲೆಯಿಂದ ನೋಡಿದರೆ ಕವಿತೆಯಲ್ಲಿ ವ್ಯಕ್ತವಾದ ಪ್ರತಿಯೊಂದು ಪದವೂ ಭಾರತದಲ್ಲಿ ನಡೆದುಬಂದ ಅಸಂಖ್ಯ ರಾಜಕೀಯ, ಸಾಂಸ್ಕೃತಿಕ, ಕಲಾತ್ಮಕ, ಸಾಮಾಜಿಕ, ಧಾರ್ಮಿಕ, ದಾರ್ಶನಿಕ ಪರಂಪರೆಗಳನ್ನು ಧ್ವನಿಸುತ್ತದೆ. ಹಲವು ಹಳ್ಳಗಳು ಸೇರಿ ನದಿಯಾದಂತೆ ಈ ನಾಡಗೀತೆಯಲ್ಲಿ ಹಲವು ಧಾರೆಗಳು ಸೇರಿ ರಾಷ್ಟ್ರೀಯತೆಯನ್ನು ನಿರ್ವಚಿಸುತ್ತವೆ. ಶಂಕರ, ರಾಮಾನುಜ, ವಿದ್ಯಾರಣ್ಯ, ಬಸವೇಶ್ವರ, ರನ್ನ, ಷಡಕ್ಷರಿ, ಪಂಪ, ಲಕುಮಿಪತಿ, ತೈಲಪ, ಹೊಯ್ಸಳ, ಡಂಕಣ, ಜಕಣ, ನಾನಕ, ರಮಾನಂದ, ಕಬೀರ, ಕಪಿಲ, ಪತಂಜಲಿ, ಗೌತಮ, ಜಿನ, ಪರಮಹಂಸ, ವಿವೇಕಾನಂದ, ಚೈತನ್ಯ, ಕೃಷ್ಣೆ, ಶರಾವತಿ, ತುಂಗೆ, ಕಾವೇರಿ, ಇತ್ಯಾದಿಗಳು ನಾಡಗೀತೆಯ ಸಂದರ್ಭದಲ್ಲಿ ಕೇವಲ ಹೆಸರುಗಳೆಂದು ಭಾವಿಸುವುದಾದರೆ ಅದು ಕಾವ್ಯಾನುಸಂಧಾನದ ಸಮಸ್ಯೆ ಎಂದೇ ಪರಿಗಣಿಸಬೇಕಾಗುತ್ತದೆ. ಒಂದೊಂದು ಹೆಸರೂ ಒಂದೊಂದು ಪರಂಪರೆಯ ಸಂಕೇತವಾಗಿದೆ.

**ಸೌಹಾರ್ದತೆಯ ಸುಂದರ ಚಿತ್ರ**

ಕವಿತೆಯ ಒಟ್ಟು ರಚನೆಯನ್ನು ಸೂಕ್ಷ್ಮವಾಗಿ ಗಮನಿಸಿದರೆ ಇಲ್ಲಿ ಹಲವಾರು ಸಾಂಸ್ಕೃತಿಕ ಧಾರೆಗಳ ಸಮಾಗಮವಿದೆಯೆಂದು ತೋರುವುದರೊಂದಿಗೆ ಇಡೀ ಕವಿತೆಯನ್ನು ಮತೀಯ ಸೌಹಾರ್ದತಾ ಚಿಂತನೆಯೇ ಮುನ್ನಡೆಸಿದಂತೆ ತೋರುತ್ತದೆ.

'ರಾಘವ ಮಧುಸೂಧನರವತರಿಸಿದ', 'ಕಪಿಲ ಪತಂಜಲ ಗೌತಮ ಜಿನನುತ', 'ನಾನಕ ರಮಾನಂದ ಕಬೀರರ', 'ಚೈತನ್ಯ ಪರಮಹಂಸ ವಿವೇಕರ', ಹೀಗೆ ಪ್ರತಿಯೊಂದು ಪ್ಯಾರಾದ ಕೊನೆಗೆ ಕವಿ ಹಲವು ಧಾರ್ಮಿಕ, ದಾರ್ಶನಿಕ ಪರಂಪರೆಗಳ ಸಮ್ಮಿಳನಗೊಂಡಿರುವ ಭಾರತಾಂಬೆಯ ತನುಜೆಗೆ ಜಯವಾಗಲಿ ಎಂದು ಹಾರೈಸುತ್ತಾರೆ.




ಈಗತಾನೇ ಹುಟ್ಟಿದ ಮಗು
ನಗುತ ಮರಣವನು ಅಣಕಿಸುತ್ತಿದೆ
ಮುಷ್ಟಿಯನು ಬಿಗಿಹಿಡಿದು ಮಗು
ಮರಣದ ಮೇಲೆ ಸಮರ ಸಾರುತ್ತಿದೆ
ಜೀವನ ಸಂಕ್ಷಿಪ್ತಗೊಂಡು ಮುಗಿದಂತೆ
ಮಗು ಮತ್ತೆ ಅದನು ವಿಸ್ತರಿಸುವುದು
ಅಂತ್ಯದಲಿ ಆದಿಯ ಪ್ರತೀಕ ಮಗು
ಮತ್ತೆ ಆದಿಗೆ ಹಿಂದಿರುಗುವುದೇ
ಮಗುವಿನ ಹಾದಿ

**ಜಂಬಣ್ಣ ಅಮರಚಿಂತ**
ಸಂಖ್ಯೆ ೮-೧೧(೮)೭೯೬, ವಿದ್ಯಾನಗರ
ರಾಯಚೂರು - ೫೮೪೧೦೩

ಉಳಿದೆಲ್ಲ ಸಂಗತಿಗಳು ಈ ಅಂತ್ಯದಲ್ಲಿ ಮಿಲನಗೊಳ್ಳುತ್ತವೆ. ಕವಿತೆಯನ್ನು ಅಂತ್ಯಗೊಳಿಸುವಲ್ಲಿ ಕೂಡ ಕವಿ 'ಸರ್ವಮತ ಸರ್ವಜನಾಂಗಗಳ ಶಾಂತಿಯ ತೋಟ' ಎಂಬ ಸುಂದರ ಸೌಹಾರ್ದತೆಯ ಚಿತ್ರದಲ್ಲಿ ಹಿಂದಿನ ಎಲ್ಲ ಧಾರೆಗಳನ್ನೂ ಮಿಳಿತಗೊಳಿಸುತ್ತಾರೆ. ಕವಿತೆಯ ಆತ್ಯಂತಿಕ ಆಶಯ ರಾಷ್ಟ್ರದ ಆತ್ಯಂತಿಕ ಆಶಯವಾದ ಮತೀಯ ಸೌಹಾರ್ದತೆಯೇ ಆಗಿದೆ. ಹೀಗೆ ಕವಿಯ ಸಾಂಸ್ಕೃತಿಕ ರಾಜಕಾರಣ ಕೇವಲ ಅವನ ಆಶಯಗಳಲ್ಲಿ ಮಾತ್ರ ವ್ಯಕ್ತವಾಗದೇ ಕವಿತೆಯ ರಚನಾ ವಿನ್ಯಾಸದಲ್ಲಿಯೂ ಅಡಕವಾಗಿರುತ್ತದೆ.

**ಆವೇಶವಿಲ್ಲದ ತೀವ್ರ ಭಾವುಕತೆ**

ಕುವೆಂಪು ಅವರ 'ಪಾಂಚಜನ್ಯ', 'ಕ್ರಾಂತಿಕಾಳಿ', 'ವಿಪ್ಲವಮೂರ್ತಿ' ಮೊದಲಾದ ಕವಿತೆಗಳ ಲಯಗಾರಿಕೆಗೂ 'ಜಯ ಹೇ ಕರ್ನಾಟಕ ಮಾತೆ' ಕವಿತೆಯ ಲಯಗಾರಿಕೆಗೂ ವ್ಯತ್ಯಾಸವಿದೆ. ಅವುಗಳಲ್ಲಿ ಕಂಡುಬರುವ ಆವೇಶ, ರೊಚ್ಚು ಇಲ್ಲಿಲ್ಲ. ಅವು ವಸಾಹತುಶಾಹಿ ವಿರೋಧಿ ಹೋರಾಟಕ್ಕೆ ಕರೆಕೊಡುವ ಗೀತೆಗಳು. ಆದರೆ ಈ ಕವಿತೆ ರಾಷ್ಟ್ರದ ಸಮಸ್ತರನ್ನೂ ಒಳಗೊಳ್ಳುವ, ಸಮಸ್ತರ ಭಾವವಾಹಿನಿಯಾಗುವ ಆಶಯವನ್ನು ಹೊಂದಿದೆ. ಮೇಲಾಗಿ ಜಾತಿ-ಮತ ಪಂಥಗಳ ಸಂಘರ್ಷವನ್ನು ಒಳಗೊಂಡಿಲ್ಲ. ಮತೀಯ ಆವರಣ ಪ್ರಾಪ್ತವಾದ ಕವಿತೆ ಆವೇಶಕ್ಕೊಳಗಾಗುತ್ತದೆ. ನಿರ್ಮತೀಯ ಸಾಮರಸ್ಯದ ಆವರಣದಲ್ಲಿ ಆವೇಶಕ್ಕಿಂತ ತೀವ್ರತೆ ಮುಖ್ಯವಾಗುತ್ತದೆ. ಸರ್ವಜನಾಂಗವೂ ಒಂದಾಗುವ ತೀವ್ರತೆ, ಜತೆಗೆ ಒಂದಾಗಿ ಐಕ್ಯತೆಯ ಭಾವವನ್ನು ಅನುಭವಿಸುವ ತೀವ್ರತೆ 'ವಂದೇ ಮಾತರಂ'ನಿಂದ ಪ್ರಭಾವಿತ ಕನ್ನಡ ಕಾವ್ಯದ ಆವೇಶ ಹಾಗೂ ಮತೀಯತೆ ಹಾಗೂ 'ಜನಗಣಮನ'ದಿಂದ ಪ್ರಭಾವಿತವಾದ ಕನ್ನಡ ಕಾವ್ಯದ ಸಮಾಧಾನ ಚಿತ್ತ ಮತ್ತು ಭಾವ ತೀವ್ರತೆಗಳ ನಡುವಿನ ವ್ಯತ್ಯಾಸಗಳನ್ನು ಅಧ್ಯಯನ ಮಾಡಲು ಕುವೆಂಪು ಅವರ ಕಾವ್ಯವೇ ಒಂದು ದೊಡ್ಡ ಆಕರವಾಗುತ್ತದೆ. 'ಜಯ ಹೇ ಕರ್ನಾಟಕ ಮಾತೆ' ಕವಿತೆಯಲ್ಲಿ ದೇಶ, ನಾಡು, ನುಡಿ, ಸಂಸ್ಕೃತಿಗಳನ್ನು ಕುರಿತಾಗಿ ಅಪ್ರತಿಮ ಪ್ರೀತಿ, ಭಕ್ತಿಗಳಿದ್ದರೂ ಹುಚ್ಚು ಆವೇಶಕ್ಕೆ ಅವಕಾಶವಿಲ್ಲ.

**ಡಾ|| ಎಂ. ಡಿ. ಒಕ್ಕುಂದ**
ನಂ. ೧೫೪, ''ನೆಮ್ಮದಿ'', ಸಿ.ಐ.ಟಿ.ಬಿ. ಕಾಲೋನಿ, ಶ್ರೀನಗರ, ಧಾರವಾಡ - ೫೮೦ ೦೦೩

# ಅಮೆರಿಕದ ಆರ್ಥಿಕತೆ ಇನ್ನೂ ಡೋಲಾಯಮಾನ ಸ್ಥಿತಿಯಲ್ಲಿ




**ಮ**ಹಾ ಆರ್ಥಿಕ ಕುಸಿತದಿಂದ ತಕ್ಕಮಟ್ಟಿಗೆ ಚೇತರಿಸಿಕೊಂಡಿದ್ದರೂ ಅಮೆರಿಕದ ಆರ್ಥಿಕ ಪರಿಸ್ಥಿತಿ ಇನ್ನೂ ಆತಂಕಕಾರಿಯಾಗಿಯೇ ಇದೆ. ಮುಖ್ಯವಾಗಿ ನಿರುದ್ಯೋಗದ ಸಮಸ್ಯೆ ಗಂಭೀರವಾಗಿದ್ದು ಸುಮಾರು ೯.೭೫ರ ಮಟ್ಟದಲ್ಲಿಯೇ ಇದೆ. ಇನ್ನೊಂದು ಕಳವಳಕಾರಿ ಸಂಗತಿ ಎಂದರೆ ಅಮೆರಿಕದ ಫೆಡರಲ್ ಸರಕಾರದ ಸಾಲದ ಸಮಸ್ಯೆ. ಈಚೆಗೆ ಅಮೆರಿಕದ ಕಾಂಗ್ರೆಸ್ ಮತ್ತು ಸೆನೇಟ್‌ಗಳಲ್ಲಿ ವಾರಗಟ್ಟಳೆ ಚರ್ಚೆ, ಜುಗ್ಗಾಟಗಳಾದ ಮೇಲೆ ಸಾಲದ ಪ್ರಮಾಣವನ್ನು ಕಡಿಮೆಮಾಡಲು ಒಪ್ಪಂದಕ್ಕೆ ಬರಲಾಯಿತು. ಅಧ್ಯಕ್ಷ ಒಬಾಮ ನೇತೃತ್ವದ ಸರಕಾರ ಸಾಲದ ಸಮಸ್ಯೆ ಬಗ್ಗೆ ಒಪ್ಪಂದಕ್ಕೆ ಬರಲು ಹರಸಾಹಸಪಡಬೇಕಾಯಿತು. ಈಗ ಅಂಗೀಕಾರವಾಗಿರುವ ಸಾಲದ ಕರಾರಿನ ಮೂಲಕ ಮುಂದಿನ ಹತ್ತು ವರ್ಷಗಳಲ್ಲಿ ಬಜೆಟ್ ಕೊರತೆಯನ್ನು ವರ್ಷಕ್ಕೆ ೨.೧ ಮಿಲಿಯ ಡಾಲರುಗಳಷ್ಟು ತಗ್ಗಿಸಬೇಕು. ಇದನ್ನು ಆಡಳಿತದ ಖರ್ಚನ್ನು ಕಡಿತಮಾಡುವುದರ ಮೂಲಕ ಸಾಧಿಸಬೇಕು. ಕಾರ್ಪೊರೇಟ್ ಸಂಸ್ಥೆಗಳ ಮೇಲೆ ತೆರಿಗೆ ಹೆಚ್ಚಿಸುವ ಅಧ್ಯಕ್ಷ ಒಬಾಮಾ ಸೂಚನೆಗೆ ರಿಪಬ್ಲಿಕನ್ನರು ಬಹುಮತದಲ್ಲಿರುವ ಸೆನೆಟ್ ಒಪ್ಪಿಗೆ ನೀಡಲಿಲ್ಲ.

ಅಮೆರಿಕದ ಫೆಡರಲ್ ಸಾಲದ ಮೊತ್ತ ೨೦೨೧ರ ವೇಳೆಗೆ ಅಮೆರಿಕದ ನಿವ್ವಳ ಉತ್ಪತ್ತಿಯನ್ನು ಮೀರಬಹುದು ಎಂದು ಅಂದಾಜು ಮಾಡಲಾಗಿದೆ. ವಿದೇಶೀ ಸಾಲದ ಹೊರೆಗೆ ನೀಡಬೇಕಾಗುವ ಬಡ್ಡಿಯ ಪ್ರಮಾಣವು ೨೦೩೧ರ ವೇಳೆಗೆ ಅಮೆರಿಕದ ಒಟ್ಟು ವರಮಾನದ ಎರಡನೇ ಐದರಷ್ಟು ಭಾಗ ಆವರಿಸುವುದೆಂದು ಅಂದಾಜು ಮಾಡಲಾಗಿದೆ. ಆದರಿಂದ ಈಗಲೇ ಸಾಲದ ಹೊರೆ ತಗ್ಗಿಸಲು ಸರಕಾರ ಕ್ರಮ ಕೈಗೊಳ್ಳಬೇಕಾಗಿದೆ. ಬಜೆಟ್ ಕೊರತೆ ನೀಗಿಸಲು ಕೈಗೊಳ್ಳುವ ಕ್ರಮಗಳು ಎಲ್ಲ ಜನವಿಭಾಗಗಳನ್ನು ಬಾಧಿಸಲಿದೆ. ಸಬ್ಸಿಡಿಗಳನ್ನು ಕಡಿಮೆ ಮಾಡುವುದರಿಂದ ಹಾಗೂ ಇತರ ಕ್ರಮಗಳಿಂದ ಜನಸಾಮಾನ್ಯರಿಗೆ ತೊಂದರೆಯಾಗಲಿದೆ. ಈ ಕ್ರಮಗಳು ನಿರುದ್ಯೋಗದ ಪ್ರಮಾಣವನ್ನು ಹೆಚ್ಚಿಸುವ ಭೀತಿಯೂ ಇದೆ. ಮಹಾ ಆರ್ಥಿಕ ಕುಸಿತದ ಪರಿಣಾಮವಾಗಿ ತೆಗೆದುಕೊಂಡ ಕ್ರಮಗಳು ಸರಕಾರಿ ಉದ್ಯೋಗಗಳನ್ನು ಸಾಕಷ್ಟು ಕಡಿಮೆ ಮಾಡಿದೆ.



ಈಗ ಕೈಗೊಳ್ಳುವ ಕ್ರಮದಿಂದ ಸಬ್ಸಿಡಿಗಳು ಕಡಿಮೆಯಾಗುವುದರಿಂದ ಉಂಟಾಗಲಿರುವ ತೊಂದರೆಗೆ ಒಂದು ಉದಾಹರಣೆ: ಕಾಲೇಜು ವಿದ್ಯಾರ್ಥಿಗಳಿಗೆ ನೀಡುವ ಸಾಲಕ್ಕೆ ಸರಕಾರ ನೀಡುತ್ತಿದ್ದ ಸಬ್ಸಿಡಿಗಳು ಕಡಿಮೆಯಾಗುವುದರಿಂದ ಹೊರೆ ಹೆಚ್ಚಾಗುತ್ತದೆ. ಸಾಧಾರಣವಾಗಿ ವಿದ್ಯಾರ್ಥಿಯೊಬ್ಬ ಫೆಡರಲ್ ಸರಕಾರದಿಂದ ವರ್ಷಕ್ಕೆ ೨೦,೫೦೦ ಡಾಲರುಗಳ ಸಾಲ ಪಡೆಯಬಹುದು. ಇದಕ್ಕೆ ಸರಕಾರ ನೀಡುವ ಸಬ್ಸಿಡಿಯು ೮,೫೦೦ ಡಾಲರುಗಳು. ಪದವೀಧರನಾಗುವ ಹೊತ್ತಿಗೆ ಒಬ್ಬ ವಿದ್ಯಾರ್ಥಿಯು ಸುಮಾರು ೬೫,೫೦೦ ಡಾಲರುಗಳ ಸಾಲ ಪಡೆದಿರುತ್ತಾನೆ. ಈ ಸಾಲಕ್ಕೆ ಅವನು ಹತ್ತು ವರ್ಷಗಳ ಕಾಲ ತಿಂಗಳಿಗೆ ೨೦೭ ಡಾಲರುಗಳಷ್ಟು ಬಡ್ಡಿ ತೆರಬೇಕಾಗುತ್ತದೆ. ಈಗ ಸರಕಾರ ಸಬ್ಸಿಡಿ ಕಡಿತ ಮಾಡುವುದರಿಂದ ಹೊರೆಯ ಪ್ರಮಾಣ ಹೆಚ್ಚಲಿದೆ.

ಅಮೆರಿಕದ ಆಡಳಿತವನ್ನು ಕೊರೆಯುತ್ತಿರುವ ಇನ್ನೊಂದು ಅಂಶವೆಂದರೆ ಸಾಲದ ಅರ್ಹತೆಯ ಕುರಿತ ಸೂಚ್ಯಂಕದ (ಕ್ರೆಡಿಟ್ ರೇಟಿಂಗ್) ಕುಸಿತ. ೧೯೧೭ರಿಂದ ಈ ವಿಷಯದಲ್ಲಿ ಅಮೆರಿಕ ಮೊದಲ ಸ್ಥಾನದಲ್ಲಿ ಅಂದರೆ 'ಎ' (AAA) ಸ್ಥಾನದಲ್ಲಿತ್ತು. ಈಗ ಅದು ಎರಡು 'ಎ'ಗೆ (AA) ಇಳಿದಿದೆ. ಇದರ ಮೇಲೆ ಅಮೆರಿಕದ ಷೇರು ಮಾರುಕಟ್ಟೆ ಇನ್ನೂ ಪೂರ್ಣ ಸ್ಥಿರತೆ ಕಂಡುಕೊಂಡಿಲ್ಲ. ಆಗಸ್ಟ್ ತಿಂಗಳ ಮೊದಲ ವಾರದಲ್ಲಿ ಷೇರು ಮಾರುಕಟ್ಟೆಯಲ್ಲಿ ಭಾರಿ ಕುಸಿತ ಕಂಡುಬಂದಿತು. ಒಂದೇ ದಿನದಲ್ಲಿ ಸೂಚ್ಯಂಕ ೫೦೦ ಪಾಯಿಂಟ್‌ಗಳಷ್ಟು ಇಳಿಯಿತು. ಮರುದಿನ ೬೦೦ರಷ್ಟು ಇಳಿಯಿತು. ಇದು ಪ್ರಪಂಚದ ಎಲ್ಲ ಪ್ರಮುಖ ಷೇರು ಮಾರುಕಟ್ಟೆಗಳ ಮೇಲೆ ಪರಿಣಾಮ ಉಂಟುಮಾಡಿತು. ಭಾರತದ ಷೇರು ಮಾರುಕಟ್ಟೆಯೂ ಭಾರೀ ಪ್ರಮಾಣದಲ್ಲಿ ತಲ್ಲಣಗೊಂಡು ಮತ್ತೊಂದು ಆರ್ಥಿಕ ಕುಸಿತದ ಭೀತಿಯು ಉಂಟಾಗಿತ್ತು. ಆದರೆ ಕೆಲವೇ ದಿನಗಳಲ್ಲಿ ಅದು ಮತ್ತೆ ಚೇತರಿಕೆ ಕಂಡಿತು. ಷೇರು ಮಾರುಕಟ್ಟೆಯಲ್ಲಿನ ಏರುಪೇರು ಸಾಮಾನ್ಯವಾದರೂ, ಏಕದಂ ಭಾರೀ ಕುಸಿತವಾದಾಗ ಗಾಬರಿಯಾಗುತ್ತದೆ. ಅಮೆರಿಕದ ಜನ ಇಂಥ ಏರುಪೇರಿಗೆ ಹೊಂದಿಕೊಂಡಿದ್ದಾರೆ ಎನ್ನಬೇಕು. ಆರ್ಥಿಕ ಪರಿಸ್ಥಿತಿಯಿಂದಾಗಿ ಅಮೆರಿಕದ ಜನರು ಸರಕು ಖರೀದಿಸುವಾಗ ಎಚ್ಚರವಹಿಸತೊಡಗಿದ್ದಾರೆ. ಕೊಳ್ಳುಬಾಕತನ ಸ್ವಲ್ಪ ಕಡಿಮೆಯಾಗಿದೆ ಎನ್ನುವುದು ಕಂಡುಬರುತ್ತಿದೆ.

**ಬರಾಕ್ ಒಬಾಮ ಭವಿಷ್ಯ – ಚರ್ಚೆಗೆ ಗ್ರಾಸ**

ಅಮೆರಿಕದ ಅಧ್ಯಕ್ಷೀಯ ಚುನಾವಣೆಗೆ ಇನ್ನೂ ಹದಿನೈದು ತಿಂಗಳಿದೆ. ಆದರೆ ಈಗಾಗಲೇ ಚುನಾವಣೆಯ ಗಡಿಬಿಡಿ ಪ್ರಾರಂಭವಾಗಿದೆ. ಅತ್ಯಂತ ಸಂದಿಗ್ಧ ಪರಿಸ್ಥಿತಿಯಲ್ಲಿ, ಅಮೆರಿಕದ ಆರ್ಥಿಕತೆ ಆತಂಕದ ಸ್ಥಿತಿಯಲ್ಲಿದ್ದಾಗ ಅಧಿಕಾರದ ಗದ್ದುಗೆ ಏರಿದ ಅಧ್ಯಕ್ಷ ಬರಾಕ್ ಒಬಾಮರ ಆಡಳಿತ ಸುಗಮವಾಗೇನಿರಲಿಲ್ಲ. ಅಮೆರಿಕದ ಇತಿಹಾಸದಲ್ಲಿ ಆಫ್ರಿಕನ್ ಅಮೆರಿಕನ್ ಒಬ್ಬನಾಗಿ ಅಧ್ಯಕ್ಷರಾದ ಒಬಾಮ ಖ್ಯಾತಿ ಗಳಿಸಿದರು. ಆದರೆ ಆತ ಎದುರಿಸಬೇಕಾಗಿದ್ದ ಸಮಸ್ಯೆಗಳೂ ಹಲವು. ಒಳ್ಳೆಯ ಭಾಷಣಕಾರ ಎಂದು ಹೆಸರು ಗಳಿಸಿರುವ ಒಬಾಮ ಒಳ್ಳೆಯ ಆಡಳಿತಗಾರ ಎನ್ನುವುದರಲ್ಲಿ ಹಿಂದೆ ಬಿದ್ದಿದ್ದಾರೆ. ಸದುದ್ದೇಶದಿಂದ ಅವರು ಮಂಡಿಸಿದ ಸುಧಾರಣೆಗಳು ಜಾರಿಯಾಗದೆ ಇರುವುದು ಒಂದು ಬಗೆಯಾದರೆ, ಬಹುಮತದಲ್ಲಿರುವ ರಿಪಬ್ಲಿಕನ್ನರನ್ನು ಒಲಿಸಿಕೊಳ್ಳಲು ವಿಫಲತೆ ಇನ್ನೊಂದು. ಸಾರ್ವಜನಿಕ ಆರೋಗ್ಯದಲ್ಲಿ ಒಬಾಮ ತರಬಯಸಿದ ಸುಧಾರಣೆಗಳು ಅದಕ್ಕೆ ಒಂದು ಉದಾಹರಣೆ. ನಾಯಕತ್ವ ನೀಡಿಕೆಯಲ್ಲಿ ಅವರು ಅಸಮರ್ಥರಾಗಿದ್ದಾರೆ ಎನ್ನುವುದು ಬಲವಾದ ಟೀಕೆ. ಸೆನೆಟ್‌ನಲ್ಲಿ ಬಹುಮತ ಹೊಂದಿರುವ ರಿಪಬ್ಲಿಕನ್ನರ ಅಸಹಕಾರ ಒಬಾಮಾಗೆ ತಲೆನೋವು. ರಿಪಬ್ಲಿಕನ್ನರಲ್ಲೇ ಒಂದು ತೀವ್ರ ಪಂಥೀಯ ಗುಂಪು 'ಟೀ ಪಾರ್ಟಿ' ಎಂಬ ಹೆಸರಿನಲ್ಲಿ ಚುರುಕಾಗಿದೆ. ಇಷ್ಟೆಲ್ಲಾ ಸಮಸ್ಯೆಗಳು ಇದ್ದರೂ ಒಬಾಮ ತಮ್ಮ ಸ್ಥೈರ್ಯ ಕಳೆದುಕೊಂಡಿಲ್ಲ. ಇನ್ನೊಂದು ಅವಧಿಗೆ ಅವರು ಚುನಾಯಿತರಾಗುತ್ತಾರೆಯೇ ಎಂಬುದೇ ಈಗ ನಡೆದಿರುವ ಚರ್ಚೆ.

ರಿಪಬ್ಲಿಕನ್ ಪಕ್ಷದಲ್ಲಿ ಈಗಾಗಲೇ ಹಲವರು ಅಧ್ಯಕ್ಷೀಯ ಚುನಾವಣೆಯಲ್ಲಿ ಅಭ್ಯರ್ಥಿಗಳಾಗಲು ಆಕಾಂಕ್ಷಿಗಳಾಗಿದ್ದಾರೆ. ಆದರೆ ಆ ಪಕ್ಷದಲ್ಲೂ ಸಮರ್ಥ ನಾಯಕನ ಕೊರತೆ ಇದೆ. ಒಮ್ಮತ ಅಭ್ಯರ್ಥಿ ಆಯ್ಕೆಯು ಈ ಪಕ್ಷಕ್ಕೂ ಕಷ್ಟವಾದೀತು. ಒಬಾಮ ಪುನರಾಯ್ಕೆಗೆ ಇದು ಸಮರ್ಥನೀಯವಾದೀತು.

**ಸೀಯಾರ್ಕೆ**
'ಚೌಬೀನ', ನಂ. ೮೪೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ, ೩ನೇ ಬ್ಲಾಕ್
ಕತ್ರಿಗುಪ್ಪೆ, ಬೆಂಗಳೂರು - ೫೬೦ ೦೮೫

# ಬೊಳುವಾರು ಅವರ ಕಥೆಗಳು



**ಬೊಳುವಾರರು ಅರಿತು ಕಥೆಯಲ್ಲಿ ಹೇಳುತ್ತಿರುವ ಧರ್ಮ ದಾರ್ಶನಿಕ ಕವಿ ಡಿ.ವಿ.ಜಿ. ತಿಳಿಸಿದ ಧರ್ಮವಾಗಿದೆ : ''ಧರ್ಮ ಎಂದರೆ ಒಳ್ಳೆಯ ನಡವಳಿಕೆ – ಆತ್ಮದ ಮೊಗ್ಗಿನ ಅರಳಿಕೆ. ...ನಾವು ಹೇಗೆ ನಡೆದುಕೊಂಡರೆ ನಮ್ಮ ಸುತ್ತ ಮುತ್ತಣ ಯಾರ ಬಾಳಿಗೂ ಕೇಡಾಗದೆ, ಎಲ್ಲರ ಬಾಳೂ ಸೊಗಸುಗೊಂಡು, ನಮ್ಮ ಬಾಳೂ ಸೊಗಸಾಗುತ್ತದೆಯೋ ಅಂಥ ನಡವಳಿಕೆ ಧರ್ಮ.'' ಈ ದೇಶದಲ್ಲಿ ಹಿಂದೂಧರ್ಮ, ಕ್ರೈಸ್ತಧರ್ಮ, ಇಸ್ಲಾಂ ಧರ್ಮ ಮುಖ್ಯವಲ್ಲ, ಭಾರತ ಧರ್ಮ ಮುಖ್ಯ ಎಂದು ಸಾರುವ ಬೊಳುವಾರರು ಕನ್ನಡದ ಉತ್ತಮ ಕಥೆಗಾರರಾಗಿದ್ದಾರೆ. ಇವರ ಭಾರತ ಧರ್ಮ ಸಾಧಿಸಿರುವುದು ಸಾಧಾರಣ ಜನರ ಬದುಕಿನ ಪ್ರೀತಿ, ಜೀವಸಂಕಲ್ಪ ಮತ್ತು ಭಾರತದ ಐಕ್ಯತೆ.**

**ಬೊ**ಳುವಾರು ಮಹಮದ್ ಕುಂಞಿ ಕನ್ನಡದ ಪ್ರಮುಖ ಕಥೆಗಾರರು. ಅವರು ಮುಸಲ್ಮಾನರ ನೋವಿನ ಬದುಕು ಬವಣೆಯನ್ನು ಅರಿತು ಮುಸ್ಲಿಂ ಸಂವೇದನೆಯೆಂಬ ಚರ್ಚೆಗೆ ನಾಂದಿ ಹಾಡಿದವರು. ಅವರು ಇಸ್ಲಾಂ ಧರ್ಮದ ಸೂಕ್ಷ್ಮಗಳನ್ನು ತಿಳಿದು, ಉತ್ತಮಿಕೆಗಾಗಿ – ಅದರಲ್ಲಿ ಬಯಸಬಹುದಾದ ಪ್ರಗತಿಪಥವನ್ನು ಕಥೆಯಾಗಿ ಹೆಣೆದಿದ್ದಾರೆ. ಅವರ ಕಥೆಯಲ್ಲಿ ಘಟನೆಗಳು ಒಂದಾದ ಮೇಲೊಂದು ರೂಪುಗೊಳ್ಳುತ್ತ ಅವುಗಳ ಓಟ ತಿಳಿಯಿತು ಎನ್ನುವಷ್ಟರಲ್ಲಿ ಮತ್ತೊಂದು ಘಟನೆಯಿಂದ ಕಥೆ ಅಂತ್ಯದಲ್ಲಿ ಅನಿರೀಕ್ಷಿತ ತಿರುವನ್ನು ಪಡೆಯುತ್ತದೆ. ಅದು ಅವರ ಕಥಾ ತಂತ್ರ. ಪಾತ್ರಗಳು ಘಟನೆಗಳೊಂದಿಗೆ ಸಾಗುತ್ತ ತಮ್ಮ ಆಗುವಿಕೆಗೆ ಕಾರಣವಾದ ಸನ್ನಿವೇಶ, ವ್ಯವಸ್ಥೆ, ವೈಯಕ್ತಿಕ ಸೋಲು ಗೆಲುವನ್ನು ಅತಿ ಸಹಜವೆಂಬಂತೆ ಅಭಿವ್ಯಕ್ತಿಸಿ ಆಪ್ತವಾಗುತ್ತವೆ. ಅವರ ಕಥೆಗಳಲ್ಲಿ ದುಡಿಯುವ ಬಡವರು, ಬೀಡಿಕಟ್ಟಿ ಜೀವ ಸವೆಸುವ ಹೆಣ್ಣುಮಕ್ಕಳು, ವಿಧವೆಯರು ಅಂದಂದಿನ ಹೊಟ್ಟೆಬಟ್ಟೆಗೆ ಚಿಂತಿಸುತ್ತಾ ಜೀವನ ಪ್ರೀತಿಗೆ ಆಶಿಸಿದರೆ, ಬಂಡವಳಿಗರು ಧರ್ಮಲಂಪಟರಾಗಿ ತಮ್ಮ ಪ್ರತಿಷ್ಠೆಗೆ ಮತಧರ್ಮವನ್ನು ಅವಲಂಬಿಸಿ ಜೀವ ವಿರೋಧಿಗಳಾಗಿರುವುದು ಚಿತ್ರಿತವಾಗಿದೆ. ಬೊಳುವಾರರು ತಮ್ಮ ಕಥೆಯ ಕೇಂದ್ರವಾಗಿ 'ಮುತ್ತುಪ್ಪಾಡಿ' ಎಂಬ ಒಂದು ಕಲ್ಪನೆಯ ಊರನ್ನು ಸೃಷ್ಟಿಸಿಕೊಂಡಿದ್ದಾರೆ. ಅದು ಆರ್. ಕೆ. ನಾರಾಯಣ್ ಅವರ 'ಮಾಲ್ಗುಡಿ' ಯಂತಹ ಕಲ್ಪನೆ.

ಬೊಳುವಾರು ಅವರು ರಚಿಸಿದ ಮಕ್ಕಳ ಕಥೆ 'ಪಾಪು ಗಾಂಧಿ, ಗಾಂಧಿ ಬಾಪು ಆದ ಕತೆ'ಯು ಕನ್ನಡಕ್ಕೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ತಂದುಕೊಟ್ಟಿದೆ. ಗಾಂಧಿಯನ್ನು ಒಂದು ಕಥೆಯಾಗಿ ಹೆಣೆದು ಯಶಸ್ವಿಯಾಗಿರುವ ಬೊಳುವಾರರು ಕನ್ನಡಿಗರಿಗೊಂದು ಹೆಮ್ಮೆ. ಈ ಕಥೆಯಲ್ಲಿ ಗಾಂಧಿಯ ಹುಟ್ಟು, ಸಾವಿನ, ಹೋರಾಟದ ಮಜಲುಗಳ ಇಸವಿ ತಾರೀಖುಗಳ ಗೊಂದಲವಿಲ್ಲ, ಅದು ಮುಗ್ಧ ಮೋಹನದಾಸ – ಮೋನು ಪಾಪು – ಪ್ರಕೃತಿಯ ಕುತೂಹಲದ ಖನಿಯಾದ ಮಳೆಗೆ ಕೈ ಒಡ್ಡಿ ಆನಂದಪಟ್ಟಂತೆ ಸಹಜ ಬದುಕಿನಾಟದಲ್ಲಿ ನಡೆನಡೆದು ಹೋಗುವ ಕಥೆಯಾಗಿದೆ. ಈ ನಾಡಿನ ಮಕ್ಕಳು ಭಾವನಾತ್ಮಕವಾಗಿ ಗಾಂಧಿ ತಾತನನ್ನು ಚೆನ್ನಾಗಿ ತಿಳಿದುಕೊಳ್ಳಲು ಸಹಾಯಕವಾಗಿದೆ.

*  *  *

ಈ ಜಗದ ಸೃಷ್ಟಿಯಲ್ಲಿ ಮೂಡಿಬಂದ ಗಂಡು ಹೆಣ್ಣು ಜೀವವಿಕಾಸದ ಒಂದು ತಂತ್ರ. ಯೋಚಿಸಬಲ್ಲ, ಮಾತು ಕಲಿತ ಮಾನವ ಅದರ ಸುತ್ತಲೇ ಪ್ರಚೋದಕವಾಗಿ ರಂಜಕಗೊಳ್ಳಲು ಕಲೆ ಸಾಹಿತ್ಯ ಸೃಷ್ಟಿಸುತ್ತಿದ್ದಾನೆ. ಸಾಮಾಜಿಕ ಬಂಧನಕ್ಕೆ ಒಳಗಾದ ಮಾನವ ಅದನ್ನು ಹೆಣ್ಣಿನ ಅಂತರಂಗದ, ಮನುಜಕುಲದ ಬಾಳುವಿಕೆಯ ಪೂರಕವಾಗಿ ಚಿತ್ರಿಸಿದರೆ– ಮಾನವ ಪ್ರಾಣಿ ಮನುಜನಾಗುತ್ತಾನೆ. ಇದರತ್ತ ತಮ್ಮ ಮನಸ್ಸನ್ನು ಕೇಂದ್ರೀಕರಿಸಿ ಪ್ರೇಮದ ಹುಡುಕಾಟದಲ್ಲಿ ಬೆಳಕು ಕಾಣುತ್ತ, ಕಾಮದ ಅತಿಯನ್ನು ನಿಯಂತ್ರಿಸಿದ ಯಶಸ್ವಿ ಕಥೆಗಾರ ಬೊಳುವಾರು. ಹೆಣ್ಣಿನ ಸೌಂದರ್ಯ, ನಾರಿಭಾವ ಇಲ್ಲಿ ತನ್ನತನದಲ್ಲಿ ವಿಕಾಸಗೊಂಡಿದೆ. ಅದರ ಕಂಪು ಆಹ್ಲಾದಮಯವಾಗಿ ಅದರ ಸವಿಯತ್ತ ಓದುಗನನ್ನು ಪ್ರೀತಿಯ ನಡಿಗೆಯಲ್ಲಿ ಕೊಂಡೊಯ್ಯುತ್ತದೆ. ಅದು ಮಾಸ್ತಿಯವರ ಹದ ಅರಿತ ಪ್ರೇಮ ಚಿತ್ರಣದ ಬಗೆಯಲ್ಲಿದೆ. ಕಾಮದ ಘಾಟಿಲ್ಲದ ಸಂಯಮದ ಬರೆವಣಿಗೆಗೆ ಬೊಳುವಾರರ ಕಥೆಗಳು ಮಾದರಿಯಾಗಿವೆ.

**ಡಾ॥ ಜಿ. ಕೃಷ್ಣಪ್ಪ**



'ಅಖಿರತ್', 'ಇಮಾರತ್', 'ಇದ್ದತ್', 'ಜನ್ನತ್', 'ಇಬಾದತ್', 'ರುಖಿಯಾ' ಕಥೆಗಳು ಆರೋಗ್ಯಕಾರಿ ಜೀವನ ಚಿಂತನೆಗಳು. ಅವು ಇಸ್ಲಾಂ ಧರ್ಮದ ಸೂಕ್ಷ್ಮ ವಿಶ್ಲೇಷಣೆಯನ್ನು ಕುರಾನ್‌ನ ಕಟ್ಟಳೆಯಲ್ಲಿ ಚಿತ್ರಿಸುತ್ತ ಅದರ ನೆರಳು- ಬೆಳಕನ್ನು ಕಾಣಿಸಿದ ರೀತಿಯು ಬೊಳುವಾರರ ಎಚ್ಚರದ, ಜಾಣ ಬರಹಕ್ಕೆ ಸಾಕ್ಷಿಯಾಗಿದೆ.

ಕುರಾನ್‌ನ ಕಟ್ಟುಕಟ್ಟಳೆಯಲ್ಲಿ ಉಸಿರು ಬಿಗಿಹಿಡಿದ ವಿಧವೆಯ ಕಥೆಯನ್ನು ಬೊಳುವಾರರು ಕುರಾನನ್ನು ಅಲ್ಲಲ್ಲಿ ಉದ್ಧರಿಸುತ್ತಲೇ ಅವಳ ಅಸಹಾಯಕ ಬದುಕನ್ನು ಚಿತ್ರಿಸಿರುವ ಕಥೆ 'ಇದ್ದತ್'. ಚಿಮುಟಿದರೆ ರಕ್ತ ಚಿಮ್ಮುವ ಯೌವ್ವನದ ಮೆಹರುನ್ನೀಸಾಳನ್ನು ಅವಳ ಬಡ ವಿಧವೆ ಚಿಕ್ಕಮ್ಮ ನಿಕಾಹ್ ಮಾಡಿಕೊಟ್ಟದ್ದು ದಿನಸಿ ಅಂಗಡಿ ಸಾಹುಕಾರ ಪುತ್ತಬ್ಬನಿಗೆ. ಮೆಹರುನ್ನೀಸಾಳ ಸತ್ತುಹೋದ ಅಪ್ಪನಿಗಿಂತ ಹತ್ತು ವರ್ಷ ಹೆಚ್ಚಾಗಿರುವ ಪುತ್ತಬ್ಬ ಒಬ್ಬ ನಪುಂಸಕ.

ಕುರಾನ್‌ನ ಅಡಿಯಲ್ಲಿ ಹೆಣ್ಣನ್ನು ಶೋಷಿಸುವ ಸಿರಿವಂತ ವೃದ್ಧರ ಹೇಯ ವರ್ತನೆಯ ಬಗ್ಗೆ ಕುರಾನ್‌ನ ನುಡಿಯನ್ನೇ ಉದ್ಧರಿಸಿ ಮುಸಲ್ಮಾನರ ಆಲೋಚನೆಯಲ್ಲಿ ಬದಲಾವಣೆ ತರಲು ಆಶಿಸುವ ಬೊಳುವಾರರು ಕುರಾನನ್ನು ಚೆನ್ನಾಗಿ ತಿಳಿದವರಾಗಿದ್ದಾರೆ. ಅವರ ನೇರ ನಡೆಯ ಕೆಚ್ಚು ಅನುಕರಣೀಯ.

ವಯಸ್ಸಾದ ಪುತ್ತಬ್ಬ ಚಿಕ್ಕವಯಸ್ಸಿನ ಮೆಹರುನ್ನೀಸಾಳನ್ನು ನಿಕಾಹ್ ಮಾಡಿಕೊಂಡದ್ದನ್ನು ಕಥೆಗಾರರು ಚಿತ್ರಿಸುವಾಗ ಕುರಾನ್‌ನ ಈ ನುಡಿಯನ್ನು ಉದ್ಧರಿಸಿದ್ದಾರೆ :

'ನಿಮ್ಮ ಸ್ತ್ರೀಯರು ನಿಮಗೆ ಹೊಲವಾಗಿರುತ್ತಾರೆ. ಅಂತಲೇ ನಿಮ್ಮ ಹೊಲದಲ್ಲಿ ನಿಮಗಿಷ್ಟ ಬಂದಂತೆ ಪ್ರವೇಶಿಸಿರಿ'.

ಮುಸಲ್ಮಾನ್ ಬಡ ಹೆಣ್ಣುಮಕ್ಕಳ ನೋವು, ಅಸಹಾಯಕತೆ, ಧರ್ಮದ ಕಟ್ಟಳೆಯ ವಿಕಟ ನಗುವನ್ನು ಇದಕ್ಕಿಂತ ಚೆನ್ನಾಗಿ ಬಣ್ಣಿಸಲು ಸಾಧ್ಯವೆ ? ಹೆಣ್ಣನ್ನು ಅನುಭವಿಸಲಾಗದ ವೃದ್ಧ ಸಿರಿವಂತನಿಗೆ ಧರ್ಮದ ಆಸರೆಯ ನುಡಿ ಎಷ್ಟು ವ್ಯಂಗ್ಯ !

ಹತ್ತಾರು ಚಿಂತನೆಯ ಕಾವನ್ನು ಯಶಸ್ವಿಯಾಗಿ ಸಾಧಿಸಿ, ಈ ರೀತಿ ಶಾಂತವಾಗಿ ಬರೆಯುವ ಲೇಖಕರು ಕನ್ನಡದಲ್ಲಿ ಅಪರೂಪ. ಬಡ ಮುಸಲ್ಮಾನರ ದಾರುಣ ಜೀವನದ ಮುಸ್ಲಿಂ ಸಂವೇದನೆಯನ್ನು ಕಟ್ಟಿಕೊಟ್ಟ ಬೊಳುವಾರರು ತುಂಬ ಎಚ್ಚರದ ಜವಾಬ್ದಾರಿ ಕಥೆಗಾರರಾಗಿದ್ದಾರೆ. ಕಥೆಗಾರರು ಮೆಹರುನ್ನೀಸಾಳ ಪಾತ್ರ ಪೋಷಣೆಗೆ ವಹಿಸಿರುವ ಶಾಂತ ಸಂವೇದನಾಶೀಲತೆ ಈ ನಾಡಿನ ಸಂಸ್ಕೃತಿಯ ಪೋಷಕ ನಡೆಯಾಗಿದೆ.

* * *

'ಆಕಾಶಕ್ಕೆ ನೀಲಿ ಪರದೆ' ಕಥೆಯ ಮುಕುಂದಣ್ಣನು ಕರುಣೆ, ಮಾನವೀಯ ಅನುಕಂಪ ಹಾಗೂ ಮಾತಿನಿಂದ ವರ್ಣಿಸಲಾಗದ ಆತ್ಮೀಯ ಭಾವಕ್ಕೆ ಒಳಗಾದ ವ್ಯಕ್ತಿ. ಆತ ಮಹಡಿ ಮನೆಯ ಪುಸ್ತಕದಂಗಡಿ ಮಾಲೀಕ. ಅವನಿಗೆ ರಸ್ತೆಯ ಎದುರು ಗುಡಿಸಿಲಿನ ಪುಟ್ಟ ಹುಡುಗಿ ಮುಬೀನಾಳನ್ನು ಕಂಡರೆ ಮುದ್ದು. ಅವಳನ್ನು ತನ್ನ ಗುಜ್ಜಾನೆ ಮರಿ ಹೊಟ್ಟೆಯ ಮೇಲೆ ಕುಳ್ಳಿರಿಸಿಕೊಂಡು ಆಡಿಸುತ್ತಾನೆ. ಆ ಮಗುವಿನ ತಾಯಿ ವಿಧವೆ ಕುಂಞ ಪಾತುಮ್ಮಳಿಗೆ ಮನುಷ್ಯ ಪ್ರೀತಿಯ ಒಂದೇ ಕಾರಣದಿಂದ ಸಹಾಯವಾಗುತ್ತಾನೆ. ಈ ಕಥೆಯಲ್ಲಿ ಮನುಷ್ಯ ಮನುಷ್ಯರ ಹೃದಯ ಸ್ಪಂದನವಿದೆ. ಧರ್ಮದ ಕೃತಕ ಹೃದಯವಿಲ್ಲ.

ಮುಕುಂದಣ್ಣ ತಾನು ಪೋಷಿಸಿದ ಮುಬೀನಾಳನ್ನು 'ಬೇಬಿ' ಎಂದು ಹೆಸರಿಸಿ ಶಾಲೆಗೆ ಸೇರಿಸುತ್ತಾನೆ. ಆಕೆಯನ್ನು ಪಿ.ಯು.ಸಿ.ವರೆಗೆ ಓದಿಸುತ್ತಾನೆ. ಮದುವೆ ವಯಸ್ಸಿನ ಆ ಹುಡುಗಿಗೆ ಮುಸಲ್ಮಾನ್ ಹುಡುಗನನ್ನು ಹುಡುಕಿ ಮದುವೆ ಮಾಡಲು ಪ್ರಯತ್ನಿಸಿ ಸೋಲುತ್ತಾನೆ. ಬೇಬಿಯ ಕೋರಿಕೆಯಂತೆ ಕೊನೆಗೆ ತಾನೇ ಮದುವೆಯಾಗುತ್ತಾನೆ. ಅಲ್ಲಿಯವರೆಗೆ ಅವನು ಆಕೆಯನ್ನು ನೋಡುತ್ತಿದ್ದ ದೃಷ್ಟಿ ಬದಲಾಗುತ್ತದೆ. ಆಕೆ ಕಿಟಕಿಯಿಂದ ಮೋಡವನ್ನು ಮುಕ್ತವಾಗಿ ನೋಡಲು ಬಿಡದೆ ಅದಕ್ಕೆ ನೀಲಿ ಪರದೆ ಹಾಕುತ್ತಾನೆ. ವಿವಾಹ ಉಂಟುಮಾಡುವ ಬಂಧನವನ್ನು, ಆಕೆ ತನ್ನವಳು ಮಾತ್ರ ಎಂಬ ಪುರುಷ ಕ್ರೌರ್ಯವನ್ನು ಕಥೆಗಾರರು ತುಂಬ ಸೂಕ್ಷ್ಮವಾಗಿ ಆಕಾಶಕ್ಕೆ ನೀಲಿ ಪರದೆ ಎಳೆದು ನೂರು ವಾಕ್ಯ ಹೇಳುವುದನ್ನು ಒಂದು ನುಡಿಯಲ್ಲಿ



ಸಾರ್... ನಮ್ಮ ಬಡತನ, ದಾರಿದ್ರ್ಯ ಸಂಹಾರ ಮಾಡಲಿಕ್ಕೆ ಒಂದು 'ಯಾಗ'ನರ ಮಾಡ್ಸಿ. ಆ ಪುಣ್ಯ ನಿಮಗೇ... ಬರುತ್ತೆSSS... ಬಡತನ ಅಂತೂ ಹೇಗೂ ನಿಮ್ಮಿಂದ ಹೋಗಿಸಲಾಗುವುದಿಲ್ಲ.

ಸಾಧಿಸಿಬಿಡುತ್ತಾರೆ ಲೇಖಕರು. ಇದು ಸಂಗ್ರಹ ನುಡಿಯ ಕುಶಲ ಕಥಾ ಶೈಲಿ.

ಮುಕುಂದಣ್ಣ ತನ್ನ ಬೇಬಿಯನ್ನು ಮದುವೆಯಾದರೂ ಆಕೆಯನ್ನು ಹೆಂಡತಿಯಂತೆ ಕಾಣುವುದಿಲ್ಲ. ಆಗ 'ಮುತ್ತುಪ್ಪಾಡಿಯ ವೈಜಯಂತಿಮಾಲಾ' ಅಂದರೆ ಯೌವ್ವನಭರಿತ ಸುಂದರ ಬೇಬಿಗೆ ಅಣ್ಣ, ಅಪ್ಪನಂತಿದ್ದ ಮುಕುಂದಣ್ಣ ರಾಕ್ಷಸನ ಹಾಗೆ ಕಾಣುತ್ತಾನೆ. ಪಿ.ಯು.ಸಿ. ಓದಿದ ಬೇಬಿ ಆ ಪರಿಸ್ಥಿತಿಯ ಒತ್ತಡದಿಂದ ಬಿಡುಗಡೆ ಹೊಂದಲು ಅವಳ ಅಂತರ್ಯದ ಗೆಳತಿ ಸುಮತಿಗೆ ಪತ್ರ ಬರೆದು ಮಂಗಳೂರಿನ ಹಾಸ್ಟಲ್‌ಗೆ ಸೇರಿ ನರ್ಸ್ ಆಗುತ್ತಾಳೆ. ಕಥೆಗಾರರು ಮುಕುಂದಣ್ಣ, ಬೇಬಿ, ಸುಮತಿ ಹೆಸರುಗಳನ್ನು ಪ್ರತಿಮಾತ್ಮಕವಾಗಿ ಬಳಸಿದ್ದಾರೆ.

ಇದಿಷ್ಟು ಬೊಳುವಾರರು ಕಥೆಗಾರರಾಗಿ ಕೇಳಿ ಬರೆದದ್ದು. ಅನಂತರದ್ದು ಶರೀರ ಸಂಬಂಧವನ್ನು ಮೀರಿದ ಒಂದು ಮಾನವೀಯ ಅನುಬಂಧ. ಕಥೆ ಘಟನೆಗಳ ಜೊತೆ ತನ್ನ ಪಾಡಿಗೆ ತಾನು ಸಾಗುತ್ತ ನಡೆದಂತೆ ಪಡೆದುಕೊಳ್ಳುವ ಓದುಗ ಕಲ್ಪಿಸಿಕೊಳ್ಳಲಾಗದ ತಿರುವು ಬೊಳುವಾರು ಅವರ ವಿಶಿಷ್ಟ ಕಥಾತಂತ್ರ. ಅವರದೇ ಪ್ರತ್ಯೇಕ ಕಥಾಸಂವಿಧಾನ, ಸಂಕೀರ್ಣ ಮಾನವ ಸಂಬಂಧಗಳ, ಬದುಕಿನ ಬಹುರೂಪದ ವಿನ್ಯಾಸಗಳ ವರ್ಣನಾತೀತ ಬಾಂಧವ್ಯ ಇಲ್ಲಿ ಕುಸುರಿಗೊಂಡಿದೆ. ಆ ಕಥಾಕುಸುಮದ ಕಂಪು ವಿವರಿಸಿದರೆ ಓದುಗರ ಆಘ್ರಾಣಕ್ಕೆ ತಡೆಯಾದೀತು.

ಇಂತಹ ವರ್ಗ, ಧರ್ಮ, ಭಾಷೆಯ ತಾರತಮ್ಯವನ್ನು ಹೊಡೆದುಹಾಕಿ ಅನುಪಮ ಜೀವಿಗಳ ಬಂಧದ ಕಥೆ ರಚಿಸಲು ಬೊಳುವಾರರಿಗೆ ಹೇಗೆ ಸಾಧ್ಯವಾಯಿತು ಎಂದು ಅಚ್ಚರಿಯಾಗುತ್ತದೆ. ಈ ಬಗೆಯ ಧರ್ಮ ಮತ್ತು ವರ್ಗ ಸಂಘರ್ಷವನ್ನು ಒಡೆದು ಮಾನವೀಯ ಪ್ರೀತಿಯನ್ನು ಸಾಧಿಸುವ ಕಥೆ ಜಗತ್ತಿನ ಕಥಾಮಾಲಿಕೆಗೆ ಸೇರುವುದಾಗಿದೆ.

ಸಹೃದಯ ಓದುಗರ ಸಹನೆ ಪರೀಕ್ಷಿಸುವುದು ಬೇಡ. ಘಟನೆ ನಡೆದು ೩೦ ವರ್ಷದ ನಂತರ ೭೦ ವರ್ಷದ ಅಜ್ಜ ಮುಕುಂದಣ್ಣನಿಗೆ ಬೇಬಿ ಆಸರೆಯಾಗಿರುತ್ತಾಳೆ ತಾಯಿಯಂತೆ.

* * *

ಬೊಳುವಾರು ಅವರ 'ದೃಷ್ಟಿ' ಕಥೆ ಒಂದು ರೂಪಕ ಕಾವ್ಯದಂತಿದೆ. ಅಲ್ಲಿಯ ಪಾತ್ರಗಳಾದ ಅಂದು ಕಾಕ, ಪೊಡಿಯಜ್ಜ ಫಕೀರ ಸಾಹೇಬರು, ಉಮ್ಮಾತುಮ್ಮಾ ಕಾಣುವ ಬೆಳಕಿನಲ್ಲಿ ಏನನ್ನೋ ಮುಚ್ಚಿಡುತ್ತಿರುತ್ತಾರೆ. ಕಣ್ಣು ಕಾಣದಂತಾಗಿಸಿದ ಪ್ರಕೃತಿಯ ಮುಸ್ಸಂಜೆ, ಅನಂತರದ ರಾತ್ರಿಯ ದಾರಿಯ ನಡೆ ಕಥಾಭಾಗವಾಗಿ ಕತ್ತಲು ಸಹಜ ಎಂದು ಹೇಳುತ್ತಿರುತ್ತದೆ. ಚಂದ್ರನನ್ನು ಇಡಿಯಾಗಿ ಮುಚ್ಚಿದ ಹಲಸಿನಮರದ ದಿಟ್ಟ ಎಲೆ-ಚಂದ್ರನಲ್ಲಿ ಕಲೆ ಇಲ್ಲ ಎಂದು ಸಾರುತ್ತ ಸುಲೇಮಾನನಿಗೆ ಸಂಕೇತವಾಗಿದೆ. ಇಡೀ ಸಂಜೆ ಮತ್ತು ರಾತ್ರಿಯ ವಾತಾವರಣವನ್ನು ಕಥೆಯ ಒಂದು ಭಾಗವಾಗಿ, ಅದನ್ನು ಒಂದು ಪಾತ್ರವಾಗಿ ಕಥೆಗಾರರು ದುಡಿಸಿಕೊಂಡಿದ್ದಾರೆ. ಇಲ್ಲಿಯ ಪ್ರಕೃತಿ ಚಿತ್ರಣವೇ ಕಥೆಯ ಅರ್ಥವನ್ನು ಧ್ವನಿಸುತ್ತದೆ.

ಕತ್ತಲೆ ಬೆಳಕುಗಳೆರಡೂ ಜೀವನದ ಅವಿಭಾಜ್ಯ ಅಂಗಗಳು ಎಂಬುದನ್ನು ಸುಲೇಮಾನನು ಸ್ಪಷ್ಟವಾಗಿ ಗ್ರಹಿಸಿಕೊಂಡಿದ್ದಾನೆ. ಕತ್ತಲನ್ನು ಸಹಜವಾಗಿ ಮೆಚ್ಚುವ ಸುಲೇಮಾನನ ಪಾತ್ರ ಸೃಷ್ಟಿ ಈ ಕಥೆಯಲ್ಲಿ ಉತ್ತಮವಾಗಿದೆ. ತನ್ನ ಮಗುವನ್ನು ನೋಡುವ ಕಾತುರದಿಂದ ಆಗತಾನೆ ಮಸ್ಕತ್‌ನಿಂದ ಬಂದಿದ್ದ ಆತ ನರ ದೋಷದಿಂದ ಕುರುಡಾದ ತನ್ನ ಮಗು ಮತ್ತು ಹೆಂಡತಿ ಜುಲೇಖಾಳನ್ನು ಸ್ವೀಕರಿಸುವ ಕಥಾ ತಿರುವು ಸೃಜನಾತ್ಮಕ ಕಥಾಶೈಲಿಯ, ಉತ್ತಮ ಸಂಸ್ಕಾರ ರೂಪಿಸುವ, ಸಕಾರಾತ್ಮಕ ಭಾವವಾಗಿದೆ. ದಾಂಪತ್ಯದ ಅರಿವು ವಿಸ್ತರಿಸುವ ಕನ್ನಡದ ಶ್ರೇಷ್ಠ ಕಥೆ ಇದಾಗಿದೆ. ಈ ಕಥೆ ಓದಿದಾಗ ಕಾವ್ಯಗಾರುಡಿಗ ದ. ರಾ. ಬೇಂದ್ರೆಯವರ ಈ ನುಡಿ ನೆನಪಾಗುತ್ತದೆ :

'ಪ್ರೇಮಾನಽ ಪಲ್ಲವಿಸಽದ ಕಾಮದ ಕಾವಿನ್ಯಾಗ
ದೇವ-ದಾನವ-ಮಾನವರೆಲ್ಲಾ ಬೂದಿ.
ಎಷ್ಟು ಓದಿ, ಏನು ಓದಿ, ಊದುಗೊಳವೀ
ಗಾಳೀ ಬಾಳು
ಕೊಳಲೀನ ದನಿ ಬರಲಿ ಸನಿ.'

ಬೊಳುವಾರರ ಕಥೆಯ ಸುಲೇಮಾನನ ಪಾತ್ರ ಬರಿ ಬಿದಿರಿನ ಗಾಳಿ ಬಾಳಿನದಲ್ಲ; ಕೊಳಲಿನ ಮುರಳಿಯ ಪ್ರೇಮದ ಇಂಪಾದ ದನಿ.

ಈ ದೇಶದಲ್ಲಿ ಪಟ್ಟಭದ್ರಹಿತಾಸಕ್ತಿಯ ವ್ಯಕ್ತಿಗಳು, ಬಂಡವಾಳಶಾಹಿ ಪೋಷಕರು ಸದಾ ತಮ್ಮಲ್ಲಿ ಕೈಬಾಂಬುಗಳನ್ನು, ಹಣದ ಥೈಲಿಯನ್ನು ಇಟ್ಟುಕೊಂಡಿರುತ್ತಾರೆ. ಅವರು ತಮ್ಮ ಹಿತ ಕಾಪಾಡಿಕೊಳ್ಳಲು – ಈ ದೇಶದಲ್ಲಿ ಒಂದೊಂದು ತುತ್ತು ಅನ್ನಕ್ಕಾಗಿ ಜೀವ ಸವೆಸುವ ಜನಸಾಮಾನ್ಯರನ್ನು ದಾಳವಾಗಿಸಿಕೊಳ್ಳಲು ಹೊಂಚು ಹಾಕುತ್ತಿರುತ್ತಾರೆ. ಆದರೆ ತಾವು ಮಾತ್ರ ಸದಾ ಸುಖದಿಂದ ಸುರಕ್ಷಿತವಾಗಿರಲು ಹುನ್ನಾರುಗಳನ್ನು ಹೂಡುತ್ತಿರುತ್ತಾರೆ. ಅವರು ಎಷ್ಟು ಅಮಾನವೀಯ ಅಪಾಯಕಾರಿಗಳು ಎಂಬುದನ್ನು ಬೊಳುವಾರರ 'ಅಂಕ' ಕಥೆ ಸಾರುತ್ತದೆ.

ವಿಧವೆ ಉಮ್ಮಾಬಿ ಮತಾಂತರಗೊಂಡ ತನ್ನ ಮಗ ರಹಮಾನ್‌ನನ್ನು ಮಂಗಳೂರಿನ ದೊಡ್ಡಾಸ್ಪತ್ರೆಗೆ ಸೇರಿಸಿದ್ದಾರೆಂದು ತಿಳಿದು ಅವನನ್ನು ಹುಡುಕುತ್ತಾ ಹೋಗುತ್ತಾಳೆ. ಅವಳ ವಾತ್ಸಲ್ಯದ ಮಾತೃ ಹೃದಯ

(೫೭ನೇ ಪುಟಕ್ಕೆ)



# ಸವಾಸೇರು ಗೋಧಿ

(ಬ)ಡ ರೈತ ಶಂಕರ, ಸರಳ ವ್ಯಕ್ತಿ. ತನ್ನ ಕೆಲಸವೆಷ್ಟೋ ಅಷ್ಟೆ. ಯಾರೊಂದಿಗೂ ಕೊಡುಕೊಳುವ ವ್ಯವಹಾರವಿಲ್ಲ. ವಂಚನೆಯ ಪ್ರಪಂಚದ ಪರಿಚಯವಿಲ್ಲ. ಠಕ್ಕು ವಿದ್ಯೆಗಳ ಅರಿವಿಲ್ಲ. ಊಟ ಸಿಕ್ಕಿತೇ, ಮಾಡಿದ. ಇಲ್ಲವೇ, ಹಿಡಿ ಕಡಲೆಯಲ್ಲೇ ದಿನ ದೂಡುವ. ಅದಕ್ಕೂ ನಕಾರವಾದಲ್ಲಿ ನೀರು ಕುಡಿದು, ರಾಮನಾಮ ಜಪಿಸುತ್ತ, ಮಲಗುತ್ತಿದ್ದ. ಆದರೆ ಅತಿಥಿಗಳ್ಯಾರಾದರೂ, ವಿಶೇಷವಾಗಿ ಭಗವಂತನ ಭಕ್ತರಾದ ಸಾಧು ಸಂತರ್‍ಯಾರಾದರೂ, ಮನೆ ಬಾಗಿಲಿಗೆ ಬಂದರೆ ಅವರನ್ನು ಉಪವಾಸ ಕಳಿಸೋದಾದ್ರೂ ಹ್ಯಾಗೆ? ಆಗ ತನ್ನ ನಿವೃತ್ತಿ ಮಾರ್ಗ ತೊರೆದು ಸಾಂಸಾರಿಕತೆಗೆ ಶರಣುಹೋಗಲೇ ಬೇಕಿತ್ತು.

ಆ ಸಂಜೆ, ಸಾಧುವೊಬ್ಬ ಬಾಗಿಲಿಗೆ ಬಂದ. ತಲೆಯಲ್ಲಿ ಜಟೆ, ಹಿತ್ತಾಳೆಯ ಕಮಂಡಲ ಹಿಡಿದು, ಪಾದುಕೆ ಮೆಟ್ಟಿದ್ದ ತೇಜಸ್ವಿ ಮೂರ್ತಿ. ದೊಡ್ಡ ಮನುಷ್ಯರಾದರೆ ಮನೆಗೆ ಕರೆಸಿ ರುಚಿಕಟ್ಟಾದ ಭೋಜನ ಮಾಡಿಸುವಂಥವರು. ಮನೆಯಲ್ಲಿದ್ದ ಜೋಳದ ಹಿಟ್ಟನ್ನು ಬಡಿಸುವುದಾದರೂ ಹೇಗೆ, ಎನ್ನುವುದೇ ಚಿಂತೆ ಶಂಕರನಿಗೆ. ಹಳ್ಳಿಯಲ್ಲಿ ಯಾರಿಂದ್ಲಾದ್ರೂ ಸ್ವಲ್ಪ ಗೋಧಿ ಹಿಟ್ಟು ಸಾಲ ಕೇಳೋಣಾಂದ್ರೂ ಎಲ್ಲೂ ಸಿಗದಾಯ್ತು. ಹಳ್ಳಿಯವರೆಲ್ಲಾ ಮಾನವರೇ ಹೊರ್‍ತು ದೇವತೆಗಳಲ್ವಲ್ಲಾ. ಹಾಗಿಲ್ದಿದ್ರೆ ದೇವತೆಗಳು ಉಪಯೋಗಿಸೋ ಪದಾರ್ಥ ಸಿಗೋದಾದ್ರೂ ಹೇಗೆ? ಅದೃಷ್ಟವಶಾತ್ ಹಳ್ಳಿಯ ಪಂಡಿತರಲ್ಲಿ ಸ್ವಲ್ಪ ಗೋಧಿ ಇತ್ತು. ಸವಾಸೇರು ಗೋಧಿ ಸಾಲ ತಂದು ಹೆಂಡತಿಗೆ ಬೀಸಲು ಹೇಳಿದ. ಮಹಾತ್ಮ ಭೋಜನ ಮಾಡಿ ಮಲಗಿ, ಬೆಳಗ್ಗೆ ಶಂಕರನನ್ನು ಆಶೀರ್ವದಿಸಿ ತನ್ನ ದಾರಿ ಹಿಡಿದ.

ಪಂಡಿತರು ವರ್ಷದಲ್ಲೆರಡು ಬಾರಿ ಎಲ್ಲರಿಂದಲೂ 'ಕಣಜದ ಕಾಳು' ವಸೂಲಿ ಮಾಡುವರು. ''ಸವಾಸೇರು ಗೋಧಿ ನೀನು ಇವ್ರಿಗೆ ವಾಪಸು ಕೊಡೋದೆ? ಬದಲಿಗೆ ಪಂಚೇರಿಗಿಂತಲೂ ಸ್ವಲ್ಪ ಹೆಚ್ಚು ಕಣಜದ ಕಾಳನ್ನೇ ಕೊಟ್ಟುಬಿಡ್ತೀನಿ. ಅವ್ರಿಗೂ ಅರ್ಥವಾಗತ್ತೆ, ನಂಗೂ ಗೊತ್ತಲ್ಲ'', ಎಂದುಕೊಂಡು ಚೈತ್ರದಲ್ಲಿ ಪಂಡಿತರು ಬಂದಾಗ ಸುಮಾರು ಎರಡೂವರೆ ಪಂಚೇರಿನಷ್ಟು ಗೋಧಿ ಕೊಟ್ಟು, ಅದರ ಬಗ್ಗೆ ಏನೂ ಚರ್ಚಿಸದೆ ತನ್ನನ್ನು ಋಣಮುಕ್ತನೆಂದು ತಿಳಿದ ಶಂಕರ. ಪಂಡಿತರೂ ಕೂಡ ಪುನಃ ಅದರ ಬಗ್ಗೆ ಮತ್ತೇನೂ ಕೇಳಲಿಲ್ಲ. ಈ ಸವಾಸೇರು ಗೋಧಿಯ ಸಾಲ ತೀರಿಸಲು ತಾನು ಮತ್ತೊಂದು ಜನ್ಮವೆತ್ತಬೇಕಾದೀತೆಂದು ಶಂಕರನಿಗೇನು ಗೊತ್ತು?

ಏಳು ವರ್ಷ ಕಳೆಯಿತು. ಪಂಡಿತರು ಮಹಾಜನರಾದರು. ರೈತ ಶಂಕರ ಕೂಲಿಯಾಳಾದ. ಅವನ ತಮ್ಮ ಮಂಗಲ್ ಅವನಿಂದ ಬೇರೆಯಾದ ನಂತರ ರೈತರಾಗಿದ್ದ ಇಬ್ಬರೂ ಕೂಲಿಗಳಾದರು. ದ್ವೇಷದ ಜ್ವಾಲೆ ಹಬ್ಬುವುದು ಶಂಕರನಿಗಿಷ್ಟವಿಲ್ಲ. ಆದರೆ ಪರಿಸ್ಥಿತಿ ಅವನನ್ನು ವಿವಶನನ್ನಾಗಿಸಿತ್ತು. ಎರಡು ಒಲೆಗಳು ಹೊತ್ತಿದ ದಿನ, ಶಂಕರ ಬಿಕ್ಕಿ ಬಿಕ್ಕಿ ಅತ್ತ.

ಇಂದಿನಿಂದ ಸೋದರರು ಶತ್ರುಗಳು. ಅಂದು ಪ್ರೇಮದ ಹಾಲಿನ ಬಂಧನ ಒಡೆದಿತ್ತು. ಭಗೀರಥ ಪ್ರಯತ್ನದಿಂದ ಅವನು ಕುಲಗೌರವದ ವೃಕ್ಷಕ್ಕೆ ನೀರೆರೆದಿದ್ದ. ಆದರೆ ಅದಿಂದು ಬೇರು ಸಹಿತ ಉರುಳಿದ್ದು ಕಂಡು ಅವನ ಹೃದಯ ಛಿದ್ರವಾಗಿತ್ತು. ವಾರವಾದರೂ ಅನ್ನ ಮುಟ್ಟದಾದ. ದಿನವಿಡೀ ಬಿಸಿಲಿನಲ್ಲಿ ದುಡಿದು, ರಾತ್ರಿ ಮುಸುಕು ಬೀರಿ ಮಲಗುತ್ತಿದ್ದ. ಮನೋವೇದನೆಯಿಂದ ಜೀವ ಮುರುಟಿ ಅನಾರೋಗ್ಯ ಪೀಡಿತನಾದ. ಜೀವನ ನಡೆಸುವುದೆಂತು? ಐದು ಬೀಘಾ ಹೊಲದಲ್ಲಿ ಉಳಿದದ್ದರ್ಧ, ಒಂಟಿ ಎತ್ತು, ಇಟ್ಟುಕೊಂಡು ಹೊಲ ಮಾಡೋದೇನು? ಮಣ್ಣು ಹೊಲಮಾಡುವುದು ಕೇವಲ ಮರ್ಯಾದೆಯ ರಕ್ಷಣೆಯ ಸಾಧನ ಮಾತ್ರವಾಗಿ ಉಳಿಯಿತೇ ಹೊರತು ಜೀವನಕ್ಕಾಗಿ ಕೂಲಿ ಮಾಡದೆ ಗತ್ಯಂತರವಿಲ್ಲದಂತಾಯ್ತು.

ಒಂದು ದಿನ ಕೂಲಿಯಿಂದ ಹಿಂದಿರುಗುತ್ತಿದ್ದಾಗ ದಾರಿಯಲ್ಲಿ ನಿಲ್ಲಿಸಿದ ಪಂಡಿತರು, ''ನಾಳೆ ಬಂದು ನಿನ್ನ ಲೆಕ್ಕ ಚುಕ್ತ ಮಾಡು. ಐದೂವರೆ ಮಣ ಗೋಧಿ ಯಾವಾಗಿನಿಂದ ಬಾಕಿ ಬಿದ್ದಿದೆ. ನಿನಗೆ ಹಿಂತಿರುಗಿಸೋ ಆಲೋಚನೇನೂ ಇಲ್ವಲ್ಲಾ. ಎಲ್ಲಾ ನುಂಗಿ ಹಾಕ್ಬೇಕೂಂತಿದ್ದೀಯಾ'' ಎಂದ್ರು.

ಹಿಂದಿ ಮೂಲ :

**ಮುನ್ಷಿ ಪ್ರೇಮಚಂದ್**

ಭಾವಾನುವಾದ :

**ಟಿ. ಎಸ್. ಲಲಿತ**

ಶಂಕರ ಅಚ್ಚರಿಯಿಂದ, ''ನಾನು ನಿಮ್ಮಿಂದ ಯಾವಾಗ ಐದೂವರೆ ಮಣ ಗೋಧಿ ತಗೊಂಡಿದ್ದೆ? ನೀವು ಮರ್ತಿರ್ಬೇಕು. ನಾನು ಯಾರಿಂದ್ಲೂ ಚಟಾಕು ಧಾನ್ಯವಾಗಲೀ ಬಿಡಿಗಾಸಾಗಲೀ ಸಾಲ ಪಡೆದಿಲ್ಲ'', ಎಂದ.

''ಈ ಅನಿಯತ್ತಿನ ಫಲದಿಂದ್ಲೇ ನಿಂಗೆ ಊಟಕ್ಕೂ ಏನೂ ಸಿಕ್ಕಿಲ್ಲ'', ಎನ್ನುತ್ತ ಏಳು ವರ್ಷದ ಹಿಂದೆ ಶಂಕರನಿಗೆ ಕೊಟ್ಟಿದ್ದ ಸಾಲದ ಸವಾಸೇರು ಗೋಧಿಯ ವಿಷಯ ತಿಳಿಸಿದಾಗ, ಶಂಕರ ಅವಾಕ್ಕಾದ. ''ದೇವರೇ ಎಷ್ಟು ಬಾರಿ ನಾನಿವರಿಗೆ ಕಣಜದ ಕಾಳು ಕೊಟ್ಟಿದ್ದೇನೆ! ಇವ್ರು ನಂಗಾಗಿ ಯಾವ ಕೆಲ್ಸ ಮಾಡಿದಾರೆ? ಯಾವ್ದೋ ಲೆಕ್ಕ ಪತ್ರ ನೋಡ್ದಾಗ, ಶಕುನ ವಿಚಾರಿಸ್ದಾಗ ಅಷ್ಟಿಷ್ಟು ದಕ್ಷಿಣೆ ಪಡೆದೇ ಹೋಗ್ತಿದ್ರು. ಸವಾಸೇರು ಗೋಧಿಗೆ ಮೊಟ್ಟೆಯಂತೆ ಕಾವು ಕೊಟ್ಟು, ಎಂಥಾ ಪಿಶಾಚಿಯನ್ನ ನಿಲ್ಲಿಸಿದಾರೇಂದ್ರೆ, ಅದು ನನ್ನನ್ನು ನುಂಗೇ ಹಾಕತ್ತೆ. ಇಷ್ಟು ದಿನಗಳಲ್ಲಿ ಒಂದು ಬಾರಿಯಾದ್ರೂ ಹೇಳಿದ್ರೆ, ಗೋಧಿ ಅಳೆದು ಕೊಟ್ಬಿಡ್ತಿದ್ನಲ್ಲಾ. ಇದಕ್ಕಾಗೇ ಇದ್ವರ್ಗೂ ಸುಮ್ನಿದ್ರೇನು?''

''ಮಹಾರಾಜ್, ಸಾಲಾಂತ ಹೇಳಿ ನಾನೆಂದೂ ನಿಮ್ಹತ್ರ ಅಷ್ಟು ಗೋಧಿ ತಗೊಂಡಿಲ್ಲಾ. ಆದ್ರೆ ಎಷ್ಟೋ ಬಾರಿ ಸೇರೆರಡು ಸೇರು ಕಣಜದ ಕಾಳೂಂತ ಕೊಟ್ಟಿದೀನಿ. ಈಗ ನೀವು ಐದೂವರೆ ಮಣ ಕೇಳಿದ್ರೆ ನಾನೆಲ್ಲಿಂದ ಕೊಡ್ಲಿ?'' ಎಂದ ಶಂಕರ.

''ಬಕ್ಷೀಸಂತ ನೀನು ನಾಲ್ಕು ಸೇರು ಕೊಟ್ಟಿದ್ರೂ ಅದ್ರದ್ದೇನೂ ಲೆಕ್ಕ ಇಲ್ಲ. ಲೆಕ್ಕದ ಪುಸ್ತಕದಲ್ಲಿ ನಿನ್ನ ಹೆಸರ್ನಲ್ಲಿ ಐದೂವರೆ ಮಣ ಅಂತ ಬರ್ದಿದೆ. ಯಾರಿಂದ ಬೇಕಾದ್ರೂ ಲೆಕ್ಕ ಮಾಡಿಸ್ಕೊ. ಕೊಟ್ರೆ ನಿನ್ನ ಲೆಕ್ಕ ಚುಕ್ತ, ಇಲ್ದಿದ್ರೆ ಹೆಚ್ಚಾ ಹೋಗತ್ತೆ''.

''ಈ ಬಡವನ್ನ ಯಾಕಿಷ್ಟು ಸತಾಯಿಸ್ತೀರ ? ನಂಗೆ ತಿನ್ನೋಕ್ಕೇ ಗತಿ ಇಲ್ಲ, ಇಷ್ಟು ಗೋಧೀನ ಯಾರ ಮನೆಯಿಂದ ತರ್ಲಿ ?''

''ಯಾರ ಮನೆಯಿಂದ್ಲಾದ್ರೂ ತಾ. ನಾನಂತೂ ಚಟಾಕು ಗೋಧೀನೂ ಬಿಡೋವ್ನಲ್ಲಾ, ಇಲ್ಲಿ ಕೊಡ್ದಿದ್ರೂ, ಆ ಭಗವಂತನ ಮನೇಲಾದ್ರೂ ಕೊಡ್ತೀಯಲ್ಲಾ.''

ಶಂಕರ ನಡುಗಿದ. ವಿದ್ಯಾವಂತರಾಗಿದ್ರೆ ಹೇಳ್ತಿದ್ರು, ''ಒಳ್ಳೇದು ಭಗವಂತನ ಮನೇಲೇ ಕೊಡ್ತೀವಿ. ಅಲ್ಲಿಯ ತೂಕ ಇಲ್ಲಿನದಕ್ಕಿಂತ ಹೆಚ್ಚೇನಲ್ವಲ್ಲಾ. ಇದ್ರ ಬಗ್ಗೆ ನಮ್ಮಲ್ಲಿ ಯಾವ ಪ್ರಮಾಣವೂ ಇಲ್ದಿರೋದ್ರಿಂದ ಅದ್ರದ್ದೇನು ಚಿಂತೆ'', ಅಂತ. ಆದ್ರೆ ಶಂಕರ ಇಷ್ಟೊಂದು ತಾರ್ಕಿಕ ವ್ಯವಹಾರಚತುರನಾಗಿರಲಿಲ್ಲ. ಒಂದಂತೂ ಋಣ. ಅದೂ ಬ್ರಾಹ್ಮಣನದು. ಲೆಕ್ಕದ ಪುಸ್ತಕದಲ್ಲಿ ಹೆಸರಿದ್ರಂತೂ ಸೀದಾ ನರಕಕ್ಕೆ ಹೋಗ್ತೀನಿ. ಈ ವಿಚಾರದಿಂದ್ಲೇ ಅವ್ನು ಭೀತನಾಗಿ ಹೇಳ್ದ: ''ಮಹಾರಾಜ್ ಅಲ್ಲೇಕೆ ? ಸಾಧ್ಯವಾದಷ್ಟೂ ಇಲ್ಲೇ ಕೊಡ್ತೀನಿ. ಈ ಜನ್ಮದಲ್ಲಂತೂ ಅನುಭವಿಸ್ತಿದೀನಿ. ಇನ್ನೊಂದು ಜನ್ಮಕ್ಕೂ ಏಕೆ ಮುಳ್ಳು ನೆಡಲಿ ? ಸಾಸಿವೆಕಾಳನ್ನು ಪರ್ವತ ಮಾಡಿದೀರ. ಬ್ರಾಹ್ಮಣನಾಗಿ ಹೀಗೆ ಮಾಡ್ಬಾರ್ದಿತ್ತು. ಅವತ್ತೇ ಗಲಾಟೆ ಮಾಡಿ ತಗೊಂಡಿದ್ರೆ ಇವತ್ತು ನನ್ನ ತಲೆ ಮೇಲೆ ಇಂಥ ಭಾರ ಯಾಕೆ ಬೀಳ್ತಿತ್ತು? ನಾನೇನೋ ಕೊಡ್ತೀನಿ. ಆದ್ರೆ ದೇವ್ರಿದ್ದು ನೀವೂ ಉತ್ರ ಕೊಡ್ಬೇಕಾಗತ್ತೆ.''

''ಆ ಹೆದ್ರಿಕೆ ನಿಂಗಿರ್ಬೇಕು, ನಂಗ್ಯಾಕೆ ? ಅಲ್ಲಂತೂ ಎಲ್ರೂ ನನ್ನ ಬಂಧು ಬಾಂಧವರು ತಾನೇ? ಋಷಿ ಮುನಿಗಳೆಲ್ಲಾ ಬ್ರಾಹ್ಮಣರೇ, ಎಲ್ಲಾ ಸರಿ ಮಾಡ್ತಾರೆ. ಆದ್ರೆ ನೀನು ಯಾವಾಗ ಕೊಡ್ತೀಯಾ ?''

''ಸದ್ಯಕ್ಕೆ ನನ್ಹತ್ರ ಅಂತೂ ಏನಿಲ್ಲ ಯಾರಿಂದಾದ್ರೂ ಸಾಲನಾದ್ರೂ ತಂದು ಕೊಡ್ಬೇಕು.''

''ನಾನಿದನ್ನ ಒಪ್ಪಲ್ಲ. ಏಳು ವರ್ಷ ಆಗ್ಹೋಯ್ತು. ಇನ್ನೊಂದು ದಿನವೂ ತಡೆಯೋಕ್ಕಾಗಲ್ಲ. ಗೋಧಿ ಕೊಡಕ್ಕಾಗ್ದಿದ್ರೆ ಪತ್ರ ಬರ್ಕೊಡು.''

''ನಾನಂತೂ ಕೊಡ್ಲೇಬೇಕು, ಗೋಧಿನಾದ್ರೂ ತಗೊಳ್ಳಿ, ಪತ್ರಾನಾದ್ರೂ ಬರೆಸ್ಕೊಳ್ಳಿ. ಯಾವ ಲೆಕ್ಕದ್ಲಿ ಬೆಲೆ ಕಟ್ತೀರಾ ?''

''ಪೇಟೆ ಬೆಲೆ ಐದು ಸೇರು. ಸವಾಸೇರು ಗೋಧಿ ಬಿಟ್ಕೊಡ್ತೀನಿ''.

''ಹೇಗೂ ಕೊಡ್ತಿದೀನಿ. ಪೇಟೆ ಬೆಲೇಲೆ ಕೊಡ್ತೀನಿ. ಸವಾಸೇರು ರಿಯಾಯ್ತಿ ತಗೊಂಡು, ನಾನೇಕೆ ದೋಷ ಹೊತ್ಕೊಳ್ಲಿ?'' ಲೆಕ್ಕ ಹಾಕಿದ್ರೆ ಗೋಧಿಯ ಮಾರುಕಟ್ಟೆ ಬೆಲೆಗೆ ಶೇಕಡ ೩ರಷ್ಟು ಬಡ್ಡಿಯಂತೆ, ಅರವತ್ತು ರೂಪಾಯಿಗೆ ಪತ್ರ ಬರೆಸಲಾಯ್ತು. ವರ್ಷದಲ್ಲಿ ತೀರಿಸ್ದಿದ್ರೆ, ಬಡ್ಡಿ ದರ ಇನ್ನೂ ಶೇಕಡ ೨ ರೂ. ಜಾಸ್ತಿಯಾಗತ್ತೆ. ಪತ್ರದ ಖರ್ಚನ್ನೂ ಶಂಕರನೇ ಕೊಡಬೇಕಾಯ್ತು.

ಹಳ್ಳಿಯವರೆಲ್ಲಾ ಪಂಡಿತರ ನಿಂದನೆ ಮಾಡಿದರೂ, ಯಾರೂ ಬಾಯಿಬಿಟ್ಟು ಮಾತಾಡಲೊಲ್ಲರು. ಮಹಾಜನನಿಂದ ಎಲ್ರಿಗೂ ಒಂದಲ್ಲ ಒಂದು ಕೆಲಸವಾಗ್ಬೇಕು. ಅವ್ನ ಬಾಯಿಗೆ ಯಾರು ಬೀಳ್ತಾರೆ.

ವರ್ಷಪೂರ್ತಿ ಶಂಕರ ಗೇಯ್ಮೆ ಮಾಡಿದ. ಅವಧಿಗೆ ಮೊದಲೇ ರೂಪಾಯಿ ತೀರಿಸುವ ವ್ರತ ತೊಟ್ಟ. ಹಿಂದೆಯೂ ಮಧ್ಯಾಹ್ನ ಒಲೆ ಹಚ್ಚುತ್ತಿರಲಿಲ್ಲ, ಕಡಲೆಯಲ್ಲೇ ಕಾಲ ಕಳೆಯುತ್ತಿತ್ತು. ಈಗದೂ ನಿಂತಿತು. ಕೇವಲ ಹುಡುಗರಿಗಾಗಿ ಮಾತ್ರ ರಾತ್ರಿ ರೊಟ್ಟಿ ಮಾಡಲಾಗುತ್ತಿತ್ತು. ತಂಬಾಕನ್ನು ಬಿಟ್ಟಿರಲು ಸಾಧ್ಯವೇ ಇರಲಿಲ್ಲ ಶಂಕರನಿಗೆ. ಈಗದೂ ಈ ಕಠಿಣ ವ್ರತಕ್ಕಾಹುತಿಯಾಯ್ತು. ಹುಕ್ಕ, ಚಿಲುಮೆ ಮುರಿಯಿತು. ತಂಬಾಕಿನ ಪೆಟ್ಟಿಗೆ ಪುಡಿ ಪುಡಿಯಾಯ್ತು. ಬಟ್ಟೆಯನ್ನಂತೂ ಮೊದಲೇ ತ್ಯಜಿಸಿದ್ದ, ಈಗಂತೂ ಮರ್ಯಾದೆ ಉಳಿಸಿಕೊಳ್ಳಲು ಅವಶ್ಯಕವಾದಷ್ಟೆ ಧರಿಸುತ್ತಿದ್ದ. ಶಿಶಿರದ ಮೂಳೆ ಕೊರೆಯುವ ಛಳಿಯನ್ನು ಬೆಂಕಿಯಿಂದ ಎದುರಿಸಿದ. ಈ ದೃಢಸಂಕಲ್ಪದ ಫಲ ಆಶೆಗೂ ಮೀರಿ ನಿಂತಿತು. ವರ್ಷಾಂತ್ಯಕ್ಕೆ ಅವನ ಬಳಿ ಅರವತ್ತು ರೂಪಾಯಿ ಒಟ್ಟಾಯ್ತು. ಪಂಡಿತರಿಗೆ ಈ ಅರವತ್ತು ರೂಪಾಯಿ ಕೊಟ್ಟು, ಮಿಕ್ಕಿದ್ದನ್ನು ಬೇಗನೆ ತಂದುಕೊಡುವುದಾಗಿ ಹೇಳ್ತೀನಿ. ಹದಿನೈದು ರೂಪಾಯಿಗಳ ಮಾತು ತಾನೆ ? ಪಂಡಿತರು ಇಷ್ಟು ಕೂಡ ಒಪ್ಪಲಾರರೆ, ಎಂದುಕೊಂಡು ಪಂಡಿತರಿಗೆ ಹಣ ಒಪ್ಪಿಸಿದ. ಪಂಡಿತರು ಅಚ್ಚರಿಯೊಂದಿಗೆ, ''ಏನು ಯಾರಿಂದ್ಲಾದ್ರೂ ಸಾಲ ತಂದ್ಯೇನು ?'' ಅಂದ್ರು.

''ಇಲ್ಲ ಮಹರಾಜ್, ತಮ್ಮ ಆಶೀರ್ವಾದದಿಂದ ಕೂಲಿ ಚೆನ್ನಾಗಿ ಸಿಕ್ತು.''

''ಆದ್ರೆ ಇದ್ರಲ್ಲಿ ಬರೀ ಅರವತ್ತು ರೂಪಾಯಿ ಮಾತ್ರ ಇದ್ಯಲ್ಲಾ ?''

''ಹೌದು ಮಹರಾಜ್, ಈಗ ಸದ್ಯಕ್ಕೆ ಇಷ್ಟು ತಗೊಳ್ಳಿ. ಬಾಕೀದನ್ನ ನಾನಿನ್ನು ೨-೩ ತಿಂಗಳಲ್ಲಿ ಕೊಟ್ಬಿಡ್ತೀನಿ. ನನ್ನನ್ನು ಋಣಮುಕ್ತನನ್ನಾಗಿಸಿ.''

''ನೀನು ನನ್ನ ಒಂದೊಂದು ಪೈಸೆಯನ್ನು ತೀರಿಸಿದಾಗಲೇ ಋಣಮುಕ್ತನಾಗಲು ಸಾಧ್ಯ. ಹೋಗಿ ನನ್ನ ಉಳಿದ ಹದಿನೈದು ರೂಪಾಯಿಗಳನ್ನು ತಾ.''

''ಮಹಾರಾಜ್, ಇಷ್ಟು ದಯೆ ತೋರಿ. ಈಗ ಸಂಜೆಯ ಕೂಳಿಗೂ ಗತಿ ಇಲ್ಲ. ಹಳ್ಳಿಯಲ್ಲೇ ಇದ್ರೆ ಯಾವಾಗ್ಲಾದ್ರೂ ಕೊಟ್ಟೇ ಕೊಡ್ತೀನಿ.''

''ನಾನು ಈ ರೋಗಾನ ಬೆಳೆಯೋಕ್ಕೆ ಬಿಡೋಲ್ಲ, ಹೆಚ್ಚು ಮಾತು ಬೇಕಿಲ್ಲ. ನನ್ನ ಹಣ ಪೂರ್ತಿ ಸಿಗ್ದಿದ್ರೆ, ಇವತ್ತಿಂದ ಶೇಕಡ ೩ ರೂಪಾಯಿ ಬಡ್ಡಿ ಬೀಳತ್ತೆ. ನಿನ್ನ ಹಣ ಬೇಕಿದ್ರೆ ನಿನ್ನ ಮನೇಲೇ ಇಟ್ಕೋ, ಇಲ್ಲಾ ಇಲ್ಲೇ ಬಿಟ್ಹೋಗು.''

''ಆಯ್ತು, ಎಷ್ಟು ತಂದಿದೀನೋ ಅಷ್ಟು ಇಟ್ಕೊಳ್ಳಿ. ನಾನು ಹೋಗಿ ಎಲ್ಲಿಂದ್ಲಾದ್ರೂ ಹದಿನೈದು ರೂಪಾಯಿ ತಂದ್ಕೊಡೋ ಯೋಚ್ನೆ ಮಾಡ್ತೀನಿ.''

ಶಂಕರ ಇಡೀ ಹಳ್ಳಿ ಜಾಲಾಡಿದ. ಆದ್ರೆ ಯಾರೂ ಹಣ ಕೊಡ್ಲಿಲ್ಲಾ. ಅವ್ನಲ್ಲಿ ವಿಶ್ವಾಸವಿಲ್ಲಾಂತ್ಲೋ, ಇಲ್ಲ ಅವ್ರಲ್ಲಿ ಹಣವಿಲ್ಲಾಂತ್ಲೋ ಅಲ್ಲ. ಆದ್ರೆ ಪಂಡಿತಜೀಯ ಶಿಕಾರಿಯನ್ನು ಛೇಡಿಸುವ ಧೈರ್ಯ ಯಾರಿಗೂ ಇರ್ಲಿಲ್ಲ.

ಕ್ರಿಯೆಯ ನಂತರ ಪ್ರತಿಕ್ರಿಯೆಯಾಗುವುದು ನೈಸರ್ಗಿಕ ನಿಯಮ. ಋಣಮುಕ್ತನಾಗಲು ಶಂಕರ ವರ್ಷವಿಡೀ ಎಷ್ಟೇ ಸಾಧನೆ ಮಾಡಿದರೂ ವಿಫಲನಾದಾಗ, ಅವನ ಸಂಯಮ ನಿರಾಸೆಯ ರೂಪ ತಾಳಿತು. ಇಷ್ಟು ಕಷ್ಟಪಟ್ಟರೂ ವರ್ಷದಲ್ಲಿ ಅರವತ್ತು ರೂಪಾಯಿಗಿಂತ ಹೆಚ್ಚು ಸಂಗ್ರಹಿಸಲು ಸಾಧ್ಯವಾಗದಿದ್ದಲ್ಲಿ, ಇದರ ಎರಡರಷ್ಟು ಹಣ ಹೊಂದಿಸಲು ಮತ್ಯಾವ ಮಾರ್ಗವಿದೆ ? ತಲೆಯ ಮೇಲೆ ಋಣದ ಭಾರ ಹೊರಲೇಬೇಕಾದಲ್ಲಿ ಭಾರ ಒಂದು ಮಣವಾದ್ರೇನು ? ಒಂದೂಕಾಲು ಮಣವಾದ್ರೇನು ? ಅವನ ಉತ್ಸಾಹ ಕ್ಷೀಣಿಸಿತು. ಶ್ರಮದ ಬಗ್ಗೆ ತಿರಸ್ಕಾರ ಮೂಡಿತು. ಆಸೆ ಉತ್ಸಾಹದ ತಾಯಿ. ಆಸೆಯಲ್ಲಿ ತೀಕ್ಷ್ಣತೆ ಇದೆ. ಬಲವಿದೆ. ಜೀವನವಿದೆ. ಅಂತೆಯೇ ಸಂಸಾರವನ್ನು ಮುನ್ನಡೆಸುವ ಶಕ್ತಿ ಇದೆ. ಆಶಾಹೀನನಾದ ಶಂಕರ ಉದಾಸೀನನಾದ. ಯಾವ ಅವಶ್ಯಕತೆಗಳನ್ನು ಅವನು ವರ್ಷದಿಂದ ಮುಂದೂಡಿದ್ದನೋ, ಅವು ಎದೆಯ ಮೇಲೆ ಸವಾರಿ ಮಾಡುವ ಪಿಶಾಚಿಗಳಾಗಿ, ತಮ್ಮ ಕಾಣಿಕೆ ಪಡೆಯದೆ, ಬಿಟ್ಟು ಹೋಗುವಂತಿರಲಿಲ್ಲ. ಈಗ ಶಂಕರನಿಗೆ ಕೂಲಿ ಸಿಕ್ಕಿದರೂ, ಅವನು ಹಣ ಕೂಡಿಡುತ್ತಿರಲಿಲ್ಲ. ಒಮ್ಮೆ ಬಟ್ಟೆ ತಂದರೆ, ಮತ್ತೊಮ್ಮೆ ಏನಾದರೂ ತಿನ್ನುವ ವಸ್ತು. ಮೊದಲಿನ ತಂಬಾಕಿನ ಜಾಗದಲ್ಲೀಗ ಚರಸ್ ಹಾಗೂ ಗಾಂಜಾಗಳೂ ಸೇರಿದವು. ತಾನಾರಿಗೂ ಒಂದು ಕಾಸೂ ಕೊಡಬೇಕಿಲ್ಲ ಎನ್ನುವಂತೆ, ಹಣ ಹಿಂದಿರುಗಿಸುವ ಬಗ್ಗೆ ಅವನಿಗೀಗ ಯಾವ ಚಿಂತೆಯೂ ಇಲ್ಲ. ಹಿಂದೆ ಚಳಿ, ಜ್ವರ, ಬಂದರೂ ಕೆಲಸ ಮಾಡಲು ಹೋಗುತ್ತಿದ್ದ. ಈಗ ಕೆಲಸಕ್ಕೆ ಹೋಗದಿರಲು ಏನಾದರೂ ನೆವ ಹುಡುಕುತ್ತಿದ್ದ.

ಮೂರು ವರ್ಷಗಳು ಹೀಗೆಯೇ ಉರುಳಿದವು. ಪಂಡಿತರು ಒಮ್ಮೆಯೂ ಹಣದ ಬಗ್ಗೆ ತಗಾದೆ ಮಾಡಲಿಲ್ಲ. ಅವರು ಚತುರ ಬೇಟೆಗಾರನಂತೆ ನಿಖರವಾದ ಗುರಿ ಇಡಲು ಹೊಂಚುಹಾಕುತ್ತಿದ್ದರು. ಮೊದಲೇ ಬೇಟೆಯನ್ನು ಬೆಚ್ಚಿ ಬೀಳಿಸುವುದು ಅವರ ನೀತಿಗೆ ವಿರುದ್ಧವಾಗಿತ್ತು.

ಒಂದು ದಿನ ಪಂಡಿತ್‌ಜಿ ಶಂಕರನನ್ನು ಕರೆದು ಲೆಕ್ಕ ತೋರಿಸಿದರು. ಪಾವತಿಯಾಗಿದ್ದ ಅರವತ್ತು ರೂಪಾಯಿಗಳನ್ನು ಬಿಟ್ಟು ಶಂಕರನ ಲೆಕ್ಕದಲ್ಲಿನ್ನೂ ನೂರ ಇಪ್ಪತ್ತು ರೂಪಾಯಿ ಬಾಕಿ !

''ಇಷ್ಟೊಂದು ಹಣವನ್ನು ಮುಂದಿನ ಜನ್ಮದಲ್ಲಷ್ಟೇ ಹೊರತು ಈ ಜನ್ಮದಲ್ಲಿ ಕೊಡೋದು ಸಾಧ್ಯವಿಲ್ಲ.''

''ನಾನು ಈ ಜನ್ಮದಲ್ಲೇ ತಗೊಳ್ತೀನಿ. ಅಸಲು ಅಲ್ದಿದ್ರೂ ಬಡ್ಡೀನಾದ್ರೂ ಕೊಡ್ಲೇಬೇಕಲ್ಲಾ.''

''ಒಂದು ಎತ್ತಿದೆ. ಅದ್ನೂ ತಗೊಂಡ್ಬಿಡಿ. ಇನ್ನು ನನ್ಹತ್ರ ಇರೋದಾದ್ರೂ ಏನು ?''

''ಎತ್ತು ತಗೊಂಡು ನಾನೇನ್ಮಾಡ್ಲಿ? ನಂಗೆ ಕೊಡೋಕೆ ನಿನ್ಹತ್ರ ಬೇಕಾದಷ್ಟಿದೆ.''

''ಇನ್ನೇನಿದೆ, ಮಹಾರಾಜ್ ?''

''ಇದೆ, ನೀನಂತೂ ಇದೀಯಲ್ಲಾ. ನೀನೂ ಎಲ್ಲಾದ್ರೂ ಕೂಲಿ ಮಾಡೋಕೆ ಹೋಗ್ತೀಯಲ್ಲಾ. ನಾನೂ ಹೊಲ ಮಾಡೋಕೆ ಕೂಲಿಯವ್ರನ್ನ ಇಟ್ಕೊಳ್ಲೇಬೇಕು. ಬಡ್ಡಿಗಾಗಿ ನೀನು ನನ್ನಲ್ಲಿ ಕೆಲ್ಸಮಾಡು. ಅನುಕೂಲ ವಾದಾಗ ಅಸಲು ತೀರಿಸು. ಎಲ್ಲೀವರ್ಗೆ ನನ್ನ ಹಣ ತೀರಲ್ವೋ, ಅಲ್ಲೀವರ್ಗೂ ನೀನು ಬೇರೆಕಡೆ ಕೆಲ್ಸ ಮಾಡೋದು ಸಾಧ್ಯವಿಲ್ಲ. ನಿನ್ಹತ್ರ ಬೇರೇನೂ ಆಸ್ತಿ ಇಲ್ಲ, ಇಷ್ಟು ದೊಡ್ಡ ಗಂಟನ್ನು ಏತಕ್ಕಾಗಿ ಬಿಡ್ಲಿ ? ತಿಂಗ್ಳು ತಿಂಗ್ಳು

ನೀನು ಬಡ್ಡಿ ಕೊಡ್ತೀಯೋ ಇಲ್ವೋಂತ ನೋಡೋ ಜವಾಬ್ದಾರಿ ಬೇರೆ ಯಾರು ತಗೋತಾರೆ ? ಬೇರೆಲ್ಲೋ ದುಡ್ಕೊಂಡು ನೀನು ನನ್ನ ಬಡ್ಡೀನೂ ತೀರ್ಸೋಕೆ ಸಾಧ್ಯವಾಗ್ದೇ ಇದ್ರೆ ಇನ್ನು ಅಸಲಿನ ವಿಷ್ಯ ಹೇಳೋದೇನಿದೆ ?''

''ಮಹಾರಾಜ್, ನಾನು ದುಡ್ಯೋದೆಲ್ಲಾ ಬಡ್ಡೀಗೇ ಹೋದ್ರೆ ನಾನೇನು ಊಟಮಾಡ್ಲಿ ?''

''ನಿನ್ಹೆಂಡ್ತಿ ಇದಾಳೆ, ಮಕ್ಳಿದಾರೆ. ಅವ್ರಿಗೆಲ್ಲ ಏನು ಕೈಕಾಲು ಬಿದ್ದುಹೋಗಿದ್ಯಾ ? ನಾನಿದೀನಲ್ಲ, ದಿನಾ ನಿಂಗೆ ಗಂಜಿಗೆ ಅರ್ಧ ಸೇರು ಜೋಳ ಕೊಡ್ತೀನಿ. ಹೊದ್ಯೋಕೆ ವರ್ಷಕ್ಕೊಂದು ಕಂಬ್ಳಿ ಕೊಡ್ತೀನಿ. ಒಂದು ಬಂಡೀನೂ ಕೊಡಸ್ತೀನಿ. ಇನ್ನೇನು ಬೇಕು ? ಬೇರೇವ್ರು ನಿಂಗೆ ಆರಾಣೆ ಕೊಡ್ಬಹ್ದು. ಆದ್ರೆ ನಂಗಂಥ ದರ್ದೇನಿದೆ ಹೇಳು. ನಾನು ನಿನ್ನನ್ನ, ನಿನ್ನ ದುಡ್ಡು ಭರ್ತಿ ಮಾಡ್ಸೋಕೆ ಇಟ್ಕೋತೀನಿ.''

ಶಂಕರ ಸ್ವಲ್ಪಹೊತ್ತು ಆಳವಾದ ಚಿಂತೆಯಲ್ಲಿ ಮುಳುಗಿ, ನಂತರ ಹೇಳಿದ, ''ಮಹಾರಾಜ್, ಇದಂತೂ ಇಡೀ ಜನ್ಮದ ಗುಲಾಮಗಿರಿ ಆಯ್ತು.''

''ಗುಲಾಮಗಿರಿ ಅಂತ್ಲಾದ್ರೂ ತಿಳ್ಕೊ, ಕೂಲಿ ಅಂತ್ಲಾದ್ರೂ ತಿಳ್ಕೋ. ನನ್ನ ದುಡ್ಡು ಪೂರಾ ಸಂದಾಯವಾಗೋವರ್ಗೂ ನಾನು ನಿನ್ನ ಬಿಡಲ್ಲ. ನೀನೇನಾದ್ರೂ ಓಡ್ಹೋದ್ರೆ ನಿನ್ನ ಮಗ ತುಂಬಿಸಿಕೊಡ್ತಾನೆ. ಯಾರೂ ಇಲ್ಲದಾಗಿನ ಮಾತು ಬೇರೆ.''

ಈ ನಿರ್ಣಯದ ಮೇಲೆ ಬೇರೆ ಅಪೀಲೇ ಇಲ್ಲ. ಕೂಲಿಯವನಿಗೆ ಯಾರು ಜಮಾನತ್ತು ಕೊಡ್ತಾರೆ ? ಎಲ್ಲೂ ಆಶ್ರಯ ಸಿಗುವಂತಿಲ್ಲ. ಓಡಿಹೋದರೂ ಎಲ್ಲಿಗೆ ಹೋಗ್ಬೇಕು ? ಮರುದಿನದಿಂದ ಅವನು ಪಂಡಿತರ ಬಳಿ ಕೆಲಸಕ್ಕೆ ಹೋಗಲು ಶುರುಮಾಡಿದ. ಸವಾಸೇರು ಗೋಧಿಯ ಬದಲಿಗೆ ಜನ್ಮವಿಡೀ ಗುಲಾಮಗಿರಿಯ ಬೇಡಿ ಕಾಲಿಗೆ ಬಿತ್ತು. ಆ ನತದೃಷ್ಟನಿಗೆ, ಯಾವ್ದಾದ್ರೂ ವಿಷ್ಯದ ಬಗ್ಗೆ ಸಂತೋಷ ಆಗ್ತಿತ್ತು ಅನ್ನೋದಾದ್ರೆ ಇದು ನನ್ನ ಪೂರ್ವಜನ್ಮದ ಸಂಸ್ಕಾರ ಅನ್ನೋ ಸಮಾಧಾನ ಹೊಂದಿದ್ರಿಂದ. ಹೆಂಡತಿ ಇದ್ವಗ್ಲೂ ಮಾಡದ ಕೆಲಸಗಳನ್ನೆಲ್ಲಾ ಮಾಡ್ಬೇಕಾಗ್ತಿತ್ತು. ಮಕ್ಕಳು ಅಗಳು, ಅಗಳಿಗೂ ಕಾತರಿಸುತ್ತಿದ್ದವು. ಆದರೆ ಶಂಕರನದು ಮೌನವಾಗಿ ನೋಡುವ ಹೊರತು ಮತ್ತೇನೂ ಮಾಡಲಾಗದ ಅಸಹಾಯಕ ಸ್ಥಿತಿ. ಆ ಗೋಧಿಯ ಹೊರೆ ಯಾವುದೋ ದೇವತೆಯ ಶಾಪದ ರೀತಿ ಜನ್ಮವಿಡೀ ಅವನ ತಲೆಯಿಂದ ಕೆಳಗಿಳಿಯುವುದಿಲ್ಲ.

ಶಂಕರ ಪಂಡಿತರಲ್ಲಿ ಇಪ್ಪತ್ತು ವರ್ಷಗಳ ಗುಲಾಮಗಿರಿ ಮಾಡಿ, ಈ ಅಸಹನೀಯ ಸಂಸಾರದಿಂದ ನಿರ್ಗಮಿಸಿದ. ನೂರಿಪ್ಪತ್ತು ರೂಪಾಯಿಗಳ ಭಾರ ಇದುವರ್ಗೂ ಅವ್ನ ತಲೇ ಮೇಲಿತ್ತು. ಪಂಡಿತಜಿಗೆ ದೇವರ ದರ್ಬಾರಿನಲ್ಲೂ ಅವ್ನಿಗೆ ಕಷ್ಟ ಕೊಡೋದು ಉಚಿತವೆನಿಸಲಿಲ್ಲ. ಅಷ್ಟು ನಿರ್ದಯಿ ಅವರಾಗಿರಲಿಲ್ಲ. ಅವನ ಯುವ ಮಗನ ಕುತ್ತಿಗೆ ಹಿಡಿದರು. ಇಂದಿಗೂ ಆತ ಪಂಡಿತರಲ್ಲಿ ಗುಲಾಮಗಿರಿ ಮಾಡುತ್ತಲೇ ಇದ್ದಾನೆ. ಅವನ ಉದ್ಧಾರ ಯಾವಾಗ ಆಗುತ್ತೋ, ಅಥ್ವಾ ಆಗೋದೇ ಇಲ್ವೋ, ಆ ಈಶ್ವರನಿಗೇ ಗೊತ್ತು.

ಓದುಗರೇ ಈ ವೃತ್ತಾಂತ ಕಲ್ಪಿತವಲ್ಲ. ಇದೊಂದು ಸತ್ಯಘಟನೆ. ಇಂದಿಗೂ ಅಂಥ ಶಂಕರರಿಂದ, ಇಂಥ ಪಂಡಿತರಿಂದ ಪ್ರಪಂಚ ಹೊರತಾಗಿಲ್ಲ.

ಹಿಂದಿ ಮೂಲ : **ಮುನ್ಷಿ ಪ್ರೇಮಚಂದ್**
ಭಾವಾನುವಾದ : **ಟಿ. ಎಸ್. ಲಲಿತ**
ನಂ. ೭೦೨, ೧ನೇ ಮಹಡಿ, ೧೭ನೇ ಮುಖ್ಯರಸ್ತೆ
ಸರಸ್ವತಿಪುರಂ, ಮೈಸೂರು - ೫೭೦ ೦೦೯

---

*(೫೪ನೇ ಪುಟಕ್ಕೆ)*

ಮೌನದಿಂದ ಅವನ ಉಳಿವಿಗಾಗಿ ಪರಿತಪಿಸುತ್ತದೆ. ಮತಾಂತರಗೊಂಡು ರಮೇಶನಾಗಿದ್ದವನ ಹೆಣದ ಹಕ್ಕಿಗಾಗಿ ಕೃಷ್ಣ ಸರಳಾಯ, ವ್ಯಾಪಾರಿ ಗುಂಡಣ್ಣ ಶೆಟ್ಟರು, ಕಾಮತರು ಒಂದು ಯೋಜನೆ ಹಾಕಿದರೆ ಮತ್ತೊಂದು ಕಡೆ ಕಂಟ್ರಾಕ್ಟರ್ ಆದಂ ಸಾಹುಕಾರರು, ಹಸನಬ್ಬ, ಕ್ಯಾಪ್ಟನ್ ಖಾದರ್ ಇನ್ನೊಂದು ಯೋಜನೆ ಹಾಕುತ್ತಾರೆ. ಹೆಣಕ್ಕಾಗಿ ಆಶಿಸುವ ಧರ್ಮಾಂಧರ ಹುಳುಕುತನ ಇಲ್ಲಿ ಬಯಲಾಗಿದೆ. ಮತಾಂತರದ ಲಾಭ ಪಡೆಯಲು ತರ್ಕಿಸಿ, ಲಾಯರ್ ಕೃಷ್ಣಭಟ್ಟರನ್ನು ಕಂಡು ಗೊಂದಲಕ್ಕೀಡಾದ ಕೃಷ್ಣ ಸರಳಾಯರು ನಮ್ಮ ದೇಶದ ಕಾನೂನನ್ನು ಕುರಿತು ಹೇಳುವ ಮಾತು ಗಮನಿಸತಕ್ಕುದಾಗಿದೆ : ''ಒಟ್ಟಿನಲ್ಲಿ ನಮ್ಮ ದೇಶದ ಕಾನೂನೇ ಹೀಗೆ; ಒಂದು ರೀತಿಯಲ್ಲಿ ಉಪನಿಷತ್ತು ಇದ್ದ ಹಾಗೆ, ಅರ್ಥವಾದ ಹಾಗೂ ಅನಿಸ್ತದೆ; ಅನಿಸಿದ್ದು ಏನು ಎಂಬುದು ಮಾತ್ರ ಅರ್ಥವಾಗುವುದಿಲ್ಲ.''

ಮತಾಂತರಗೊಂಡವನ ಹೆಣಕ್ಕೆ ಆಶಿಸುವ ಎರಡು ಧರ್ಮಗಳ ವರ್ತನೆಗೆ 'ಹೆಣ' ಸಂಕೇತವಾದರೆ, ಮಗನು ಉಳಿಯುವುದಕ್ಕೆ ಆಶಿಸುವ ತಾಯಿಯ ಪ್ರೀತಿ 'ಜೀವ' ಸಂಕೇತವಾಗಿದೆ. ಇಲ್ಲಿ ವ್ಯವಹಾರ ಕೇಂದ್ರಿತ ಧರ್ಮ ಮತ್ತು ಮನುಷ್ಯ ಸಂಬಂಧಗಳ ಸಂಘರ್ಷ ಕತೆಯಾಗಿ ರೂಪುಗೊಂಡಿದೆ.

ಬೊಳುವಾರರು ತಮ್ಮ ಕಥೆಯಲ್ಲಿ ಹಿಂದೂ ಧರ್ಮ, ಕ್ರೈಸ್ತ ಧರ್ಮ ಮತ್ತು ಇಸ್ಲಾಂ ಧರ್ಮಗಳನ್ನು ಅದರ ಕರಾಳ ಕತ್ತಲೆಯಲ್ಲಿಯೆ ಬಡಿದು, ಒಂದು ದೇಶದಲ್ಲಿರಬೇಕಾದ ಮನುಷ್ಯ ಮನುಷ್ಯರ ಬಾಂಧವ್ಯದ ಭಾರತ ಧರ್ಮವನ್ನು ಜಾಗೃತಗೊಳಿಸಿದ್ದಾರೆ. ಈ ಬಗೆಯ ದೇಶಬಾಂಧವರ ಸಾಮರಸ್ಯ ಬದುಕಿನ ಭಾರತ ಧರ್ಮ ಪ್ರತಿಪಾದಕರಾದಂತಹ ಬೊಳುವಾರರಂತಹ ಸಾಹಿತಿಗಳೆ ಈ ನಾಡು ಸರ್ವಜನಾಂಗದ ಶಾಂತಿಯ ತೋಟವಾಗಲು ಕಾರಣರಾಗಿರುವುದು. ಇವರೇ ಭಾರತ ಧರ್ಮದ ಸಂಸ್ಕೃತಿಯನ್ನು ಪೋಷಿಸುವ ಹರಿಕಾರರು.

*   *   *

ಮತೀಯ ಪ್ರಜ್ಞೆಯನ್ನು ಒಡೆದುಹಾಕುತ್ತ ಮಾನವೀಯ ಪ್ರಜ್ಞೆಯ ಹಸಿವಿಗೆ ಆಶಿಸಿದ ಬೊಳುವಾರರನ್ನು 'ದೇವರುಗಳ ರಾಜ್ಯ' ಕಥೆಯಲ್ಲಿ ಕಾಣುತ್ತೇವೆ. ಜೋಸೆಫ್ ಡಿ' ಕಾಸ್ಟ ಹಸಿವಿನ ಅನ್ನಕ್ಕಾಗಿ, ಪ್ರೀತಿಗಾಗಿ ರಹಮತ್ ಆಗುತ್ತಾನೆ. ವ್ಯವಸ್ಥೆಯ ಸೂತ್ರಧಾರಿಗಳಾಗಿ ಧರ್ಮದ ಹೆಸರಿನಲ್ಲಿ ಬದುಕುವ ಫಾದರ್ ಮತ್ತು ಮುಸ್ಲಿಂ ವ್ಯಾಪಾರಿ ಅವನಿಗೆ ಅನ್ನ ಮತ್ತು ಪ್ರೀತಿಯನ್ನು ನೀಡುವುದಿಲ್ಲ. ಧರ್ಮ ಈ ನಾಡಿನ ಹುಸಿಮುಖ, ಉಳ್ಳವರ ಬೆಡಗಿನ ನಾಟಕ ಎಂಬುದನ್ನು ಓದುಗರ ಅರಿವಿಗೆ ಈ ಕಥೆ ತರುತ್ತದೆ. ಇದು ಮತಾಂತರದ ವಿಕಟ ಪರಿಚಯ ನೀಡುವ ಉತ್ತಮ ಕಥೆ.

*   *   *

'ಒಂದು ತುಂಡು ಗೋಡೆ' ಕಥೆಯಲ್ಲಿ ರೊಟ್ಟಿ ತಟ್ಟಿ, ರೊಟ್ಟಿ ಮಾರಿ ಬದುಕುವ ರೊಟ್ಟಿ ಪಾತುಮ್ಮ ದೇವರಾಜ ಅರಸರಿಂದ ಪಡೆದ ಚಿಕ್ಕ ಸೈಟ್‌ನಲ್ಲಿ ಒಂದು ಪುಟ್ಟಮನೆ ಕಟ್ಟಿಸಲು ಪಟ್ಟ ಪಡಿಪಾಟಲು ಮತ್ತು ಅವಳ ನಿಷ್ಕಲ್ಮಷ ಕುರಾನ್ ಧ್ಯಾನ– ಈ ದೇಶದ ಎಲ್ಲ ಬಡವರ ಬದುಕಿನ ರೀತಿಯಾಗಿದೆ. ಅವಳು ವಾರಕ್ಕೆ ಉಳಿಸುವ ಹತ್ತು ಹನ್ನೆರಡು ರೂಪಾಯಿ ಕೂಡಿಡುವುದು ಚಿನ್ನದ ವ್ಯಾಪಾರಿ ಶ್ರೀನಿವಾಸ ಆಚಾರ್ಯರಲ್ಲಿ . ಅವರಿಬ್ಬರ ಪರಸ್ಪರ ನಂಬಿಕೆ ಹಿಂದೂ ಮತ್ತು ಇಸ್ಲಾಂ ಮತಗಳನ್ನು ಮೀರಿದ್ದು. ಅದು ಮಾನವ ಧರ್ಮಕ್ಕೆ ಸಂಬಂಧಿಸಿದ್ದು.

ಧರ್ಮದ ಹೆಸರಿನ ಸ್ವಾರ್ಥ ಕೇಂದ್ರಿತ ವ್ಯಕ್ತಿ ರಾಮದಾಸ ಕಿಣಿಯವರ ಕುತಂತ್ರಕ್ಕೆ ಒಳಗಾಗಿ ಅಯೋಧ್ಯೆಗೆ ಕರಸೇವೆಗೆ ಹೋಗುವ ಶ್ರೀನಿವಾಸ ಆಚಾರ್ಯರ ಕಿರಿಮಗ ಚಂದ್ರಣ್ಣ, ವ್ಯವಸ್ಥೆಯ ದಾಳವಾಗುವ ಯುವಕರಿಗೆ ಸಂಕೇತವಾಗಿದ್ದಾನೆ. ಅವನು, ತಾನು ಒಡೆಯದ ಮಸೀದಿಯ ಗೋಡೆಯ ತುಂಡೊಂದನ್ನು ವಿಜಯದ ಸಂಕೇತವಾಗಿ ಕರವ್ಯವಸ್ಥೆಯ ಮುಖ್ಯಸ್ಥನಿಂದ ಪಡೆದಿರುತ್ತಾನೆ. ಧರ್ಮದ ಕತ್ತಲೆಯ ಒಳಹೊಕ್ಕು ಬಂದ ಅವನಿಗೆ ಆ ಒಂದು ಗೋಡೆಯ ತುಂಡು ಸಮಸ್ಯೆಯ ನೆಲೆಯಾಗುತ್ತದೆ. ಅವನ ಮನಸ್ಸು ಮುಸಲ್ಮಾನರನ್ನು ಕಂಡು ಮಾತಿಗೆ ಸಿಗಲಾರದ ಅಳುಕಿಗೆ ಒಳಗಾಗುತ್ತದೆ. ಅದನ್ನು ಬಾವಿಗೆ ಎಸೆದು ನಿರಾಳನಾದರೂ– ಅವರ ಚಿನ್ನದ ಅಂಗಡಿಯಲ್ಲಿ ಹಣ ಸಂಗ್ರಹಿಸಿಟ್ಟಿದ್ದ ರೊಟ್ಟಿ ಪಾತುಮ್ಮ ಚಂದ್ರಣ್ಣನಿಂದ ಆ ತುಂಡು ಪಡೆದು ತಾನು ಕಟ್ಟಿಸುವ ಗೋಡೆಗೆ ಸೇರಿಸಬೇಕೆಂದು ಆಶಿಸುತ್ತಾಳೆ.

ಇಲ್ಲಿ ಚಂದ್ರಣ್ಣ ಮತ್ತು ರೊಟ್ಟಿ ಪಾತುಮ್ಮಳಂತಹವರಲ್ಲಿ ಕೋಮು ವೈಷಮ್ಯವಿಲ್ಲ. ಈ ಕಥೆ ನಮ್ಮ ದೇಶದ ಜ್ವಲಂತ ಹಿಂದೂ-ಮುಸ್ಲಿಂ ಧಾರ್ಮಿಕ ಸಂಘರ್ಷದ ಹಿನ್ನೆಲೆಯಲ್ಲಿ ವಸ್ತು ಮತ್ತು ಕಥಾಸಂವಿಧಾನದ ದೃಷ್ಟಿಯಿಂದ ಕನ್ನಡದ, ಅಷ್ಟೆ ಅಲ್ಲ, ಭಾರತದ ಶ್ರೇಷ್ಠ ಕತೆಯಾಗಿದೆ. ನಿರ್ಗತಿಕರು ಗೂಡು ಕಟ್ಟಿಕೊಳ್ಳಲು ಹೆಣಗಾಡುತ್ತಿರುವಾಗ ಧರ್ಮದ ಹೆಸರಿನಲ್ಲಿ ಕೆಡಹುವ ವಕ್ರನಡೆಗಳು ಈ ದೇಶದ ಆಂತರಿಕ ಸತ್ವವನ್ನು ಅಲುಗಾಡಿಸುವ ಹುನ್ನಾರದಲ್ಲಿರುವುದು ಓದುಗರ ಅರಿವಿಗೆ ಬರುತ್ತದೆ.

ಬೊಳುವಾರರು ಅರಿತು ಕಥೆಯಲ್ಲಿ ಹೇಳುತ್ತಿರುವ ಧರ್ಮವು ದಾರ್ಶನಿಕ ಕವಿ ಡಿ.ವಿ.ಜಿ. ತಿಳಿಸಿದ ಧರ್ಮವಾಗಿದೆ : ''ಧರ್ಮ ಎಂದರೆ ಒಳ್ಳೆಯ ನಡವಳಿಕೆ– ಆತ್ಮದ ಮೊಗ್ಗಿನ ಅರಳಿಕೆ. ...ನಾವು ಹೇಗೆ ನಡೆದುಕೊಂಡರೆ ನಮ್ಮ ಸುತ್ತ ಮುತ್ತಣ ಯಾರ ಬಾಳಿಗೂ ಕೇಡಾಗದೆ, ಎಲ್ಲರ ಬಾಳೂ ಸೊಗಸುಗೊಂಡು, ನಮ್ಮ ಬಾಳೂ ಸೊಗಸಾಗುತ್ತದೆಯೋ ಅಂಥ ನಡವಳಿಕೆ ಧರ್ಮ.''

ಈ ದೇಶದಲ್ಲಿ ಹಿಂದೂಧರ್ಮ, ಕ್ರೈಸ್ತ ಧರ್ಮ, ಇಸ್ಲಾಂ ಧರ್ಮ ಮುಖ್ಯವಲ್ಲ, ಭಾರತ ಧರ್ಮ ಮುಖ್ಯ ಎಂದು ಸಾರುವ ಬೊಳುವಾರರು ಕನ್ನಡದ ಉತ್ತಮ ಕಥೆಗಾರರಾಗಿದ್ದಾರೆ. ಇವರ ಭಾರತ ಧರ್ಮ ಸಾಧಿಸಿರುವುದು ಸಾಧಾರಣ ಜನರ ಬದುಕಿನ ಪ್ರೀತಿ, ಜೀವಸಂಕಲ್ಪ ಮತ್ತು ಭಾರತದ ಐಕ್ಯತೆ.

**ಡಾ|| ಜಿ. ಕೃಷ್ಣಪ್ಪ**
ನಂ. ೨೨, 'ಶ್ರೀ ಗುರುದತ್ತನಿಲಯ', ೧ನೇ ಕ್ರಾಸ್, ನೇತಾಜಿನಗರ, ಮತ್ತಿಕೆರೆ, ಬೆಂಗಳೂರು - ೫೬೦ ೦೫೪



# ಸಾಮಾಜಿಕ ಪ್ರಜ್ಞೆ, ಜೈನಧರ್ಮ : ಇವುಗಳ ವಾಸನೆಯ ಹಿನ್ನೆಲೆಯಲ್ಲಿ

**ಯಾ**ವುದೇ ಸಾಂಸ್ಥಿಕ ಧರ್ಮ ಇಳಿಮುಖವಾದಾಗ ಅದು ಒಂದು ಬಗೆಯ ವಿಕೃತ ಕ್ರಿಯೆಯಲ್ಲಿ ತೊಡಗುತ್ತದೆ. ಬಹುವಾಗಿ ಇಂದಿನ ಎಲ್ಲ ಮತಧರ್ಮಗಳಿಗೂ ಈ ಮಾತು ಅನ್ವಯಿಸುತ್ತದೆ, ಜೈನಧರ್ಮಕ್ಕೂ ಅನ್ವಯಿಸುತ್ತದೆ. ಇರುವ ಧರ್ಮವನ್ನು ಸಾಂಸ್ಥಿಕವಾಗಿ ಇನ್ನಷ್ಟು ಗಟ್ಟಿಗೊಳಿಸುವ ಮಾರ್ಗವಾಗಿ ಈ ಬಗೆಯ ವರ್ತನೆಗಳು ಅನೇಕ ಮಠಮಾನ್ಯಗಳಿಂದ ಜರುಗುತ್ತಿವೆ.

ಕರ್ನಾಟಕದಲ್ಲಿ ಹತ್ತನೆಯ ಶತಮಾನದಲ್ಲಿ ಜೈನಧರ್ಮವು ಉಚ್ಛ್ರಾಯ ಸ್ಥಿತಿಯಲ್ಲಿದ್ದಾಗ ಅನೇಕ ಉತ್ತಮ ಕಾವ್ಯಗಳು ಹುಟ್ಟಿದವು. ಪಂಪ, ರನ್ನ, ಪೊನ್ನ ಮುಂತಾದವರು ಇದಕ್ಕೆ ಸಾಕ್ಷಿ. ಅದೇ ಧರ್ಮ ಹನ್ನೊಂದನೆಯ ಶತಮಾನದಿಂದೀಚೆಗೆ ಇಳಿಮುಖವಾಗತೊಡಗಿದಾಗ ನಯಸೇನ, ಬ್ರಹ್ಮಶಿವ, ವೃತ್ತವಿಲಾಸ ಮುಂತಾದವರ ಮೂಲಕ ವಿಕೃತ ಆಟಗಳಲ್ಲಿ ತೊಡಗಿತು. ಪರಮತ ನಿಂದನೆ ಮತ್ತು ಸ್ವಮತದ ಸಮರ್ಥನೆ ಹಸಿಹಸಿಯಾಗಿ ಕಾವ್ಯದ ಹೆಸರಿನಲ್ಲಿ ಕಲೆಹಾಕಿತು. ಅದರೊಡನೆಯೆ ಜೈನ ಸಾಂಸ್ಥಿಕ ತತ್ವ-ಪರಿಕಲ್ಪನೆಗಳ ವಿವೇಚನೆ (ಇದು ವಿವೇಚನಾರಹಿತವಾದುದು), ಮಂಡನೆ ಇತ್ಯಾದಿ ಸಮರೋತ್ಸಾಹದಲ್ಲಿ ನಡೆಯಿತು. 'ಸಮರ' ಎಂಬ ಪದ ಅಲ್ಲಿ ಬಳಕೆ ಯಾಗಲಿಲ್ಲ, ಅದರ ಅನ್ಯಮತಧರ್ಮಗಳು ಅಷ್ಟೇ ಕೆಟ್ಟು ನಿಂತಿದ್ದುವು. ಇವುಗಳ ಪರಸ್ಪರ ಕೆಸರೆರಚಾಟವನ್ನು ಬಿಂಬಿಸುವ ಕನ್ನಡ ಕಾವ್ಯ ಕೃತಿಗಳೂ ಲೆಕ್ಕದಲ್ಲಿ ಒಂದಷ್ಟು ಬೆಳೆದವು. ಈ ಕ್ರಿಯೆ ಮುಂದಿನ ಶತಮಾನಗಳಲ್ಲಿ ಅನೇಕ ಪಲ್ಲಟಗಳನ್ನು ಪಡೆದು ಕರ್ನಾಟಕದ, ಭಾರತದ ಚರಿತ್ರೆಯಲ್ಲಿ ಶಾಸನ ಧರ್ಮಕ್ಕಿಂತ ಸಾಂಸ್ಥಿಕ ಧರ್ಮವೇ ಅದರ ಶ್ವಾಸವೆಂಬಂತೆ ಸಾಬೀತು ಮಾಡಿದೆ. ಇದು ಎಲ್ಲ ಆಧುನಿಕ ಪೂರ್ವ ಜಗತ್ತಿನ ಹಣೆಬರಹ!

ಆಧುನಿಕ ಕಾಲಘಟ್ಟದಲ್ಲಿ ಸಾಂಸ್ಥಿಕ ಧರ್ಮಗಳ ಪ್ರತಿಷ್ಠಾಪನೆಗಿಂತ ಜಾತ್ಯತೀತ ಕಲ್ಪನೆಗಳ ಪ್ರತಿಷ್ಠಾಪನೆಗೆ ಹೆಚ್ಚು ಒತ್ತು ದೊರಕಿತು. ಆದ್ದರಿಂದಲೇ ಈ ಕಾಲಘಟ್ಟದಲ್ಲಿ ಭಾರತದ ಸಾಮಾಜಿಕ ಚರಿತ್ರೆ ಅಭೂತಪೂರ್ವ ಪಲ್ಲಟವನ್ನು ತೋರಿದ್ದು. ದುರದೃಷ್ಟವಶಾತ್ ಈ ನಡುವೆಯೂ ಅನೇಕಾನೇಕ ಸಾಂಸ್ಥಿಕ ಧರ್ಮಗಳು, ಅವುಗಳ ಬಸದಿಗಳು, ಮಠಮಾನ್ಯಗಳು, ಕೃಪಾಪೋಷಿತ ಸಾಹಿತಿಗಳು, ಕಲಾವಿದರು ಕೆಲವು ಲೌಕಿಕ ಆಮಿಷಗಳಿಗೆ ಒಳಗಾಗಿ ತಮ್ಮ ಮೂಲ ನೆಲೆಗೆ ಅಪಚಾರವಾಗುವ ನಿಟ್ಟಿನಲ್ಲಿ ಕಾರ್ಯಪ್ರವೃತ್ತರಾಗಿದ್ದಾರೆ. ಈಗಾಗಲೇ ಅಡ್ಡದಾರಿ ಹಿಡಿದಿರುವ ಸಾಂಸ್ಥಿಕ ಧರ್ಮವನ್ನು ನಿಜಧರ್ಮದ ನೆಲೆಯಲ್ಲಿ ಸರಿದಾರಿಗೆ ತರುವ ಬದಲು ಅದನ್ನು ಇನ್ನಷ್ಟು ಕೆಡಿಸಲು, ಅದರ ಮೂಲಕ ತಾವು ಇನ್ನಷ್ಟು ಕೆಡಲು, ಅಂತಿಮವಾಗಿ ಇವರ ಮೂಲ ಧೋರಣೆ ಮತ್ತು ಸಿದ್ಧಿ ಕೇವಲ ಒಂದು ಗುಂಪಿನ ಒಳಿತಿಗೆ ಮಾತ್ರವೇ ಹೊರತು ಒಟ್ಟು ಸಮಾಜದ ಒಳಿತಿಗಲ್ಲ ಎಂಬುದನ್ನು ಸಾಬೀತು ಮಾಡುತ್ತಿದ್ದಾರೆ. ಇಂತಹ ಕಿಲಾಡಿ ಸಾಹಿತಿಗಳು, ಕಲಾವಿದರು ಇರುವ ಮತ್ತು ಇವರಿಂದ ಮಾರ್ಗದರ್ಶನ ಪಡೆದ ಯಾವುದೇ ಧರ್ಮ ಮತ್ತು ಅದರ ಅನುಯಾಯಿಗಳಾಗಿ ಮುಗ್ಧ ಧಾರ್ಮಿಕರು ಇನ್ನಷ್ಟು ದಾರಿ ತಪ್ಪುವರೇ ಹೊರತು ತಾವಾಗಲೀ ಒಟ್ಟು ಸಮಾಜವನ್ನಾಗಲೀ ಸರಿದಾರಿಗೆ ತರುವ ಪರಿಸ್ಥಿತಿ ಬರುವುದೇ ಇಲ್ಲ. ಇಂತಹ ಪರಿಸ್ಥಿತಿ ಇಂದು ಭಾರತದ ಎಲ್ಲೆಡೆಯೂ ಎಲ್ಲ ಧರ್ಮಗಳಲ್ಲಿಯೂ ಕಾಣುತ್ತಿದೆ. ಇದರಲ್ಲಿ ತಾನೇನು ಕಮ್ಮಿ ಎಂಬಂತೆ ಜೈನಧರ್ಮವೂ ನಡೆಯುತ್ತಿದೆ. ಈ ಧರ್ಮದ ವಕ್ತಾರರು ಅದನ್ನು ಈ ದಾರಿಗೆ ಇನ್ನಷ್ಟು ಎಳೆಯುತ್ತಿದ್ದಾರೆ. ಇಂಥ ಪರಿಸ್ಥಿತಿ ಜೈನ ಸಾಂಸ್ಥಿಕ ಮತಧರ್ಮದ ಅನುಯಾಯಿಗಳು ವಿಚಾರ ಸಂಕಿರಣ ಒಂದರ ವಿಷಯವಾಗಿ, ಸಾಮಾಜಿಕ ಪ್ರಜ್ಞೆ ಎಂಬ ಕಲ್ಪನೆಯನ್ನು ತಮ್ಮ ಮತಧರ್ಮದೊಡನೆ ಬೆಸೆದು 'ಸಾಮಾಜಿಕ ಪ್ರಜ್ಞೆ ಮತ್ತು ಜೈನಧರ್ಮ' ಎಂದು ಕರೆದು, ಪಂಪ, ರನ್ನ ಮುಂತಾದ ಮಾನವತಾವಾದಿಗಳನ್ನು ಕೇವಲ ತಮ್ಮ ಮತಧರ್ಮದ ಪ್ರತಿನಿಧಿಗಳೊಡನೆ ಬಾಚಿಕೊಳ್ಳುವ ಪ್ರಯತ್ನ ಮಾಡಿದಾಗ ಅನುಭವವಾಗುತ್ತದೆ. ಈ ಆಕ್ರೋಶವನ್ನು ವಿಪರೀತ ಕ್ರಿಯಾಶೀಲರಾಗಿರುವ ಇನ್ನಿತರ ಮತಧರ್ಮ ಅನುಯಾಯಿ ಪೀಠಗಳಿಗೂ ಅನ್ವಯಪಡಿಸಬಹುದು. ಆದರೆ ಸಾಮಾಜಿಕ ಪ್ರಜ್ಞೆ ಎಂಬುದು ಯಾವೊಂದು ಧರ್ಮದ ಸ್ವತ್ತೂ ಅಲ್ಲ. ಅಷ್ಟೇಕೆ ಬಹುಶಃ ಮತಧರ್ಮಗಳು ಎಲ್ಲವೂ ಅದರಿಂದ ದೂರವಾದಂಥವೇ ಆಗಿವೆ.

ಸಾಮಾಜಿಕ ಪ್ರಜ್ಞೆಯೆಂಬುದು ವಿಶಾಲವಾದ ಪರಿಕಲ್ಪನೆಯಾಗಿದೆ. ಇದನ್ನು ಒಂದು ನಿಶ್ಚಿತ ಸಾಂಸ್ಥಿಕ ಧರ್ಮದೊಂದಿಗೆ ಇಟ್ಟರೆ ಇದರ ಘನತೆ ಆ ಧರ್ಮಕ್ಕೆ ಬರುವುದಿಲ್ಲ, ಬದಲಿಗೆ, ಆ ಮೂಲಕ ನಾವು 'ಸಾಮಾಜಿಕ ಪ್ರಜ್ಞೆ'ಯ ಕಲ್ಪನೆಯನ್ನು ಸಂಕುಚಿತವಾಗಿ ಗ್ರಹಿಸಿದಂತೆ ಆಗುತ್ತದೆ. ಇದರಿಂದ ಯಾವುದೇ ಬೌದ್ಧಿಕ ಲಾಭ ನಮಗಾಗಲೀ ಇಲ್ಲಿಯ ಧರ್ಮಕ್ಕಾಗಲೀ ಇಲ್ಲ. ನಿಜವಾದ ಸಾಮಾಜಿಕ ಪ್ರಜ್ಞೆ ಎಲ್ಲ ಧರ್ಮಗಳ ಆಚೆಗೆ ಬೆಳೆದು ನಿಲ್ಲುತ್ತದೆ. ಅಂತಹ ಪ್ರಜ್ಞೆ ಯಾವುದೇ ಮತಧರ್ಮಕ್ಕೆ ಇಲ್ಲ. ಅದು ಹೇಗಾದರೂ ಒಮ್ಮೆ ಪರಿಪೂರ್ಣವಾಗಿ ಸಿದ್ಧಿಗೊಂಡುಬಿಟ್ಟರೆ ಆಗ ಆ ಸಾಂಸ್ಥಿಕ ಧರ್ಮ ತನ್ನ ಕಟ್ಟಡವನ್ನು ತಾನೇ ಕೆಡವಿಕೊಳ್ಳುತ್ತದೆ. ಅಲ್ಲಿ ಬಯಲು ಏರ್ಪಡುತ್ತದೆ. ಈ ನಿಟ್ಟಿನಲ್ಲಿ ಚಿಂತಿಸಿದವರೇ ಜಗದ್ಗುರುಗಳಾಗಿರುವುದು. ಉಳಿದವರು ಜಗತ್ತಿನೊಳಗಿನ ಪ್ರತ್ಯೇಕ ಸಂಕುಚಿತ ಜಗತ್ತುಗಳ ಗುರುಗಳು ಮಾತ್ರವಾಗಿದ್ದಾರೆ.

ಈ ನಿಟ್ಟಿನಲ್ಲಿ ಪಂಪನ, ರನ್ನನ ಸಾಮಾಜಿಕ ಪ್ರಜ್ಞೆ ಮತಧರ್ಮಾತೀತವಾಗಿ ವಿಶಾಲವಾದುದಾಗಿ ಕಾಣುತ್ತದೆ. ಇವರು ಹುಟ್ಟಿನಿಂದ ಜೈನರಿರಬಹುದು. ಉಳಿದಂತೆ ಕವಿಗಳಾಗಿ, ದಾರ್ಶನಿಕರಾಗಿ ಒಂದಷ್ಟು ಗುರುತರವಾಗಿ ನಮ್ಮ ಆಲೋಚನೆಗೆ ಅರ್ಹರಾಗಿದ್ದಾರೆ. ಈ ನಿಟ್ಟಿನಲ್ಲಿ ಪಂಪನ ಸಾಮಾಜಿಕ ಪ್ರಜ್ಞೆ, ಕನ್ನಡ ಪ್ರಜ್ಞೆ ಮುಂತಾದವು ಸಾಂಸ್ಥಿಕ ಧರ್ಮಗಳ ಹಿಡಿತಕ್ಕೆ ಸಿಕ್ಕಿಲ್ಲವೆಂಬುದು ಹೆಗ್ಗಳಿಕೆಯ ವಿಚಾರವಾಗಿದೆ. ಇಂಥವರನ್ನು ಈಗಾಗಲೇ ಮತಾಂತರಕ್ಕೆ ಒಳಪಡಿಸುವ ಪ್ರಯತ್ನವನ್ನು ವಿವಿಧ ಮತೀಯ ಸಾಹಿತ್ಯ ಚರಿತ್ರೆಕಾರರು ಮಾಡಿದ್ದಾರೆ. ಇವರು ಇಲ್ಲಿಂದ ತಪ್ಪಿಸಿಕೊಂಡು ಹೋಗದಂತೆ ಅನೇಕರು ಇಂದಿಗೂ ವಿದ್ವತ್ ಖಡ್ಗವನ್ನು ಹಿಡಿದಿದ್ದಾರೆ. ಇದು ಈ ಕವಿಗಳಿಗೆ ಮಾಡುತ್ತಿರುವ ಅಪಚಾರವೋ ಅಲ್ಲವೋ ಸಂವೇದನಾಶೀಲ ಓದುಗರು ಇವರ ಕಾವ್ಯಗಳನ್ನು ಓದಿಯೇ ನಿರ್ಧರಿಸಬೇಕು. ಇವತ್ತು ಈ ಪ್ರಸ್ತಾವಿತ ಕವಿಗಳು ಗಟ್ಟಿಯಾಗಿ ನಿಲ್ಲಲು ಕಾರಣ ಇವರು ಯಾವುದೇ ಧರ್ಮಕ್ಕೆ ಅಂತಿಮವಾಗಿ ಆತುಕೊಳ್ಳದಿರುವು ದಾಗಿದೆ. ಇದು ಜಾತ್ಯತೀತತೆ ಆಗಿದೆ. ಇಂತಹ ಜಾತ್ಯತೀತ ಕವಿಗಳನ್ನು ಅವರ ನಿಜಧರ್ಮದಿಂದ ಇರುವ ಸಾಂಸ್ಥಿಕ ಧರ್ಮಕ್ಕೆ ಮತಾಂತರಕ್ಕೊಳಪಡಿಸಲು ಯಾರೂ ಪ್ರಯತ್ನಿಸಬಾರದು. ಅವರಿರುವ ನೆಲೆಯಲ್ಲೇ ಅವರನ್ನು ಅರಿಯುವ ಪ್ರಯತ್ನ ವಾಗಬೇಕು. ಈ ದಿಸೆಯಲ್ಲಿ ಇವರನ್ನು 'ಮಾನವಧರ್ಮ'ದ ಕವಿಗಳೆಂದು ಕರೆಯ ಬಹುದೇನೋ! ಆದರೆ ಹೀಗೆ ಕರೆಯಲು ಸಹ ನನಗೆ ಒಪ್ಪಿಗೆಯಿಲ್ಲ. ಏಕೆಂದರೆ 'ಮತಧರ್ಮ' ಎಂಬ ಪರಿಕಲ್ಪನೆಯೇ ಇವತ್ತು ಭ್ರಷ್ಟಗೊಂಡಿದೆ. ಹಾಗಾಗಿ ಈ ಕವಿಗಳನ್ನು ಕುರಿತ ಚರ್ಚೆಯಲ್ಲಿ ಅವರ ಹುಟ್ಟಿನ ಮತಧರ್ಮವೆಂಬುದು ನಿರ್ಣಾಯಕವಾಗಬಾರದಾಗಿದೆ.

ಹೀಗೆ ಸಾಮಾಜಿಕ ಪ್ರಜ್ಞೆ, ಸಾಮಾಜಿಕ ಕಳಕಳಿ ಮುಂತಾದ ಪರಿಭಾಷೆ, ಪರಿಕಲ್ಪನೆಗಳು ಆದರ್ಶವಾಗಬೇಕಾದ ಈ ಕಾಲದಲ್ಲಿ ಇವುಗಳನ್ನು ಹೈಜಾಕ್ ಮಾಡುವ, ಭ್ರಷ್ಟಗೊಳಿಸುವ ಯಾವುದೇ ಪ್ರಯತ್ನವನ್ನು, ಹುನ್ನಾರವನ್ನು ನಾವು ಸಾಮಾಜಿಕ ಜೀವಿಗಳಾಗಿ ವಿರೋಧಿಸಬೇಕಿದೆ. ಈ ನಿಟ್ಟಿನಲ್ಲಿ ಪಂಪನ ಕನ್ನಡ ಪ್ರಜ್ಞೆ ಜಾತ್ಯತೀತ ನೆಲೆಯಲ್ಲಿ ಪ್ರಕಟಗೊಂಡಿರುವ ಸ್ವರೂಪವನ್ನು ಸ್ಪಷ್ಟವಾಗಿ ಗ್ರಹಿಸಬೇಕು.

**ಡಾ|| ಕಾ. ವೆಂ. ಶ್ರೀನಿವಾಸಮೂರ್ತಿ**
ರೀಡರ್, ಕನ್ನಡ ಅಧ್ಯಯನ ವಿಭಾಗ, ಸ್ನಾತಕೋತ್ತರ ಕೇಂದ್ರ,
ಬೆಂಗಳೂರು ವಿಶ್ವವಿದ್ಯಾಲಯ, ಕೋಲಾರ - ೫೬೩ ೧೦೧

ಸುರೇಶ್ ಭಟ್ ಬಾಕ್ರಬೈಲ್

# ಅಣು ವಿದ್ಯುತ್ ಸ್ಥಾವರಗಳ ಸುರಕ್ಷಿತತೆ ಗಗನ ಕುಸುಮ

*ಎಲ್ಲ ಅಣು ವಿದ್ಯುತ್‌ಸ್ಥಾವರಗಳೂ ವಿಕಿರಣವನ್ನು ಹೊರಸೂಸುತ್ತವೆ. ಆ ವಿಕಿರಣದಲ್ಲಿ ಆಲ್ಫಾ ಕಣಗಳು, ಬೀಟಾ ಕಣಗಳು ಮತ್ತು ಗಾಮಾ ವಿಕಿರಣಗಳು ಮಾತ್ರವಲ್ಲದೆ ಫುಕುಶಿಮಾದ ಸ್ಥಾವರಗಳಿಂದು ಕಾರುತ್ತಿರುವಂತಹ ಸೀಷಿಯಂ-೧೩೭, ಅಯೊಡಿನ್-೧೩೧, ಸ್ಟ್ರಾನ್ಷಿಯಂ-೯೦ ಮುಂತಾದ ವಿಕಿರಣಶೀಲ ವಿಷಧಾತುಗಳು ಕೂಡ ಇರುತ್ತವೆ. ಈ ತೀವ್ರ ವಿಕಿರಣಶೀಲ ವಿಷವಸ್ತುಗಳ ಸಂಪರ್ಕದಲ್ಲಿ ಬಂದ ಜೀವರಾಶಿಗಳೆಲ್ಲವೂ ನಾಶಗೊಳ್ಳುತ್ತವೆ. ಹೀಗಾಗಿ ಈ 'ಪರಮಾಣು ತ್ಯಾಜ್ಯ'ಗಳೆಲ್ಲವನ್ನೂ, ಅವು ಅಣು ಸ್ಥಾವರಗಳಲ್ಲಿ ಹುಟ್ಟುವ ಕಾಲದಿಂದ ಆರಂಭಿಸಿ ಹೊರಸಾಗಿಸುವ ತನಕ, ಜೀವರಾಶಿಗಳೊಂದಿಗೆ ಸಂಪರ್ಕದಲ್ಲಿ ಬಾರದಂತೆ ಪ್ರತ್ಯೇಕವಾಗಿ ಇರಿಸಬೇಕಾಗುತ್ತದೆ. ಕೆಲವನ್ನು ಸಾವಿರಾರು ವರ್ಷಗಳ ಕಾಲ, ಇನ್ನು ಕೆಲವನ್ನು ಲಕ್ಷಗಟ್ಟಲೆ ವರ್ಷಗಳ ಕಾಲ.*

ಇತ್ತೀಚೆಗೆ ಸಂಭವಿಸಿದ ಭೀಕರ ಭೂಕಂಪನಕ್ಕೆ ಜಪಾನ್ ದೇಶವಿಡೀ ತತ್ತರಿಸಿಹೋಗಿದೆ. ಅಪಾರ ಸಂಖ್ಯೆಯ ಸಾವುನೋವುಗಳಾಗಿವೆ ಮತ್ತು ಆಸ್ತಿಪಾಸ್ತಿಗಳಿಗೆ ಹಾನಿಯಾಗಿದೆ. ಆದರೆ ಇವೆಲ್ಲವನ್ನೂ ಮೀರಿಸುವಂತಹ ಮಹಾದುರಂತವೆಂದರೆ ಫುಕುಶಿಮಾ ಅಣು ವಿದ್ಯುತ್‌ಸ್ಥಾವರಕ್ಕೆ ಬಂದೊದಗಿರುವ ವಿಪತ್ತು. ಫುಕುಶಿಮಾ ಸ್ಥಾವರದಿಂದ ಸೂಸುತ್ತಿರುವ ವಿಕಿರಣವನ್ನು ತಡೆಗಟ್ಟಿ ಅದು ಹೊರಕ್ಕೆ ಸೋರಿಹೋಗದಂತೆ ನೋಡಿಕೊಳ್ಳುವ ಯತ್ನಗಳಾಗುತ್ತಿವೆ. ಸ್ವಾಭಾವಿಕವಾಗಿ ಈ ಸಂದರ್ಭದಲ್ಲಿ ಎದ್ದಿರುವ ಪ್ರಶ್ನೆ ಏನೆಂದರೆ ಅಣು ವಿದ್ಯುತ್‌ಸ್ಥಾವರಗಳನ್ನು ಸುರಕ್ಷಿತವಾಗಿಸಲು ಸಾಧ್ಯವಿದೆಯೇ? ಉತ್ತರವೇನೆಂದರೆ ಇಲ್ಲ, ಎಂದೆಂದಿಗೂ ಸಾಧ್ಯವಿಲ್ಲ. ಅದೇಕೆಂದು ನೋಡೋಣ.

ಇದನ್ನು ಆರಂಭದಲ್ಲೇ ಸ್ಪಷ್ಟವಾಗಿ ತಿಳಿಹೇಳಿದ ವ್ಯಕ್ತಿ ಇನ್ಯಾರೂ ಅಲ್ಲ, ಅಮೆರಿಕಾದ ಅಣುಚಾಲಿತ ನೌಕಾಪಡೆಯ ಪಿತೃವೆಂದೇ ಪರಿಗಣಿಸಲ್ಪಟ್ಟಿರುವ ಆಡ್ಮಿರಲ್ ಹೈಮನ್ ರಿಕೋವರ್. ಆಡ್ಮಿರಲ್ ರಿಕೋವರ್ ಅಮೆರಿಕಾದ ಪ್ರಪ್ರಥಮ ಅಣು ವಿದ್ಯುತ್‌ಸ್ಥಾವರದ (ಶಿಪ್ಪಿಂಗ್‌ಪೋರ್ಟ್, ಪೆನ್ಸಿಲ್ವೇನಿಯ ರಾಜ್ಯ) ನಿರ್ಮಾಣಕಾರ್ಯದ ಮೇಲ್ವಿಚಾರಕನೂ ಆಗಿದ್ದವನು. ೧೯೮೨ನೇ ಇಸವಿಯಲ್ಲಿ ನಿವೃತ್ತನಾದ ಆಡ್ಮಿರಲ್ ರಿಕೋವರ್ ಬೈಜಿಕ ಶಕ್ತಿಯಲ್ಲಿ ಅಂತರ್ಗತವಾಗಿರುವ ಮಾರಕತೆಯ ಕಡೆಗೆ ಗಮನ ಸೆಳೆದು, ''ಬೈಜಿಕ ಶಕ್ತಿಯನ್ನು ಬಹಿಷ್ಕರಿಸಬೇಕು'' ಎಂದು ಒತ್ತಾಯಿಸಿದ್ದ. ಆತ ಅಂದು ಕಾಂಗ್ರೆಸ್‌ನ ಸಮಿತಿಯೊಂದಕ್ಕೆ ನೀಡಿದ್ದ ಹೇಳಿಕೆ ಗಮನಾರ್ಹವಾಗಿದ್ದು ಅದನ್ನಿಂದು ಮತ್ತೊಮ್ಮೆ ನೆನಪಿಸಿಕೊಳ್ಳುವ ಅಗತ್ಯವಿದೆ!

''ಈ ವಿಷಯವನ್ನು ನಾನೀಗ ತಾತ್ವಿಕ ದೃಷ್ಟಿಯಿಂದ ನೋಡುತ್ತಿರುವೆ. ಸುಮಾರು ೨೦೦ ಕೋಟಿ ವರ್ಷಗಳಷ್ಟು ಹಿಂದಿನ ಕಾಲಕ್ಕೆ ಹೋದರೆ ಆಗಿನ್ನೂ ಭೂಮಿ ರೂಪುಗೊಳ್ಳುತ್ತಿತ್ತು. ಆ ಪ್ರಕ್ರಿಯೆಯ ವೇಳೆ ಸ್ವಾಭಾವಿಕವಾಗಿ ನಡೆಯುತ್ತಿದ್ದ ಅಗಾಧ ವಿಕಿರಣ ಭೂಮಿಯ ತುಂಬ ತುಂಬಿತ್ತು. ಅದರ ಪ್ರಮಾಣ ಎಷ್ಟಿತ್ತೆಂದರೆ ಮೀನು ಅಥವಾ ಇನ್ಯಾವುದೇ ಪ್ರಾಣಿಯೂ ಬದುಕುಳಿಯುವುದು ದುಸ್ಸಾಧ್ಯವಿತ್ತು. ಮುಂದಿನ ಸುಮಾರು ೧೮೦ ಕೋಟಿ ವರ್ಷಗಳ ಅವಧಿಯಲ್ಲಿ ವಿಕಿರಣದ ಮಟ್ಟ ಕಡಿಮೆಯಾಗುತ್ತಾ, ಆಗುತ್ತಾ ಕೊನೆಗೊಮ್ಮೆ ಕೆಲವೊಂದು ಬಗೆಯ ಜೀವಪ್ರಭೇದಗಳು ಹುಟ್ಟಿ ಬೆಳೆಯಲು ಅನುವು ಮಾಡಿಕೊಡುವಂತಹ ವಾತಾವರಣ ನಿರ್ಮಾಣವಾಯಿತು. ...ಇದೀಗ ಬೈಜಿಕ ಶಕ್ತಿಯನ್ನು ಬಳಕೆ ಮಾಡಲು ಹೊರಡುವುದೆಂದರೆ ಅಂದು ಭೂಮಿಯ ಮೇಲೆ ಜೀವೋತ್ಪತ್ತಿಯಾಗಲೆಂದು ಪ್ರಕೃತಿ ಯಾವುದನ್ನು ನಾಶಪಡಿಸಿತೋ ಅದನ್ನು ನಾವೇ ಸೃಷ್ಟಿಸಿದಂತೆ. ಪ್ರತಿ ಬಾರಿಯೂ ಪರಮಾಣುವನ್ನೊಡೆದು ವಿಕಿರಣವನ್ನು ಉತ್ಪಾದಿಸುವಾಗ ಕರಾಳ ಶಕ್ತಿಯೊಂದು ಬಿಡುಗಡೆಗೊಳ್ಳುತ್ತದೆ. ಹಿಂದೆ ಭೂಮಿಯ ಮೇಲೆ ಜೀವದ ಹುಟ್ಟನ್ನು ತಡೆಗಟ್ಟಿದಂತಹ ಅದೇ ವಿಷಪದಾರ್ಥಗಳು ಮತ್ತೊಮ್ಮೆ ಉತ್ಪನ್ನವಾಗುತ್ತವೆ. ನನ್ನ ಅಭಿಪ್ರಾಯದಲ್ಲಿ ಇದು ಮಾನವಕುಲದ ಆತ್ಮವಿನಾಶಕ್ಕೆ ಕಾರಣವಾಗಲಿದೆ.'' – ಇಂತಹ ಒಂದು ಮುನ್ನೆಚ್ಚರಿಕೆಯನ್ನು ನೀಡಿದ್ದ ರಿಕೊವರ್ 'ಗ್ರೀನ್‌ಪೀಸ್' ಎಂಬ ಪರಿಸರವಾದಿ ಸಂಘಟನೆಯ ಸದಸ್ಯನೇನೂ ಆಗಿರಲಿಲ್ಲ. ಪರಂತು ಬೈಜಿಕ ಶಕ್ತಿಯ ಇತಿಹಾಸದಲ್ಲಿ ಓರ್ವ ಪ್ರಮುಖ ವ್ಯಕ್ತಿಯಾಗಿದ್ದ.

**ಅಣು ವಿದ್ಯುತ್‌ಸ್ಥಾವರಗಳಲ್ಲಿ ಏನು ನಡೆಯುತ್ತದೆ?**

ಅಣು ವಿದ್ಯುತ್‌ಸ್ಥಾವರದ ರಿಯಾಕ್ಟರ್‌ನೊಳಗೆ ಪರಮಾಣು ವಿದಳನ ಪ್ರಕ್ರಿಯೆ ನಡೆಯುತ್ತದೆ. ಸರಳವಾಗಿ ಹೇಳುವುದಾದರೆ ಪರಮಾಣುವನ್ನು ಒಡೆಯಲಾಗುತ್ತದೆ. ಹಾಗೆ ಒಡೆದಾಗ ವಿಕಿರಣ ಉತ್ಪನ್ನವಾಗುತ್ತದೆ. ಇಡೀ ಸಮಸ್ಯೆಯ ಮೂಲ ಅಡಗಿರುವುದೇ ಈ ವಿಕಿರಣದಲ್ಲಿ. ರಿಯಾಕ್ಟರ್‌ಗಳಲ್ಲಿ ಬಗೆಬಗೆಯ ವಿನ್ಯಾಸಗಳನ್ನು ಕಾಣಬಹುದು. ಅದು ಜನರಲ್ ಇಲೆಕ್ಟ್ರಿಕ್ ಕಂಪೆನಿ ನಿರ್ಮಿತ ಕುದಿಯುವ ನೀರಿನ ರಿಯಾಕ್ಟರ್ ಆಗಿರಬಹುದು (ಫುಕುಶಿಮಾದಲ್ಲಿರುವುದು ಇದೇ ವಿನ್ಯಾಸದ ರಿಯಾಕ್ಟರ್). ಅಥವಾ

ವೆಸ್ಟಿಂಗ್‌ಹೌಸ್ ಕಂಪೆನಿ ನಿರ್ಮಿತ ಒತ್ತಡದಲ್ಲಿರುವ ನೀರಿನ ವಿನ್ಯಾಸ ಇರಬಹುದು ಅಥವಾ ರಷ್ಯಾ ವಿನ್ಯಾಸದ ಚೆರ್ನೋಬಿಲ್‌ನಂತಹ ರಿಯಾಕ್ಟರ್ ಆಗಿರಬಹುದು. ಅಥವಾ ಅಮೆರಿಕಾದ ಶಕ್ತಿ ಕಾರ್ಯದರ್ಶಿ ಸ್ಟೀವನ್ ಚೂ ಮಾರಲೆತ್ನಿಸುತ್ತಿರುವ ''ನೂತನ, ಸುಧಾರಿತ'' ಅಣು ವಿದ್ಯುತ್‌ಸ್ಥಾವರಗಳಿರಬಹುದು. ಖುದ್ದು ಓರ್ವ ಅಣು ವಿಜ್ಞಾನಿಯಾಗಿರುವ ಸ್ಟೀವನ್ ಚೂ ಬೈಜಿಕ ತಂತ್ರಜ್ಞಾನಕ್ಕೆ ಎಲ್ಲಾ ಬಗೆಯ ಉತ್ತೇಜನವನ್ನು, ಅದೂ ಬಹಳ ಹುರುಪಿನಿಂದ, ನೀಡುತ್ತಿದ್ದಾನೆ.

ಭೂಗರ್ಭದಿಂದ ಹೊರತೆಗೆಯುವ ಯುರೇನಿಯಂನಲ್ಲಿ ಯುರೇನಿಯಂ-೨೩೮ ಮತ್ತು ಯುರೇನಿಯಂ-೨೩೫ ಎಂಬ ಎರಡು ಘಟಕಗಳಿರುತ್ತವೆ. ಅತ್ಯಧಿಕ ಪ್ರಮಾಣದಲ್ಲಿರುವ ಯುರೇನಿಯಂ-೨೩೮ ವಿದಳನಗೊಳ್ಳುವುದಿಲ್ಲವಾದರೆ ಮತ್ತೊಂದು ಘಟಕವಾದ ಯುರೇನಿಯಂ-೨೩೫ ವಿದಳನವಾಗಬಲ್ಲುದು. ವಿಕಿರಣಶೀಲತೆಯ ಪ್ರಮಾಣ ತುಂಬ ಕಮ್ಮಿ ಇರುವಂತಹ ಈ ಯುರೇನಿಯಂ ಅದಿರನ್ನು ಸ್ಥಾವರಗಳಿಗೆ ಸಾಗಿಸಲಾಗುತ್ತದೆ. ನಂತರ ಅಲ್ಲಿ ನಡೆಯುವ ಪ್ರಕ್ರಿಯೆಯಲ್ಲಿ ಅದರ ಮೇಲೆ ನ್ಯೂಟ್ರಾನ್‌ಗಳನ್ನು ಹಾಯಿಸಲಾಗುತ್ತದೆ. ಆಗ ಅದರಲ್ಲಿರುವ ಯುರೇನಿಯಂ-೨೩೫ ಒಂದು ಅಸ್ಥಿರ, ಅಸುರಕ್ಷಿತ, ವಿಕಿರಣಶೀಲ ವಿಷಧಾತುವಾಗಿ ಪರಿವರ್ತನೆಗೊಳ್ಳುತ್ತದೆ. ವಿದಳನದ ಉತ್ಪನ್ನಗಳಾದ ಇಂತಹ ವಿಷಧಾತುಗಳ ಸಂಖ್ಯೆ ನೂರಾರು. ಅಷ್ಟೇ ಸಂಖ್ಯೆಯ ಸ್ಥಿರ ಹಾಗೂ ಸುರಕ್ಷಿತ ಧಾತುಗಳೂ ಇವೆ. ಮಾನವ ಶರೀರ ಈ ಜೋಡಿ ಧಾತುಗಳ ನಡುವಿನ ವ್ಯತ್ಯಾಸಗಳನ್ನು ಗುರುತಿಸಲಾರದು. ಇನ್ನು ವಿದಳನಗೊಳ್ಳದ ಯುರೇನಿಯಂ-೨೩೮ ನ್ಯೂಟ್ರಾನ್‌ಗಳೊಂದಿಗೆ ಬೆರೆತು ಪ್ಲುಟೋನಿಯಂ-೨೩೯ ಎನ್ನುವ ಅತ್ಯಂತ ವಿಕಿರಣಶೀಲ ಧಾತುವಾಗಿ ಪರಿವರ್ತನೆ ಹೊಂದುತ್ತದೆ. ಪರಮಾಣು ವಿದಳನದ ಈ ಸಮಗ್ರ ಪ್ರಕ್ರಿಯೆಯ ವೇಳೆ ಉತ್ಪನ್ನವಾಗುವ ಶಾಖದಿಂದ ನೀರನ್ನು ಕುದಿಸಿ, ಉಗಿಯನ್ನು ಉತ್ಪಾದಿಸಿ, ವಿದ್ಯುಜ್ಜನಕ ಯಂತ್ರಗಳನ್ನು ತಿರುಗಿಸಲಾಗುತ್ತದೆ. ಹೀಗಾಗಿ ನೀರನ್ನು ಕುದಿಸಿ ಉಗಿಯನ್ನು ಉತ್ಪಾದಿಸಲು ಕಂಡುಹುಡುಕಿರುವಂಥ ವಿವಿಧ ವಿಧಾನಗಳ ಪೈಕಿ ಅತ್ಯಂತ ಅಪಾಯಕಾರಿಯಾದುದೆಂದರೆ ಅಣು ವಿದ್ಯುತ್‌ಸ್ಥಾವರವೆ ಆಗಿರುತ್ತದೆ.

ಎಲ್ಲ ಅಣು ವಿದ್ಯುತ್‌ಸ್ಥಾವರಗಳೂ ವಿಕಿರಣವನ್ನು ಹೊರಸೂಸುತ್ತವೆ. ಆ ವಿಕಿರಣದಲ್ಲಿ ಆಲ್ಫಾ ಕಣಗಳು, ಬೀಟಾ ಕಣಗಳು ಮತ್ತು ಗಾಮಾ ವಿಕಿರಣಗಳು ಮಾತ್ರವಲ್ಲದೆ ಫುಕುಶಿಮಾದ ಸ್ಥಾವರಗಳಿಂದು ಕಾರುತ್ತಿರುವಂತಹ ಸೀಷಿಯಂ-೧೩೭, ಅಯೊಡಿನ್-೧೩೧, ಸ್ಟ್ರಾನ್ಷಿಯಂ-೯೦ ಮುಂತಾದ ವಿಕಿರಣಶೀಲ ವಿಷಧಾತುಗಳು ಕೂಡ ಇರುತ್ತವೆ. ಈ ತೀವ್ರ ವಿಕಿರಣಶೀಲ ವಿಷವಸ್ತುಗಳ ಸಂಪರ್ಕದಲ್ಲಿ ಬಂದ ಜೀವರಾಶಿಗಳೆಲ್ಲವೂ ನಾಶಗೊಳ್ಳುತ್ತವೆ. ಹೀಗಾಗಿ ಈ 'ಪರಮಾಣು ತ್ಯಾಜ್ಯ'ಗಳೆಲ್ಲವನ್ನೂ, ಅವು ಅಣು ಸ್ಥಾವರಗಳಲ್ಲಿ ಹುಟ್ಟುವ ಕಾಲದಿಂದ ಆರಂಭಿಸಿ ಹೊರಸಾಗಿಸುವ ತನಕ, ಜೀವರಾಶಿಗಳೊಂದಿಗೆ ಸಂಪರ್ಕದಲ್ಲಿ ಬಾರದಂತೆ ಪ್ರತ್ಯೇಕವಾಗಿ ಇರಿಸಬೇಕಾಗುತ್ತದೆ. ಕೆಲವನ್ನು ಸಾವಿರಾರು ವರ್ಷಗಳ ಕಾಲ, ಇನ್ನು ಕೆಲವನ್ನು ಲಕ್ಷಗಟ್ಟಲೆ ವರ್ಷಗಳ ಕಾಲ.

**ಐತಿಹಾಸಿಕ ಹಿನ್ನೆಲೆ**

ಇಂತಹದೊಂದು ಮಾರಕ ವಿಧಾನದಲ್ಲಿ ವಿದ್ಯುತ್ತನ್ನು ಉತ್ಪಾದಿಸುವ ನಿರ್ಧಾರದ ಹಿಂದೆ ಕೆಲಸ ಮಾಡಿರುವುದು ವಿಜ್ಞಾನವಲ್ಲ, ರಾಜಕೀಯ ಮತ್ತು ಆರ್ಥಿಕ ಕಾರಣಗಳು. ಇದೆಲ್ಲ ಆರಂಭವಾದದ್ದು ದ್ವಿತೀಯ ಮಹಾಯುದ್ಧದ ಸಮಯದಲ್ಲಿ ಕೈಗೊಳ್ಳಲಾದ ಮ್ಯಾನ್‌ಹಟನ್ ಯೋಜನೆಯಿಂದ. ಅಂದು ಗುಟ್ಟಿನಲ್ಲಿ ಅಮೆರಿಕದ ಉದ್ದಗಲಕ್ಕೂ ಸ್ಥಾಪಿಸಲಾದ ಅನೇಕ ಪ್ರಯೋಗಾಲಯಗಳಲ್ಲಿ ವಿಜ್ಞಾನಿಗಳು ಅಣ್ವಸ್ತ್ರಗಳನ್ನು ತಯಾರಿಸಿದರು. ೧೯೪೫ನೇ ಇಸವಿಗಾಗುವಾಗ ಅಣ್ವಸ್ತ್ರಗಳ ಉತ್ಪಾದನೆಗಾಗಿ ಬಿಲಿಯಾಂತರ ಡಾಲರುಗಳನ್ನು ವ್ಯಯಿಸಲಾಯಿತು. ಅಣ್ವಸ್ತ್ರ ಉದ್ಯಮದಲ್ಲಿ ತೊಡಗಿಸಲಾಗಿದ್ದ ಜನರ ಒಟ್ಟು ಸಂಖ್ಯೆ ಸುಮಾರು ೬ ಲಕ್ಷದಷ್ಟಿತ್ತು.




ಅಂತಿಮವಾಗಿ ಜಪಾನ್‌ನ ಹಿರೋಷಿಮಾ, ನಾಗಾಸಾಕಿಗಳ ಮೇಲೆ ಎರಡು ಬಾಂಬ್‌ಗಳನ್ನು ಎಸೆಯಲಾಯಿತು. ಅಲ್ಲಿಗೆ ಯುದ್ಧ ಕೊನೆಗೊಂಡಿತು. ಬಳಿಕ ಮ್ಯಾನ್‌ಹಟನ್ ಯೋಜನೆಯ ಹೆಸರನ್ನು ಅಣು ಶಕ್ತಿ ಆಯೋಗ ಎಂಬುದಾಗಿ ಬದಲಾಯಿಸಿ ಇನ್ನಷ್ಟು ಅಣ್ವಸ್ತ್ರಗಳನ್ನು ತಯಾರಿಸಲಾಯಿತು.

ಲಾಸ್ ಅಲಾಮೊಸ್ ಎಂಬ ಅಣ್ವಸ್ತ್ರ ಪ್ರಯೋಗಶಾಲೆ ಕುರಿತ 'ಸಿಟಿ ಆಫ್ ಫಯರ್' ಎಂಬ ಪುಸ್ತಕದಲ್ಲಿ ಲೇಖಕ ಜೇಮ್ಸ್ ಕುನೆಟ್ಕಾ ಬರೆಯುತ್ತಾನೆ : ''ಮಹಾಯುದ್ಧ ನಡೆಯುತ್ತಿರುವವರೆಗೆ ಎಲ್ಲವೂ ತೃಪ್ತಿಕರವಾಗಿತ್ತು... ಆದರೆ ಯುದ್ಧ ಮುಗಿದಾಗ ಸಮಸ್ಯೆಗಳು ಶುರುವಿಟ್ಟುಕೊಂಡವು... ಎಲ್ಲರಿಗೂ ಕೆಲಸ ಕೊಡುವುದು ಕಷ್ಟಕರವಾಗಿ ಪರಿಣಮಿಸಿತು.'' ಮ್ಯಾನ್‌ಹಟನ್ ಯೋಜನೆಯಲ್ಲಿದ್ದ ಅನೇಕ ಮಂದಿ ವಿಜ್ಞಾನಿಗಳು ಮತ್ತು ಸರಕಾರಿ ಅಧಿಕಾರಿಗಳಿಗೆ ತಮ್ಮ ನೌಕರಿ ಇಲ್ಲಿಗೇ ಅಂತ್ಯಗೊಳ್ಳುವುದು ಬೇಡವಾಗಿತ್ತು. ಅದೇ ರೀತಿ ಯೋಜನೆಯಲ್ಲಿ ಕೆಲಸ ಮಾಡುತ್ತಿದ್ದ ವೆಸ್ಟಿಂಗ್‌ಹೌಸ್‌ನಂತಹ ಕಾರ್ಪೊರೆಟುಗಳಿಗೂ ತಮ್ಮ ಗುತ್ತಿಗೆ ಮುಂದುವರಿಯುವುದು ಬೇಕಾಗಿತ್ತು. ಈಗಾಗಲೆ ಸ್ಥಾಪಿತವಾಗಿದ್ದ ಅಣ್ವಸ್ತ್ರ ಉದ್ಯಮದ ವ್ಯವಸ್ಥೆಯನ್ನು ಏನಾದರೂ ಮಾಡಿ ಮುಂದುವರಿಸಿಕೊಂಡು ಹೋಗಬೇಕಿತ್ತು. ಅಂತಿಮವಾಗಿ ಪರ್ಯಾಯ ಉಪಯೋಗಗಳನ್ನು ಶೋಧಿಸುವ ಕಾರ್ಯಕ್ಕೆ ಚಾಲನೆ ನೀಡಲಾಯಿತು. ಅಣು ತಂತ್ರಜ್ಞಾನವನ್ನು ಇನ್ನೇನಾದರೂ ಉಪಯೋಗಕ್ಕಾಗಿ ಬಳಸಿಕೊಳ್ಳಬಹುದೇ ಎಂಬ ಬಗ್ಗೆ ಅನೇಕ ಜಿಜ್ಞಾಸೆಗಳು ನಡೆದವು :

* ನೆಲದಲ್ಲಿ ತೂತು ಕೊರೆಯಲು ಡೈನಮೈಟ್‌ಗೆ ಬದಲಿಯಾಗಿ ಉಪಯೋಗಿಸುವುದು
* ಪನಾಮಾ ಭೂಸಂಧಿಯಲ್ಲಿ ೧೨೫ ಅಣ್ವಸ್ತ್ರಗಳನ್ನು ಏಕಕಾಲಕ್ಕೆ ಸ್ಫೋಟಿಸಿ ಅಟ್ಲಾಂಟಿಕ್ ಮತ್ತು ಪೆಸಿಫಿಕ್ ಸಾಗರಗಳನ್ನು ಜೋಡಿಸುವ ಕಾಲುವೆಯೊಂದನ್ನು ನಿರ್ಮಿಸುವುದು
* ಆಹಾರ ಪದಾರ್ಥಗಳ ಮೇಲೆ ಅಣು ವಿಕಿರಣವನ್ನು ಹಾಯಿಸಿ ಮೇಲುನೋಟಕ್ಕೆ ವರ್ಷಗಟ್ಟಲೆ ಕೆಡದಂತೆ ಇರಿಸುವುದು
* ಅಣುಶಕ್ತಿ ಚಾಲಿತ ವಿಮಾನಗಳು (ಆದರೆ ಪೈಲೆಟ್‌ಗಳ ಸುರಕ್ಷತೆಗಾಗಿ ಬೇಕಾಗುವ ಸೀಸದ ಪರದೆಗಳ ತೂಕ ವಿಪರೀತವಾಗುವ ಕಾರಣಕ್ಕೆ ಈ ಯೋಜನೆಯನ್ನು ಕೈಬಿಡಲಾಯಿತು !)
* ಕೊನೆಯದಾಗಿ ಹೊಳೆದ ಉಪಾಯವೇ ಬೈಜಿಕ ಕ್ರಿಯೆಯಲ್ಲಿ ಉತ್ಪತ್ತಿಯಾಗುವ ಶಾಖದಿಂದ ನೀರನ್ನು ಕುದಿಸಿ ವಿದ್ಯುತ್ತನ್ನು ಉತ್ಪಾದಿಸುವುದು.

ವಿಕಿರಣವು ಮಾರಕವಲ್ಲ ಅಥವಾ ಕನಿಷ್ಠ ಅಪಾಯಕಾರಿಯೆಂದು ಬಿಂಬಿಸುತ್ತಾ ಬಂದ ಚೂನಂತಹ ಅಣು ವಿಜ್ಞಾನಿಗಳು ಬೈಜಿಕ ತಂತ್ರಜ್ಞಾನವನ್ನೇ ಮುನ್ನಡೆಸಲು ಯತ್ನಿಸಿದರು. ಪ್ರಸಕ್ತವಾಗಿ ಜಗತ್ತಿನಾದ್ಯಂತದಲ್ಲಿರುವ ಎಲ್ಲಾ ೪೪೩ ಅಣು ವಿದ್ಯುತ್‌ಸ್ಥಾವರಗಳನ್ನೂ ಮುಚ್ಚಬೇಕು ಮಾತ್ರವಲ್ಲ ಆಡ್ಮಿರಲ್ ರಿಕೋವರ್ ಸಾರಿರುವಂತೆ ಪರಮಾಣು ರಿಯಾಕ್ಟರ್‌ಗಳ ಮೇಲೆ ನಿಷೇಧ ಹೇರಬೇಕು. ಸೌರ, ಗಾಳಿ (ಇದು ಅಣು ವಿದ್ಯುತ್ತಿಗಿಂತಲೂ ಅಗ್ಗವಾಗಿದ್ದು ಪ್ರಸಕ್ತವಾಗಿ ಅತ್ಯಂತ ವೇಗದಲ್ಲಿ ಬೆಳೆಯುತ್ತಿರುವ ಶಕ್ತಿಮೂಲ), ಭೂಶಾಖ ಮತ್ತಿತರ ಪರ್ಯಾಯ ಶಕ್ತಿಮೂಲಗಳು ವಿಶ್ವದ ಅವಶ್ಯಕತೆಯನ್ನು ಪೂರೈಸಬಲ್ಲವೆಂದು ಪ್ರಮುಖ ಸಂಶೋಧನೆಗಳ ಮೂಲಕ ತಿಳಿದುಬಂದಿದೆ. ಅಣು ವಿದ್ಯುತ್ತಿನಂತೆ ಮಾರಣಾಂತಿಕವಲ್ಲದ ಈ ಸುರಕ್ಷಿತ, ನಿರ್ಮಲ ಮತ್ತು ನವೀಕರಿಸಬಹುದಾದ ಶಕ್ತಿಮೂಲಗಳನ್ನು ಸಂಪೂರ್ಣವಾಗಿ ಬಳಸಿಕೊಳ್ಳುವ ನಿಟ್ಟಿನಲ್ಲಿ ಕಾರ್ಯಪ್ರವೃತ್ತವಾಗಬೇಕಿದೆ.

**ಸುರೇಶ್ ಭಟ್ ಬಾಕ್ರಬೈಲ್**
೨-೧೦-೭೭೬, ಬಿಜೈ, ಮಂಗಳೂರು - ೫೭೫ ೦೦೪



# ಬರೀ ಎರಡು ರೆಕ್ಕೆ–ವಿಭಿನ್ನ ಸ್ತ್ರೀಲೋಕದ ಅನಾವರಣ

'ಬರೀ ಎರಡು ರೆಕ್ಕೆ' ರೆಕ್ಕೆ ಬಿಚ್ಚಿ ಹಾರಲು ತವಕಿಸುವ ಮೂವರು ಹೆಂಗಸರು – ಅರುಂಧತಿ, ಸರೋಜಿನಿ, ಸಣ್ಣಿಯರ ಕತೆ. ಮದುವೆಯ ನಂತರದ ಬದುಕಿನ ಬಗ್ಗೆ ಹಲವಾರು ನಿರೀಕ್ಷೆಗಳನ್ನಿಟ್ಟುಕೊಂಡು ನಂತರ ಅತ್ತೆ ಮನೆಯಲ್ಲಿನ ಉಸಿರುಗಟ್ಟಿಸುವ ವಾತಾವರಣದಿಂದ ನಿರಾಶಳಾದವಳು ಅರುಂಧತಿ. ಸಮಾಜದ ಕಟ್ಟುಕಟ್ಟಳೆಗಳನ್ನು ಮೀರಿ ಯಾರೇನೇ ಅಂದರೂ ತಲೆ ಕೆಡಿಸಿಕೊಳ್ಳದೆ ತನಗಿಷ್ಟ ಬಂದ ರೀತಿಯಲ್ಲೇ ಬದುಕಿದವಳು, ಬದುಕುವವಳು ಸರೋಜಿನಿ. ಓದು-ಬರಹವಿಲ್ಲದೆ ಕಸ ಮುಸುರೆ ತಿಕ್ಕುವವಳಾಗಿದ್ದರೂ ಸರೋಜಿನಿಯ ದಿಟ್ಟತನದ ಮತ್ತೊಂದು ರೂಪ ಸಣ್ಣಿ. ಓದುತ್ತಾ ಓದುತ್ತಾ ಈ ಮೂರೂ ಪಾತ್ರಗಳು ತಮ್ಮದೇ ಲೋಕದೊಳಗೆ ನಮ್ಮನ್ನು ಸೆಳೆದುಕೊಂಡು ಬೆರಗು ಹುಟ್ಟಿಸುತ್ತವೆ, ಓದಿಸಿಕೊಂಡು ಹೋಗುತ್ತವೆ.

ಕತೆ ನಡೆಯುವ ಪರಿಸರ ಕಾರವಾರ-ಅಂಕೋಲೆಯ ಸುತ್ತಮುತ್ತಲಿನ ಹಳ್ಳಿಗಳದ್ದು. ಕಳಸದ ಗುಡ್ಡೆ, ಸುಂಕಸಾಳೆ, ಕೊಪ್ಪ, ಮಾಸಿಕಟ್ಟೆ ಈ ಊರುಗಳು ನಿಜವಾಗಿಯೂ ಇವೆಯೋ ಇಲ್ಲವೋ ಗೊತ್ತಿಲ್ಲ, ಇದ್ದರೂ ಇಲ್ಲದಿದ್ದರೂ ಅಲ್ಲಿನ ಚಿತ್ರಣವನ್ನು ಸಣ್ಣ ಸಣ್ಣ ವಿವರಗಳೊಂದಿಗೆ ಕಟ್ಟಿಕೊಡುವಲ್ಲಿ ಲೇಖಕಿ ಗೆದ್ದಿದ್ದಾರೆ. ಇದಕ್ಕೊಂದು ಉತ್ತಮ ಉದಾಹರಣೆ, ಸಣ್ಣಿ ಕುಡುಕ ಗಂಡನ ಹೊಡೆತದಿಂದ ತಪ್ಪಿಸಿಕೊಳ್ಳಲು ಓಡಿ ಬಂದು ಗಿರಿಯಮ್ಮ ಗುಡ್ಡೆಯ ಮೇಲಿರುವ ಗಿರಿಯಮ್ಮ ದೇವಿ ಗುಡಿಯಲ್ಲಿ ಒಂದು ರಾತ್ರಿ ಕಳೆಯಬೇಕಾಗಿ ಬಂದ ಪ್ರಸಂಗ. ಕತ್ತಲು, ನಿಶ್ಶಬ್ದ, ನಿರ್ಜನ ಪ್ರದೇಶ, ಸಣ್ಣಗೆ ಉರಿಯುತ್ತಿರುವ ದೀಪ, ಬೀಸುವ ಗಾಳಿ, ದೇವಿಯ ಕಪ್ಪು ವಿಗ್ರಹ, ಅಲ್ಲಲ್ಲಿ ಬಾಡಿದ ಹೂವಿನ ರಾಶಿ... ಇಂಥ ವಿವರಗಳು ಆ ಸಂದರ್ಭದ ಭಾವವನ್ನು ಮೂಡಿಸುವಲ್ಲಿ ಯಶಸ್ವಿಯಾಗುವುದಲ್ಲದೆ ತಮ್ಮ ನೈಜತೆಯಿಂದ ಮನಸ್ಸಿನಲ್ಲಿ ಬಹುಕಾಲ ಉಳಿಯುತ್ತವೆ.



ಲೇಖಕರು : ಸುನಂದಾ ಪ್ರಕಾಶ ಕಡಮೆ
ಪ್ರಕಾಶಕರು : ಛಂದ ಪುಸ್ತಕ
ಬೆಂಗಳೂರು
ಪುಟಗಳು : ೨೨೪ ಬೆಲೆ : ರೂ. ೧೫೦

ಕತೆ ನಡೆಯುವ ಕಾಲದ ಬಗ್ಗೆ ಎಲ್ಲೂ ನೇರವಾದ ಪ್ರಸ್ತಾಪವಿಲ್ಲದಿದ್ದರೂ ಅದರಲ್ಲಿ ಬರುವ ವಿವರಣೆಗಳಿಂದ ಸುಮಾರು ಹದಿನೈದು-ಇಪ್ಪತ್ತು ವರ್ಷಗಳಷ್ಟು ಹಿಂದಿನದೆನಿಸುತ್ತದೆ. ಕಟ್ಟಿಗೆಯೊಲೆಯಲ್ಲಿ ಅಡುಗೆ ಮಾಡುವುದು, ಸೊಸೆ ಬರುತ್ತಾಳೆಂದು ಪಾಯಿಖಾನೆ ಕಟ್ಟಿಸಿದ್ದರ ಬಗ್ಗೆ ಬಾಯಕ್ಕ ಸಿಡುಕುವುದು, ದಿಗಂಬರ ತನ್ನ ಅಂಗಡಿಯಲ್ಲಿ ಎಸ್.ಟಿ.ಡಿ. ಬೂತ್ ಹಾಕಿಸುವುದಕ್ಕೆ ಯೋಚಿಸುವುದು ಇತ್ಯಾದಿ.

ಗಂಡ-ಮನೆ-ಸಂಸಾರದ ಬಗ್ಗೆ ಏನೇನೋ ಸುಖದ ಚಿತ್ರಗಳನ್ನು ಕಲ್ಪಿಸಿಕೊಂಡು ಮದುವೆಯಾಗುವ, ಮದುವೆಯ ನಂತರ ಇಷ್ಟೇನಾ ಬದುಕು ಎನಿಸಿ ಅಡಿಗಡಿಗೆ ನಿರಾಸೆಯನ್ನನುಭವಿಸುತ್ತ, ಆದರೂ ಬೇರೆ ಆಯ್ಕೆಗಳಿಲ್ಲದೆ ಹೊಂದಿಕೊಂಡು ಹೋಗಲೇಬೇಕಾದ ಅನಿವಾರ್ಯತೆಗೆ ಸಿಲುಕುವ ಹೆಣ್ಣಾಗಿ ಅರುಂಧತಿ ಕಾಡುತ್ತಾಳೆ. ''ಕನಸು ಕಲ್ಪನೆಯಲ್ಲಿ ಸವಿದಂತೆ ನವಿರಿಲ್ಲ, ಮಿದುವಿಲ್ಲ, ರೋಮಾಂಚನವಿಲ್ಲ, ಬರೀ ಬೆವರ ಗಂಧ, ಮುತ್ತಿಟ್ಟಾಗ ಎಂಜಲಿನ ಪರಿಮಳ, ಗಡಸು ಸ್ಪರ್ಶ, ಜೋರು ಒತ್ತು, ಬಿಗಿ ಹಿಡಿತ, ರಾಶಿ ಭಾರ, ಎಷ್ಟು ಹೊತ್ತಾದರೂ ಸರಿ ಒಂದು ಸಹ್ಯದ ಹಂತಕ್ಕೆ ಬರಲೇ ಇಲ್ಲ, ಎಲ್ಲ ಮೌನದಲ್ಲೇ ನಡೆವಾಗ ದಿಗಂಬರ, 'ಕಾಲು ಸಡಿಲ ಮಾಡು', ಅಂತ ಒಂದೇ ಮಾತು ಹೇಳಿದ್ದು ಕೇಳಿಸಿತು. ಅರುಂಧತಿಗೆ ಇವೆಲ್ಲ ಒಂದು ಬಾರಿ ಮುಗಿದುಬಿಟ್ಟರೆ ಸಾಕೆನಿಸಿಬಿಟ್ಟಿತು'' – ಈ ಸಾಲುಗಳು ಮದುವೆಯಾದ ಮಾರನೇ ದಿನ ರಾತ್ರಿಯೇ ಸೂಕ್ಷ್ಮ ಮನಸ್ಸಿನ ಅರುಂಧತಿಗೆ ಆಗುವ ನಿರಾಸೆಯನ್ನು ತುಂಬ ಚೆನ್ನಾಗಿ ಧ್ವನಿಸುತ್ತವೆ. ಮುಂದೆಯೂ ಕೂಡ ತಾನು ಹೇಳಿದ್ದೇ ನಡೆಯಬೇಕೆನ್ನುವ, ಕೂತಿದ್ದಕ್ಕೆ, ನಿಂತಿದ್ದಕ್ಕೆ ಕೊಂಕು ತೆಗೆಯುವ ಹಠಮಾರಿ ಅತ್ತೆಯ ವಿರುದ್ಧ ಸಿಟ್ಟು ಬಂದರೂ ಅದನ್ನು ಬಹಿರಂಗವಾಗಿ ಹೊರಗೆಡವಲಾಗದೆ, ಗಂಡನ ಎಷ್ಟೋ ನಡವಳಿಕೆಗಳು ಇಷ್ಟವಾಗದಿದ್ದರೂ ಸಹಿಸಿಕೊಂಡು ಒಳಗೊಳಗೇ ನರಳುತ್ತಾ ಕೊನೆಗೆ ಮಾತಾಡುವ ಶಕ್ತಿಯನ್ನೇ ಮರೆಯುವ/ಕಳೆದುಕೊಳ್ಳುವ ಅರುಂಧತಿಯ ಪಾತ್ರಸೃಷ್ಟಿ ತುಂಬ ಇಷ್ಟವಾಗುತ್ತದೆ. ನಂತರ ತನ್ನ ಪಾಡಿಗೆ ತಾನು ಕೆಲಸ ಮಾಡಿಕೊಂಡು ಎಂಥದೇ ಮಾತುಗಳಿಂದ ಚುಚ್ಚಿದರೂ ಅದಕ್ಕೆ ಪ್ರತಿಯಾಡದೆ, ಕೇಳಿದರೂ ಕೇಳದಂತೆ ಸುಮ್ಮನೆ ಮೌನವಾಗುಳಿಯುವುದರಿಂದ ಎದುರಿಗಿರುವವರಿಗೆ ಹಿಂಸೆಯಾಗಿ ಅದನ್ನವಳು ಪ್ರತಿಭಟನೆಯ ಅಸ್ತ್ರವಾಗಿ ಬಳಸುತ್ತಿದ್ದಾಳೆ ಎಂದೆನಿಸಿದಾಗ ಒಳಗೊಳಗೇ ಖುಷಿಯಾಗುತ್ತದೆ. ಮಾತು ಬಂದರೂ ಆಡುವುದಕ್ಕೆ ಅವಕಾಶವಿಲ್ಲದೆ ಮೂಕರಾಗಿರಬೇಕಾದ ನಮ್ಮ ಎಷ್ಟೋ ಹೆಣ್ಣುಮಕ್ಕಳ ತುಮುಲ ತಳಮಳಗಳಿಗೂ ಅರುಂಧತಿಯ ಪಾತ್ರ ಸಂಕೇತವಾಗುತ್ತದೆ.

ಇಂಥ ಅರುಂಧತಿಯ ನಾದಿನಿ ಸರೋಜಿನಿ ಮಾತ್ರ ಇವಳಂತೆ ಸುಮ್ಮನಿರುವವಳಲ್ಲ; ಅನ್ನಿಸಿದ್ದನ್ನು ಥಟ್ಟನೆ ಮುಖಕ್ಕೆ ಹೊಡೆದಂತೆ ಹೇಳುವವಳೇ. ಒಮ್ಮೊಮ್ಮೆ ಇವಳ ಮಾತಿನ ಹರಿತ ಬಾಯಕ್ಕನ ಜೋರಿನ ಬಾಯಿಯನ್ನು ನೆನಪಿಸುತ್ತಿರುತ್ತದೆ. ಎಷ್ಟಾದರೂ ಅವಳ ಒಬ್ಬಳೇ ಮಗಳಲ್ಲವೇ! ಎಲ್ಲಾ ಹೆಣ್ಣುಮಕ್ಕಳಂತೆ ವಯಸ್ಸಿಗೆ ಬಂದಾಗ ಮದುವೆಯಾಗಿ ಸಂಸಾರದ ಜಂಜಡಗಳಿಗೆ ಬಿದ್ದವಳಲ್ಲ ಈ ಸರೋಜಿನಿ; ಓದಿ ಟೀಚರ್ ಕೆಲಸಕ್ಕೆ ಸೇರಿಕೊಂಡವಳು. ತನಗೆ ಮೆಚ್ಚುಗೆಯಾಗದಿದ್ದರೆ, ಬೇಡ ಎಂದು ನೋಡಲು ಬಂದ ಗಂಡುಗಳನ್ನು ತಿರಸ್ಕರಿಸಿದ ಛಾತಿಯುಳ್ಳವಳು. ಕೊನೆಗೂ ಮದುವೆಯಾಗದಿದ್ದಾಗ ಅದಕ್ಕಾಗಿ ಕೊರಗದೆ ಹೆಣ್ಣುಮಗುವೊಂದನ್ನು ದತ್ತು ತೆಗೆದುಕೊಂಡು ಯಾವ ರೀತಿಯ ಅಂಜಿಕೆ-ಅಳುಕೂ ಇಲ್ಲದೆ ತನ್ನೊಂದಿಗೆ ಊರಿಗೇ ಕರೆದುಕೊಂಡು ಬಂದ ಹೆಣ್ಣುಮಗಳು. ಅವಳ ಹಿಂದೆ ಆಡಿಕೊಂಡವರ ಬಗ್ಗೆ, ''ಆಡುವವರಿಗೇನು ಸಾವಿರ ಹೇಳುತ್ತಾರೆ, ಬದುಕುವವರು ನಾವು'' ಎಂದು ನಿರ್ಲಕ್ಷಿಸುವ ಆಧುನಿಕ ಮನಸ್ಸಿನ ಪ್ರತಿರೂಪ. ಅವಳು ನಿಜವಾಗಿಯೂ ಮಗುವನ್ನು ದತ್ತು ತೆಗೆದುಕೊಂಡಿದ್ದಾಳೋ ಅಥವಾ ಅದು ಅವಳದೇ ಮಗುವೇ, ಎನ್ನುವುದು ಓದುಗರಿಗೆ ಬಿಟ್ಟಿದ್ದು. ದಿಗಂಬರ ಒಮ್ಮೆ ಅವರ ಮನೆಗೆ ಹೋಗಿದ್ದಾಗ ಹಾಲಿನ ಬಾಟ್ಲಿ, ಚಿಕ್ಕ ಮಗುವಿನ ಬಟ್ಟೆ ಕಂಡಿದ್ದು, ಕೇಳಿದಾಗ ಅದು ತನ್ನ ಸ್ನೇಹಿತರ ಮಗು ಎಂದಿದ್ದು ತೀವ್ರ ಕುತೂಹಲವನ್ನುಂಟುಮಾಡಿದ್ದರೂ ಕೊನೆಗೂ ಅವಳ ಬದುಕನ್ನು ನಿಗೂಢವಾಗಿಯೇ ಉಳಿಸಿದ್ದು ಕೊರತೆಯೆಂದೇನೂ ಅನ್ನಿಸುವುದಿಲ್ಲ. ಇನ್ನು ಸಣ್ಣಿ, ಕುಡುಕ ಗಂಡನಿಂದ ಮೊದಲು ಹೊಡೆಸಿಕೊಂಡರೂ ನಂತರ ಪ್ರತಿಭಟಿಸಿ ಬರೀ ಗಂಡನ ಕುಡಿತದ ಚಟವನ್ನಷ್ಟೇ ಬಿಡಿಸುವುದಲ್ಲದೆ ಊರಿನ ಸಾರಾಯಿ ಅಂಗಡಿಯನ್ನೇ ಮುಚ್ಚಿಸಿ ಸಮಸ್ಯೆಯ ಬೇರನ್ನೇ ನಾಶಮಾಡಿದ ದಿಟ್ಟೆ. ಆಳಾಗಿದ್ದರೂ ಅವಳ ವ್ಯಕ್ತಿತ್ವದಲ್ಲಿರುವ ಕೆಚ್ಚು, ಗಟ್ಟಿತನ, ಮುನ್ನುಗ್ಗುವ ಧೈರ್ಯ, ಹೊಸ ಅನುಭವಗಳಿಗೆ ತೆರೆದುಕೊಳ್ಳುವ ಸಾಹಸೀ ಪ್ರವೃತ್ತಿ ಯಜಮಾನನಾಗಿದ್ದರೂ ಗಂಡಸಾಗಿದ್ದರೂ ದಿಗಂಬರನಲ್ಲಿಲ್ಲ.

ಕತೆಯ ವಸ್ತು ಹಳ್ಳಿಯ ಬದುಕು, ಅದು ಮೇಲ್ನೋಟಕ್ಕೆ ತುಂಬ ಸರಳವಾಗಿ ಕಂಡುಬಂದರೂ ಅಲ್ಲಿನ ತಳಮಳಗಳು, ಜಂಜಡಗಳು, ರಾಜಕೀಯ, ರೀತಿ-ರಿವಾಜುಗಳು, ಸಂಬಂಧದ ಸ್ವರೂಪಗಳು, ನಿರೀಕ್ಷೆಗಳನ್ನು ತೀರಾ ಸಣ್ಣ ಸಣ್ಣ ವಿವರಗಳೊಂದಿಗೆ ತಣ್ಣಗೆ ದಾಖಲಿಸುತ್ತಾ ಹೋಗುತ್ತದೆ ಕತೆ. ಎಲ್ಲಿಯೂ ಉದ್ವೇಗವಿಲ್ಲ, ಆದರೂ ಓದಿಸಿಕೊಂಡು ಹೋಗುವುದರಲ್ಲಿ ಕತೆಯ ಶಕ್ತಿಯಿದೆ. ದಿಗಂಬರ ಮದುವೆಗೆ ಜವಳಿ ತರುವುದರಿಂದ ಹಿಡಿದು ಅರುಂಧತಿಯನ್ನು ಮದುವೆಯಾಗಿ ಮನೆಗೆ ಕರೆದುಕೊಂಡು ಬರುವವರೆಗಿನ ಸೂಕ್ಷ್ಮ ವಿವರಗಳು ಆಪ್ತವಾಗುತ್ತವೆ. ಆದರೆ ಕಾದಂಬರಿಯ ಆರಂಭದಲ್ಲಿ ದೇವು ತಂಗಿ ಮಾಲಿ ಕಾಣೆಯಾದಾಗಿನ ವಿವರಗಳು ಸ್ವಲ್ಪ ಜಾಸ್ತಿಯಾಗಿ ತಾಳ್ಮೆಯನ್ನು ಬೇಡುತ್ತವೆ. ಅಲ್ಲದೆ, ಅದು ಕಾದಂಬರಿಯ ಶುರುವಿನಲ್ಲೇ ಬರುವುದರಿಂದ ಕತೆ ಸ್ವಲ್ಪ ಡೀವಿಯೇಟ್ ಆದಂತೆನಿಸಿ ಸರಾಗ ಓದಿಗೆ ಅಡ್ಡಿಯಾಗುತ್ತದೆ. ಜೊತೆಗೆ ಅಲ್ಲಿನ ಭಾಷೆಯೂ ಸುಲಭವಾಗಿ ಅರ್ಥವಾಗದೆ ಓದುವುದಕ್ಕೆ ಕಿರಿಕಿರಿಯಾಗುತ್ತದೆ. ಇದೊಂದು ಕೊರತೆಯನ್ನು ನೀಗಿಕೊಂಡು ಮುಂದೆ ಹೋದೆವಾದರೆ ಹೊಸ ಪ್ರಪಂಚವೊಂದು ತೆರೆದುಕೊಂಡು ಅಲ್ಲಿನ ಪರಿಸರ, ಪಾತ್ರಗಳು ನಮ್ಮದಾಗುತ್ತವೆ.

**ಶ್ವೇತಾ ಹೊಸಬಾಳೆ**
ನಂ. ೨೩/೨೫, ಐಶ್ವರ್ಯ ಹೋಮ್ಸ್, ೧ನೇ 'ಎ' ಮುಖ್ಯರಸ್ತೆ
೧೫ನೇ ಅಡ್ಡರಸ್ತೆ, ಬಿ. ಕೆ. ನಗರ, ಯಶವಂತಪುರ, ಬೆಂಗಳೂರು - ೫೬೦ ೦೨೨





# ದುಡ್ಡಿನಲ್ಲೇನಿದೆ?

ನಮಗೆ ಯಾವುದು ಮುಖ್ಯ, ಎಂದು ಕೇಳಿದಾಗ ತಕ್ಷಣ ಹಣ ಮುಖ್ಯ ಎಂದು ಹೇಳುವ ಸ್ಥಿತಿ ಇಂದು ನಿರ್ಮಾಣವಾಗಿದೆ. 'ಹಣ' ಬದುಕನ್ನು ನಿಯಂತ್ರಿಸುತ್ತಿದೆ. ಹಣದಿಂದ ಅಧಿಕಾರ ಪಡೆಯಬಹುದು, ಬುದ್ಧಿವಂತರನ್ನು ಕೆಲಸಕ್ಕೆ ತೆಗೆದುಕೊಳ್ಳಬಹುದು, ಅನುಕೂಲಗಳನ್ನು ಖರೀದಿಸಬಹುದು ಎಂಬುದು ಸರ್ವೇಸಾಮಾನ್ಯ ಅಂಬೋಣವಾಗಿದೆ. ಹಣ, ಹಣ, ಹಣ ಎಂದು ಒಕ್ಕೊರಲಿಂದ ಸಮ್ಮತಿಸಿ ಧುಮ್ಮಿಕ್ಕಿ ಹೋಗುವವರೇ ಹೆಚ್ಚಿನ ಸಂಖ್ಯೆಯಲ್ಲಿ ಇದ್ದಾರೆ. ಬಂಗಾರ, ಬೆಳ್ಳಿ, ವಜ್ರ-ವೈಢೂರ್ಯ, ವಿಲಾಸಿ ವಸ್ತುಗಳು, ಅಮಲೇರಿಸುವ ಮಾದಕ ವಸ್ತುಗಳ ಹಿಂದೆ ಕೆಲಜನರು ಇದ್ದರೆ ಹಣಕ್ಕಾಗಿ ಬಹುಸಂಖ್ಯೆಯ ಜನರು ತುಡಿತ-ಮಿಡಿತ ಹೊಂದಿರುವುದು ಸಹಜವೇ ಆಗಿದೆ. ಹಣವು ಸಕಲವನ್ನೂ ನಿಯಂತ್ರಿಸುವ ಕೇಂದ್ರವಾಗಿ ಪ್ರಸಿದ್ಧಿ ಪಡಕೊಂಡಿದೆ. ಯೋಗ ಶಿಬಿರಗಳು, ಆಧ್ಯಾತ್ಮಿಕ ಗೋಷ್ಠಿಗಳು, ಸತ್ಸಂಗಗಳು ಉಳ್ಳವರನ್ನು ಸಮಾಧಾನ ಪಡಿಸಲು ಹುಟ್ಟಿಕೊಳ್ಳುತ್ತಲಿವೆ. ಗುಡಿ-ಗುಂಡಾರಗಳು, ಪುಣ್ಯಕ್ಷೇತ್ರಗಳು ಹಣಕಾಸಿನ ವ್ಯವಹಾರದಿಂದಲೇ ತುಂಬಿಕೊಂಡಿವೆ. ದೇವರುಗಳಲ್ಲಿಯೂ ಸಿರಿವಂತ ದೇವರ ಮಹಿಮೆ ಮೌಲಿಕವಾಗುತ್ತಿರುವುದು ಸತ್ಯದರ್ಶನವೇ ಆಗಿದೆ. ಪೂಜಾರಿ, ಪುರೋಹಿತರೂ ದುಡ್ಡಿದ್ದವರಿಗೆ ಪುಣ್ಯದ ಪಾಲು ನೀಡಲು ತುದಿಗಾಲಿನ ಮೇಲೆ ನಿಂತಿದ್ದಾರೆ.

ಹಣದ ಬಲದಿಂದ ಬೃಹತ್ ಕಟ್ಟಡಗಳು, ಕಾರ್ಖಾನೆಗಳು, ಬಹುರಾಷ್ಟ್ರೀಯ ಕಂಪನಿಗಳು ರಾರಾಜಿಸುತ್ತಲಿವೆ. ಮನುಷ್ಯನನ್ನು ತೀರ ಅಗ್ಗಗೊಳಿಸುವ, ಹೀನಾಯ ಶೋಷಣೆಗೆ ನೂಕುವ, ಯೋಚನೆಗೆ ದೂಡುವ ಈ ಹಣ ಮನುಷ್ಯ ಸಂವೇದನೆಯನ್ನು ನಿಃಶಕ್ತಿಗೊಳಿಸುತ್ತಿರುವುದು ಜಗತ್ತಿನೊಳಗೆ ಶುಭ ವಾರ್ತೆಯಾಗಿ ಉಳಿದಿಲ್ಲ. ಅಮಾಯಕರನ್ನು ಸುಲಿದು ಶೋಷಣೆಗೆ ಗುರಿ ಮಾಡುವ ಹಣವಂತರು ಎಂದೂ ಗುಣಗ್ರಾಹಿತ್ವಕ್ಕೆ ಮನ್ನಣೆ ಕೊಡದಿರುವುದಕ್ಕೆ ವಿಶೇಷ ಅಧ್ಯಯನದ ಅಗತ್ಯವಿಲ್ಲ. ಹಣ ಯಾವತ್ತೂ ಲಾಭಾಂಶ ಮತ್ತು ಹೆಚ್ಚಾಗುವಿಕೆಯನ್ನು ಕೇಂದ್ರೀಕರಿಸಿಕೊಂಡಿರುತ್ತದೆ. 'ಹಣ' ಗಳಿಕೆಗಾಗಿ ಮನುಷ್ಯರು ಎಂತಹ ನೀಚಕಾರ್ಯಕ್ಕೂ ಇಳಿಯುತ್ತಿದ್ದಾರೆ. ಈವತ್ತಿನ ಭಯೋತ್ಪಾದನೆಯನ್ನೇ ಉದಾಹರಣೆಯನ್ನಾಗಿ ತೆಗೆದುಕೊಳ್ಳಬಹುದಾಗಿದೆ. ಹಣ ಚೆಲ್ಲಿ ಮನುಷ್ಯನ ಜೀವಹರಣ ಮಾಡುವ ಕುತಂತ್ರ ಜಗತ್ತಿನಲ್ಲಿ ನಡೆಯುತ್ತದೆ. ನಾಗರಿಕತೆಯು ಬೆಳೆದಂತೆ ಕ್ರೌರ್ಯ ಹೆಚ್ಚುತ್ತಲಿದೆ ಮತ್ತು ಆರ್ಥಿಕ ಅಪರಾಧೀಕರಣ ಪ್ರತಿ ಮನೆಯ ಬಾಗಿಲಿಗೆ ತಲುಪಿದೆ. ಮನುಷ್ಯ ಬದುಕಬೇಕೆಂದು ಹಣ ಗಳಿಸುತ್ತಾನೆ; ಹಣ, ಹಣ ಎಂದು ಹಲುಬುತ್ತ ಮೂರು ಹೊತ್ತೂ ಚಿಂತೆಯೊಳಗೆ ಮುಳುಗಿರುತ್ತಾನೆ. ಈ ಚಿಂತೆ ಒಂದು ರೀತಿಯಲ್ಲಿ ಮಾನವನನ್ನು ಮಾನವೀಯತೆಯಿಂದ ದೂರ ನಿಲ್ಲಿಸುತ್ತದೆ. ಹಣ ಅಧಿಕಗೊಂಡಾಗ ಮನುಷ್ಯ ಮನುಷ್ಯನಾಗಿ ಉಳಿದಿರುವುದಿಲ್ಲ. ಹಣವಿದ್ದವರು ಏನು ಮಾಡಿದರೂ ನಡೆಯುತ್ತದೆಂದು ಭಾವಿಸಿಕೊಂಡಿರುವುದನ್ನು ಜಗತ್ತು ಮಾನ್ಯಮಾಡುತ್ತಲೇ ಬಂದಿದೆ. ಹಣದಿಂದ ಎಲ್ಲವನ್ನು ಅಳೆಯುವುದು ಅಸಾಧ್ಯ.

ಮನುಷ್ಯನನ್ನು ಅರಸುತ್ತ ಜಗತ್ತಿನ ತುಂಬ ತಿರುಗುವವ, ಅಜ್ಞಾತ ದೇಶಗಳ ಅನಾಥ ಮಕ್ಕಳಿಗೆ ಶಿಕ್ಷಣ ಕೊಟ್ಟು ವೃದ್ಧಾಪ್ಯದಲ್ಲಿ ಅವರೆಲ್ಲರ ಕುಟುಂಬಗಳಲ್ಲಿ ಅಜ್ಜನೆನಿಸಿಕೊಂಡು ಇರುವ ಸಹೃದಯ ಮನುಷ್ಯನೀತ. ಹಣ ಇಚ್ಛಿತ ಮನುಷ್ಯರನ್ನು ಹುಡುಕಿಕೊಡಲಾರದು.

ಮನುಷ್ಯ ಹಣದಿಂದ ಗೆದ್ದುಕೊಂಡ ಮಣಿಹಗಳಲ್ಲಿ ಮಾನವೀಯತೆ ಪ್ರಮುಖವಾಗುವ ಅಗತ್ಯತೆಯಿದೆ. ನಮ್ಮ ಬದುಕಿನ ಆಶೋತ್ತರಗಳನ್ನು ಪೂರೈಸುವ ಮತ್ತು ಇತರರ ಬದುಕಿನಲ್ಲಿ ಅಸಡ್ಡೆ - ಅಸಹ್ಯ ಹುಟ್ಟಿಸುವ ಪ್ರಮಾದಕ್ಕೆ ಇಳಿಯಬಾರದು. ದುಡ್ಡಿನಲ್ಲೇನಿದೆ, ಎಂಬ ಸಂಗತಿಯತ್ತ ಶಾಂತಚಿತ್ತದಿಂದ ಗಮನ ಹರಿಸಿದಾಗ ಅಲ್ಲಿ ದೀನದಲಿತರ ಬದುಕಿನ ಆಶಾಕಿರಣವಿದೆ, ಬದುಕಿನ ಮೂಲಭೂತ ಅವಶ್ಯಕತೆಗಳನ್ನು ಪೂರೈಸುವ ಮಮತೆಯಿದೆ. ಹಸಿದು ಕುಂತವರಿಗೆ ಅನ್ನ ನೀಡುವ ಶಕ್ತಿಯು ದುಡ್ಡಿನಲ್ಲಿಯೇ ಅಡಕವಾಗಿದೆ. ಜ್ಞಾನ ದಾಸೋಹ, ಅನ್ನ ದಾಸೋಹ, ಮೂಲಭೂತ ಅಗತ್ಯಗಳನ್ನು ಪೂರೈಸುವ ಹಂಬಲ ಎಲ್ಲವೂ ದುಡ್ಡಿನಲ್ಲಿದೆ. ದುಡ್ಡನ್ನು ಬದುಕಿನ ರಸಗಳಿಗೆಗಳಿಗೆ ವ್ಯಯಿಸುವ ಮನಸ್ಸು ನಮ್ಮದಾಗಬೇಕು. ನಮ್ಮ ಐಶ್ವರ್ಯದ ಅಹಂಮಿಕೆ ತೋರಿಸಲು, ಹಣ ವ್ಯಯವಾಗುತ್ತಿರುವುದು ರಾಷ್ಟ್ರಮಟ್ಟದ ದುರಂತ ಸಂಭವಿಸುವತ್ತ ಹೆಜ್ಜೆ ಇಟ್ಟಂತಾಗುತ್ತಿದೆ. ಇದು ಮನುಷ್ಯನ ವ್ಯಕ್ತಿತ್ವ ಅರಳದ ಸನ್ನಿವೇಶವಾಗಿದೆ.

'ದುಡ್ಡು' ಬದುಕಿನ ವ್ಯವಸ್ಥೆಯ ಭಾಗವಾಗಿದೆ. ಭಾರತವು ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿ ಒಂದಾಗಿದೆ. ನಮ್ಮ ದೇಶದಲ್ಲಿ ಶೇಕಡ ೨೧ರಷ್ಟು ಜನರು ಕಡುಬಡವರು ಇದ್ದಾರೆ. ಇವರ ಬದುಕಿಗೆ ಶಕ್ತಿ ತುಂಬುವ ಕಾರ್ಯವು ತುರ್ತಿನದ್ದಾಗಿದೆ. ಇದಲ್ಲದೆ ರೈತರು ಸಾಲದ ಶೂಲಕ್ಕೆ ಗುರಿಯಾಗಿ ಆತ್ಮಹತ್ಯೆಗೆ ಶರಣಾಗುತ್ತಿದ್ದಾರೆ. ಇಂದು ಅನ್ನ ಕೊಡುವ ರೈತ ಸಂಕಟಕ್ಕೆ ಸಿಲುಕಿದ್ದಾನೆ. ಸುಮಾರು ಹಳ್ಳಿಗಳು ಮೂಲಭೂತ ಸೌಕರ್ಯಗಳಿಂದ ವಂಚಿತಗೊಂಡಿವೆ. ಇದು ಒಂದು ಕಳವಳಕಾರಿ ಸಂಗತಿ ಎಂಬ ಅನಿಸಿಕೆಯು ಶ್ರೀಮಂತರಲ್ಲಿ ಬರಬೇಕಿದೆ. ನಮ್ಮ ಬ್ಯಾಂಕುಗಳು, ದೊಡ್ಡ ದೊಡ್ಡ ವಾಣಿಜ್ಯ ಕಂಪನಿಗಳು, ಉದ್ಯಮಿಗಳು, ಬಂಡವಳಿಗರು ಅಧಿಕ ಲಾಭಾಂಶವನ್ನೇ ಗುರಿಯಾಗಿರಿಸಿಕೊಂಡಿದ್ದಾರೆ. ಸಿನಿಮಾ ತಾರೆಯರು, ಕ್ರಿಕೆಟ್ ಆಟಗಾರರು, ರೂಪದರ್ಶಿಗಳು ಗಳಿಸುವ ಹಣವು ಶ್ರಮ ಸಂಸ್ಕೃತಿಯನ್ನು ಅಲ್ಲಗಳೆಯುವುದೇ ಆಗಿಲ್ಲವೆ ? ಕೂಲಿ, ಪಗಾರ, ವರಮಾನ, ಗೌರವಧನ, ಒಂದೊಂದು ಸ್ತರದಲ್ಲಿ ಇರುವ ಅಂತರ ಮಾನವೀಯತೆಗೆ ದೊಡ್ಡ ಹೊಡೆತ ಕೊಡುತ್ತಿದೆ. ಪ್ರಚಾರ, ಮಿಥ್ಯೆಯನ್ನು ಸತ್ಯವಾಗಿಸುವ ಬಂಡವಾಳಶಾಹಿ, ರೂಪದರ್ಶಿಗಳು ಜನಸಾಮಾನ್ಯರ ಬದುಕಿನೊಂದಿಗೆ ಚೆಲ್ಲಾಟವಾಡುತ್ತಿದ್ದಾರೆ.

**ಸ. ರಾ. ಸುಳಕೂಡೆ**
ನಂ. ೧೩೭೯, 'ಶಿವಪ್ರಸಾದ', ಶ್ರೀ ಬಸವೇಶ್ವರ ಲೇಔಟ್
ರಾಮತೀರ್ಥನಗರ, ಬೆಳಗಾವಿ - ೫೯೦ ೦೧೬

# ರವೀಂದ್ರನಾಥ ಠಾಕೂರರ ಶತಮಾನೋತ್ತರ ಸ್ವರ್ಣ ಜಯಂತಿ – 2011





ರವೀಂದ್ರ ಸಂಗೀತ :
ಶ್ರೀಮತಿ ಅಲೋಕ ದತ್ತ, ಶ್ರೀ ಸೋಮನಾಥ ದತ್ತ, ಡಾ॥ ಮೀರಾ ಚಕ್ರವರ್ತಿ

ಕರ್ನಾಟಕ ಸಾಹಿತ್ಯ ಅಕಾಡೆಮಿಯ ಸಹಯೋಗದೊಂದಿಗೆ ನವಕರ್ನಾಟಕ ಪ್ರಕಾಶನ ಸಂಸ್ಥೆಯು ತಾ. ೨೧-೮-೨೦೧೧ರಂದು ರವೀಂದ್ರರ ೧೫೦ನೇ ಹುಟ್ಟುಹಬ್ಬವನ್ನು ವೈವಿಧ್ಯಮಯ ಕಾರ್ಯಕ್ರಮಗಳೊಂದಿಗೆ ಆಚರಿಸಿತು. ರವೀಂದ್ರರ ಕುರಿತ ನಾಲ್ಕು ಕೃತಿಗಳ ಬಿಡುಗಡೆ, ರವೀಂದ್ರರ ೧೫೦೦ಕ್ಕೂ ಹೆಚ್ಚು ಕವಿತೆಗಳನ್ನು ಕನ್ನಡಕ್ಕೆ ಅನುವಾದಿಸಿದ ಶ್ರೀ ಜಿ. ರಾಮನಾಥ ಭಟ್ಟರಿಗೆ ಸನ್ಮಾನ, ರವೀಂದ್ರ ಸಂಗೀತ, ಗೀತಾಂಜಲಿ ನೃತ್ಯರೂಪಕ ಪ್ರದರ್ಶನ, ವಿಚಾರಗೋಷ್ಠಿ ಮಾತ್ರವಲ್ಲದೆ, ರವೀಂದ್ರರ ಜೀವನದ ವಿವಿಧ ಘಟ್ಟಗಳನ್ನು ಗುರುತಿಸುವ ಅಪರೂಪದ ಛಾಯಾಚಿತ್ರಗಳ ಮತ್ತು ಕನ್ನಡದಲ್ಲಿ ಪ್ರಕಟವಾಗಿರುವ ರವೀಂದ್ರರ ಕೃತಿಗಳ ಪ್ರದರ್ಶನ ಮುಂತಾದ ಕಾರ್ಯಕ್ರಮಗಳು ಜರುಗಿದವು.



**ಕೃತಿ ಲೋಕಾರ್ಪಣೆ :** (ಎ-ಬ) ಶ್ರೀ ಆರ್. ಎಸ್. ರಾಜಾರಾಮ್, ಡಾ॥ ಮೀರಾ ಚಕ್ರವರ್ತಿ, ಡಾ॥ ಕೆ. ಸಿ. ಶಿವಾರೆಡ್ಡಿ, ಡಾ॥ ಪ್ರಧಾನ ಗುರುದತ್ತ, ಡಾ॥ ಜಿ. ರಾಮಕೃಷ್ಣ, ಶ್ರೀ ಜಿ. ರಾಮನಾಥ ಭಟ್, ಡಾ॥ ಎಂ. ಎಚ್. ಕೃಷ್ಣಯ್ಯ, ಡಾ॥ ಲೀಲಾ ಅಪ್ಪಾಜಿ



ಶ್ರೀ ಜಿ. ರಾಮನಾಥ ಭಟ್ಟರಿಗೆ ಸನ್ಮಾನ







ಗೀತಾಂಜಲಿ ನೃತ್ಯ ರೂಪಕ –
ವಿಶ್ರುತ ಪ್ರದರ್ಶನ ಕಲಾಶಾಲೆ
ವಿದ್ಯಾರ್ಥಿಗಳಿಂದ
ನಿರ್ದೇಶನ : ಗುರು ಬಿ. ಕೆ. ವಸಂತಲಕ್ಷ್ಮಿ
ಮತ್ತು ವಿದ್ಯಾ ವೆಂಕಟರಾಮ್

Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Editor : Dr. G. Ramakrishna

**HOSATHU** Kannada Monthly / SEPTEMBER 2011 / Rs. 12
RNI Regd. KARKAN / 1999 / 614. Karnataka Regd. KRNA/BGE/7/2009-11
Licenced to post without prepayment. WPP No.14.
Posted at MBC, Bangalore GPO-560001 on the 28th of every month. (No. of Pages 64)